

ಶಿವಾನುಭವ ಚರವರ್ಯ, ಲಿಂಗನಾಯಕನ ಹಳ್ಳಿಯ

# ಶ್ರೀ ಚನ್ನವೀರ ವಿಲಾಸ

( ಪುರಾಣ )



ಕವಿ :

. ಪ್ರ. ನಿರುಪಾಧಿ ಸ್ವಾಮಿಗಳು, ಅಡವಿಸಿದ್ಧೇಶ್ವರಮಠ
ಮರೆಗುದ್ದಿ. ತಾ. ಜಮಖಂಡಿ.

೧೯೯೧

ಶ್ರೀ ಜಗದ್ಗುರು ಅನ್ನದಾನೀಶ್ವರ ಸಂಸ್ಥಾನಮಠ,
ಮುಂಡರಗಿ.

ಶ್ರೀ ಜಗದ್ಗುರು ಅನ್ನದಾನೀಶ್ವರ ಗ್ರಂಥಮಾಲೆಯ ೫೨ ನೆಯ ಪುಷ್ಪ.

ಮರಿಗುದ್ದಿ ನಿರುಪಾಧಿ ಸ್ವಾಮಿ ವಿರಚಿತ

ಂಗನಾಯಕನ ಹಳ್ಳಿಯ ಶಿವಾನುಭವ ಚರವರ್ಯ

# ಶ್ರೀ ಚನ್ನವೀರ ವಿಲಾಸ

ವೀರಶೈವಾಚಾರ್ಯ ಪರಮಶ್ರೀ ಜಂಗಮನ
ಚಾರು-ಸುವಿಲಾಸ ತಾಂಬೂಲ ರುಚಿಸುವದೆ
ಭೂರಿಯುಂಡವಗೆ ಅಡವೀಶ.



೧೯೯೧

ೀ ಜಗದ್ಗುರು ಅನ್ನದಾನೀಶ್ವರ ಸಂಸ್ಥಾನಮಠ, ಮುಂಡರಗಿ.

ಜಿ. ಧಾರವಾಡ.

ಶ್ರೀ ಚನ್ನವೀರ ವಿಲಾಸ

**Shri Channaveer Vilas**

ಪ್ರಕಾಶಕರು : ಶ್ರೀ ಜಗದ್ಗುರು ಅನ್ನದಾನೀಶ್ವರ ಸಂಸ್ಥಾನಮಠ, ಮುಂಡರಗಿ.

ಪ್ರಥಮ ಮುದ್ರಣ—೧೦೦೦ ಪ್ರತಿಗಳು





ಜಂಗಮನ ಸ್ಥಿತಿ ಶಬ್ದ ಸಂಗತಿಯ ಝೇಂಕಾರ
ಜಂಗುಳಿಯ ಕಿವಿಗೆ ಕೇಳದಿರಲೇನಾಯ್ತು
ಸಂಗ ಶರಣರಿಗಿದು ಅಡವೀಶ

ಷಟ್ಪದಿಯ ಸಾಗರದಿ ಚನ್ನವೀರ ವಿಲಾಸ
ಷಟ್ಪದೀ ಕೃತಿಯು ರಸವಿರದ ಕಾಷ್ಠವೆನೆ
ಕುಟ್ಟಿಕೊಡಿ ಚೂರ್ಣ ಅಡವೀಶ.

ಬಿಡುಗಡೆ—ದಿ. ೨೮-೧-೧೯೯೧
ಮೃಡಗಿರಿ ಶ್ರೀಮಠದ ಯಾತ್ರಾ ಮಹೋತ್ಸವದಂದು

ಬೆಲೆ—ಸಾದಾ ೨೦ ರೂ.ಗಳು
ಉತ್ತಮ ೨೫ ರೂ.ಗಳು



ಮುದ್ರಕರು :
ಕರ್ನಾಟಕ ಪ್ರಿಂಟಿಂಗ ಪ್ರೆಸ್
ಪ್ರೊ. ಮೋಹನ ವಿ. ಶಿದ್ಲಿಂಗ
ಬ್ಯಾಂಕ ರೋಡ, ಗದಗ.

# ವಿಲಾಸ ವಿವರಣ



## ವಿಷಯ ವಿಲಾಸ





# ಅರ್ಪಣ

ಶಿವಯೋಗ ಮಂದಿರದ ಚೇತನಮೂರ್ತಿ ಶರಣರಿಗೆ ಸ್ಫೂರ್ತಿ, ಹಾನಗಲ್ಲದ

## ಶ್ರೀ ಮ.ನಿ.ಪ್ರ. ಕುಮಾರ ಮಹಾಶಿವಯೋಗಿಗಳು



ನುಡಿ ನಿಧಿಗೆ–ಪ್ರೇರಣೆ ನಿತ್ಯ ನಡೆಗೆ
ಬೆಡಗು ಭಾಮಿನಿ ಬಾವನೆಯ ಮುಡಿಗೆ
ಕುಡಿಯೊಡೆದು ಹುಡಿಗುಂಪು ಹೊಡ್ವೆಕಡೆಗೆ
ಮೃಡ ಕುಮಾರನೆ ಇದೋ ನಿನ್ನಡಿಗೆ :
ನುಡಿ ಮಿಡಿ-ವಿಲಾಸ ಸತ್ಕಾವ್ಯ ತೊಡುಗೆ;
ಯೊಡಲು ನೀರಸ ನಿರೀಕ್ಷಿಸದುಡಿಗೆ
ಕುಡಿ, ನಿರುಪಾಧೀಶನಾಂಬಲಿಯಡಿಗೆ
ದೃಢತರಗೊಪ್ಪುವದೇ ! ಶ್ರೀ ಮುಡಿಗೆ

—ಕೃತಿಕರ್ತರು

# ಶ್ರೀವಾಣಿ

ವೀರಶೈವದ ಪಂಚಾಚಾರ ಷಟ್‌ಸ್ಥಲ ಮಾರ್ಗೋ
ದ್ಧಾರ ನಿಜಸುಖದ ಸಾರ ನಡೆನುಡಿ ಚನ್ನ
ವೀರ ಮದ್ಗುರುವೆ ಕೃಪೆಯಾಗು ||ಗು.ತ್ರಿ. ೩೩೩||

ಹದಿನೆಂಟನೆಯ ಶತಮಾನದ ಪರಮ ಶಿವಾನುಭಾವಿಗಳೂ, ಮಹಾತಪಸ್ವಿಗಳೂ, ಸಾಕ್ಷಾತ್ ಪರಶಿವನ ಸ್ವರೂಪಿಗಳೂ, ವೀರಶೈವ ಸಿದ್ಧಾಂತದಂತೆ ಅಷ್ಟಾವರಣವೆ ಅಂಗವಾಗಿಸಿಕೊಂಡು ಪಂಚಾಚಾರಗಳನ್ನು ಪ್ರಾಣವಾಗಿಸಿಕೊಂಡು, ಷಟ್‌ಸ್ಥಲ ಮಾರ್ಗದಲ್ಲಿ ಮುನ್ನಡೆದು ಷಟ್‌ಸ್ಥಲವನ್ನು ಪುನರುದ್ಧಾರಗೈದವರು ಲಿಂಗನಾಯಕನಹಳ್ಳಿಯ ಪರಮ ಜಂಗಮ ಶ್ರೀ ಚನ್ನವೀರ ಮಹಾಸ್ವಾಮಿಗಳು. ಇವರು ಸಚ್ಚಿದಾನಂದ ಸ್ವರೂಪರೂ, ಸತ್ಕ್ರಿಯಾ ಸುಜ್ಞಾನ ಪ್ರಕಾಶಕರೂ, ಭಕ್ತರಂತಸ್ತಿಮಿರವ ಕಳೆವಧಿನಾಥರೂ, ಮುಕ್ತಿ ಮಾರ್ಗವನ್ನು ತೋರಿಸುವಲ್ಲಿ ಪ್ರಬುದ್ಧರೂ, ವೀರಶೈವ ನಡೆ-ನುಡಿಯೊಂದಾದ ಶಿವಯೋಗ ಬಲ್ಲಿದರೂ, ಲಿಂಗಭೋಗೋಪಭೋಗಿಗಳೂ, ಪರತತ್ತ್ವದಾಚರಣೆಯ ನಿಜಮರ್ಮವನರಿತು ವೀರಿದಾಚರಣೆಯುಳ್ಳವರೂ, ವೀರಶೈವ ಮಹಾತತ್ವವನ್ನು ಯಥಾವತ್ತಾಗಿ ಬೋಧಿಸುವ ಮಹಾಗುರುಗಳೂ, ಲಿಂಗಕಿರಣದೊಬ್ಬುಳಿಯ ಸುಜ್ಞಾನಚಿಜ್ಜ್ಯೋತಿಸ್ವರೂಪಿ ಪರಮ-ನಿರಂಜನ-ಜಂಗಮ-ಪುಂಗವರಾಗಿದ್ದರೆಂದರೆ ಅತಿಶಯವೇನಲ್ಲ.

ಪರಮ ಪೂಜ್ಯ ಚನ್ನವೀರ ಮಹಾಸ್ವಾಮಿಗಳು ಅನುಷ್ಠಾನಗೈದ ತಾಣವೆ ಲಿಂಗನಾಯಕನ ಹಳ್ಳಿಯು. ಇದು ಪರಮ ಜಂಗಮ ಕ್ಷೇತ್ರವೆನಿಸಿತು. ಶಿವಾನುಭವದ ಮಹಾಕೇಂದ್ರವೆನಿಸಿತು. ತುಂಗಭದ್ರಾ ತೀರದಲ್ಲಿ ಮೆರೆಯುವ ಈ ಕ್ಷೇತ್ರ ಅವಿಮುಕ್ತ ಕ್ಷೇತ್ರವಾಯಿತು. ಇಂದಿಗೂ ಇದು ನೈಜ ಜಂಗಮ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ. ನಿರಂಜನ ತತ್ವವನ್ನು ತಿಳಿಸುತ್ತದೆ. ಜಂಗಮ ಜ್ಯೋತಿಯಾಗಿ ಅಜ್ಞಾನ ಕತ್ತಲೆಯನ್ನು ಕಳೆದು ಶರಣ ಸಂತತಿಯನ್ನು ಬೆಳೆಸುವಲ್ಲಿ ಶ್ರೀಗಳ ಪಾತ್ರ ಅಪಾರವಾಗಿತ್ತು. ಅವರ ಪರಿಸರದಲ್ಲಿ ಅನೇಕ ಹರಗುರುಚರ ಮೂರ್ತಿಗಳು, ಸ್ವಾಮಿಗಳುಶರಣರು, ಶರಣತ್ವದ ನಿಜ ನಿಲವನ್ನು ನಿಶ್ಚಯಿಸಿಕೊಂಡರು ಇವರಲ್ಲಿ ಬನ್ನಿಮಟ್ಟಿ ಚನ್ನಪ್ಪ, ಹೊಳಲಿನ ಲಿಂಗಪ್ಪ ಮೈಲಾರದ ಚನ್ನಪ್ಪ ಹಾಗೂ ಬಸವಲಿಂಗ ಶರಣರು ಪ್ರಮುಖರು ಬಸವಲಿಂಗ ಶರಣರ ಸಾಹಿತ್ಯ ಸಂಪತ್ತಿನಿಂದಲೇ ಚನ್ನವೀರ ಮಹಾಸ್ವಾಮಿಗಳು ಅಮರರಾಗಿದ್ದಾರೆ. ಚಿರಂಜೀವಿ ಜಂಗಮರೆನಿಸಿದ್ದಾರೆಂದರೆ ಆಶ್ಚರ್ಯವೇನಲ್ಲ.

ಕಾಲನ ಗರ್ಭದಲ್ಲಿ ಅದೆಷ್ಟೋ ಸಂತ ಮಹಾಂತರು ಮರೆಯಾಗಿದ್ದಾರೆ. ಅಳಿವಿಲ್ಲದ ಜ್ಞಾನಭಂಡಾರದಿಂದಲೇ ಸಾಮಾನ್ಯವಾಗಿ ಬೆಳಕು ಬೀಳುತ್ತದೆ. ಸ್ವತಃ ಜ್ಞಾನಿಗಳಾಗಿದ್ದರೂ ಕೃತಿಯಿಲ್ಲದೆ ಬೆಳಕು ಕಾಣಬರುವದಿಲ್ಲ. ಚನ್ನವೀರ ಶಿವಯೋಗಿಗಳು

ಮಹಾಶಿವಾನುಭಾವಿಗಳು. ಆದರೆ ಅವರು ಸಾಹಿತ್ಯ ಬರೆಯಲಿಲ್ಲ. ಅದನ್ನು ಅವ ಶಿಷ್ಯ ಬಸವಲಿಂಗ ಶರಣರು ಕಾರ್ಯಗತಗೊಳಿಸಿದರು. ಗುರೂಪದೇಶವನ್ನು ಇತರ ತಲುಪುವಂತೆ ಉಪಕಾರ ಮಾಡಿದರು. ಗುರುಗಳ ದಿವ್ಯ ಸ್ವರೂಪವನ್ನು ತನ್ನ ಸಾಹಿತ್ಯ ದಿಂದ ಸಾಕ್ಷಾತ್ತಾಗಿ ದರ್ಶನ ಮಾಡಿಸಿದರು. ಆದರೂ ಅವರ ಚರಿತ್ರೆ ಪ್ರತ್ಯೇ ವಾಗಿರಲಿಲ್ಲ, ಅದನ್ನು ಮನಗಂಡು ೧೯೮೮ರಲ್ಲಿ ಚನ್ನವೀರ ಶಿವಯೋಗಿಯ ಜೀವನ ಚಿತ್ರ ವನ್ನು ಸಂಕ್ಷಿಪ್ತವಾಗಿ ಸಂಗ್ರಹಿಸಿ ಪ್ರಕಟಿಸಲಾಯಿತು.

ಉನ್ನತಾನುಭಾವಿಯಾದ ಬಸವಲಿಂಗ ಶರಣರು ಶಾಪಗ್ರಸ್ತರಾದರೆಂಬುದ ಸತ್ಯವಲ್ಲ. "ಬಸಪ್ಪ-ಮುಸಪ್ಪ"ನೆಂಬ ಶಬ್ದಸಾಮ್ಯದಿಂದ ಕಲ್ಪಿಸಿಕೊಂಡಿದ್ದಾರೆ. "ಗುರು ಕೃಪೆಯಾಗು" ಎಂಬುದರಿಂದ ಅವರು ಹಾಗೆ ಪ್ರಾರ್ಥಿಸಿರಬೇಕೆಂಬ ಕಲ್ಪನೆ ಮಾಡಿದ್ದಾ ಅವರ ಕೃತಿಯಲ್ಲಿ ಎಲ್ಲೂ ಆ ಸನ್ನಿವೇಶ ಕಾಣಬರುವದಿಲ್ಲ. ಶಾಪಗ್ರಸ್ಥನಾದವನ "ಗುರುಕರುಣ ತ್ರಿವಿಧಿ"ಯಂಥ ವೀರಶೈವ ದರ್ಶನವನ್ನು ಬರೆಯಲಾರನು. ಅನುಭಾವ ನಿಲವನ್ನು ಬೀರಲಾರನು.

ಬಸವಲಿಂಗ ಶರಣರು ಹರದ ವೃತ್ತಿಯಲ್ಲಿದ್ದರೂ, ಹರನ ಅನುಭವವನ್ನು ಪಡೆದಿದ್ದರು ಶಿವನಿಗಿಂತಲೂ ಶಿವಶರಣನೇ ಅಧಿಕನೆಂಬುದನ್ನು ನಿರ್ಭೀತಿಯಿಂ ವೈಚಾರಿಕವಾಗಿ ಪ್ರತಿಪಾದಿಸಿದ್ದಾರೆ. ಇವರ-ಗುರುಕರುಣ ತ್ರಿವಿಧಿಯಲ್ಲಿ "ವೀರಶೈ ದಾರ್ಶನಿಕ ಸಿದ್ಧಾಂತ"ವನ್ನು ನಿರೂಪಿಸಿದ ಮೇಲೆ ಅದರ ನೈಜವಾದ ಸ್ವರೂ ಬಹುಜನರಿಗೆ ತಿಳಿಯುವಂತಾಯಿತು. "ಶ್ರೀ ಚನ್ನವೀರ ವಿಲಾಸ"ವನ್ನು ರಚಿಸಲು ಕೃತಿಗಳೇ ಸಹಕಾರಿಯೆಂಬುದನ್ನು ಕವಿಗಳೂ ನೆನೆದಿದ್ದಾರೆ. ವಿಜಾಪುರ ಜಿಲ್ಲೆ ಜಮಖಂಡಿ ತಾಲೂಕಿನ ಮರೆಗುದ್ದಿಯ ವಿರಕ್ತ ಮಠದ ಶ್ರೀ ನಿರುಪಾಧಿ ಸ್ವಾಮಿಗ ಪಂಡಿತರು, ಪದವಿಧರರು. ಶರಣ ಸಾಹಿತ್ಯಕ್ಕಿಂತ ಹೆಚ್ಚಾಗಿ ವೇದಾಂತ ವಿಚಾರದ ನಿಷ್ಣಾತರಾಗಿದ್ದರು. ಶ್ರೀ ಸನ್ನಿಧಿಯ ಸಂಪರ್ಕದಿಂದಾಗಿ, ಶರಣರ ಕೃತಿಗಳನ ಅಧ್ಯಯನ ಮಾಡಿ ಶರಣ ತತ್ವವನ್ನು ರಚಿಸುವ ಹಂಬಲ ಬೆಳೆದಿದೆ. ತಮ್ಮ ದಾಸೋ ಕಾಯಕದಲ್ಲೂ ಸಾಹಿತ್ಯ ಸೃಜಿಸುವ ತವಕ ಹೆಚ್ಚಿದೆ. "ಗಣೇಶ ಪುರಾಣ"ವನ್ನು ಬರೆ ಇತರ ಕೃತಿಗಳನ್ನು ತಯಾರಿಸಿದ್ದಾರೆ. ಲಿಂಗನಾಯಕನ ಹಳ್ಳಿಯ ಪೂಜ್ಯರ ಚರಿ ಯನ್ನು ಭಾಮಿನಿ ಷಟ್‌ಪದಿಯಲ್ಲಿ ರಚಿಸಲು ಇಚ್ಛಿಸಿದಾಗ ನಮಗೂ ಸಂತಸವಾಯಿತ ಎರಡು ಮೂರು ಸಲ ತೋರಿಸಿ ವಿಷಯವನ್ನು ಸಂಪಡಿಸಿದರು. ೧೯೮೮ರಲ್ಲಿಯೇ ಕೃತಿ ತಯಾರಾಗಿ ಶ್ರೀಮಠದ ಜಾತ್ರಾಮಹೋತ್ಸವ ಸಂದರ್ಭದಲ್ಲಿ ಸದ್ಯದ ಲಿಂ ನಾಯಕನ ಹಳ್ಳಿಯ ಪೂಜ್ಯರ ಅಧ್ಯಕ್ಷತೆಯಲ್ಲಿ ಪ್ರವಚನ ಪಟು ಘೊಡಗೇರಿ ಶ್ರೀಗಳಿ ಪುರಾಣ ಪ್ರವಚನ ಮಾಡಿಸಿ ಜನಮನಕ್ಕೆ ಶಿವಯೋಗಿಯ ಸಂದೇಶವನ್ನು ಮುಟ್ಟಿ ಲಾಯಿತು. ಜೀವನಾದರ್ಶವನ್ನು ಬೋಧಿಸಲಾಯಿತು.

ವರುಷ ವರುಷಕ್ಕೆ ಮುದ್ರಣದ ವೆಚ್ಚ ಹೆಚ್ಚಾಗುವ ಸಂದರ್ಭದಿಂದಾಗಿ ಇದನ್ನು ಗ್ರಂಥಸ್ಥಗೊಳಿಸಲು ವಿಲಂಬವಾಗಿದೆ. ನಾಡಿನಲ್ಲಿ ಶಿರಿವಂತಿಕೆಯಿದ್ದರೂ ಆಡಂಬರದ ಪ್ರಚಾರಗಳಿಗೆ ಹಣ ನೀಡುವವರು ಬಹಳ. ಏನೆ ಇರಲಿ, ಮಹಾಶಿವಯೋಗಿಯ ಪುರಾಣವನ್ನು ನಾಡಿನ ಮೂಲೆ ಮೂಲೆಗೆ ಮುಟ್ಟಿಸುವಲ್ಲಿ ಶ್ರೀ ಜಗದ್ಗುರು ಅನ್ನದಾನೀಶ್ವರ ಗ್ರಂಥಮಾಲೆಯು ಶ್ರಮಿಸುತ್ತಿದೆ. ಹಲವಾರು ಉತ್ತಮ ಕೃತಿಗಳನ್ನು ಬೆಳಕು ಮೂಡಿಸುವಲ್ಲಿ ದಿಟ್ಟವಾದ ಹೆಜ್ಜೆಯಿರಿಸುತ್ತಿದೆ. ಗ್ರಂಥಮಾಲೆಯು ೫೨ನೆಯ ಕುಸುಮವಾಗಿ ಈ ಕೃತಿ ಅರಳಿದೆ, ಸೌಗಂಧ ಬೀರಿದೆ. ಚರಿತ್ರನಾಯಕರ ನಿಜಾಚರಣೆ ಸಮಾಜದಲ್ಲಿ ಹರಡಲು ಅನುವು ಮಾಡಿದೆ. ಕವಿಗಳಾದ ನಿರುಪಾಧಿಸ್ವಾಮಿಗಳು ನಿಷ್ಕಾಮ ಭಾವನೆಯಿಂದ ಶಿವಯೋಗಿಯ ಚರಿತ್ರೆಯನ್ನು ರಚಿಸಿ ಮಹದುಪಕಾರ ಮಾಡಿದ್ದಾರೆ. ಈ ಚನ್ನವೀರ ವಿಲಾಸದಲ್ಲಿ ಅನೇಕ ಗ್ರಂಥಗಳ ಪ್ರಮಾಣವನ್ನು ಕೊಟ್ಟಿದ್ದಾರೆ. ಪದ್ಯಗಳು ಸರಳವಾಗಿದ್ದರೂ ಅಲ್ಲಲ್ಲಿ ಕ್ಲಿಷ್ಟವಾದವೆಂದೇ ಕಥಾಸಾರವನ್ನು ಕೊಟ್ಟಿರುವರು. ಸಾಧ್ಯವಾದ ಮಟ್ಟಿಗೆ ಪದ್ಯಗಳನ್ನು ಸಂಸ್ಕರಿಸಲಾಗಿದೆ. ಶ್ರೀಗಳು ಬಸವಲಿಂಗ ಶರಣರ ತತ್ತ್ವಗಳನ್ನು ಈ ಕೃತಿಯಲ್ಲಿ ಹೆಚ್ಚಾಗಿ ಬಳಸಿಕೊಂಡಿದ್ದಾರೆ. ಅಷ್ಟಾವರಣ-ಪಂಚಾಚಾರ ಷಟ್‌ಸ್ಥಲಗಳನ್ನು ಜೋಡಿಸಿದ್ದಾರೆ. ಶಿವಯೋಗಿಗಳು ತತ್ತ್ವವೇತ್ತರಾಗಿದ್ದು ಸಹಜವಾಗಿ ಲೀಲಾಪುರುಷರೆಂಬುದನ್ನು ಕೆಲವು ಸಂಗತಿಗಳಿಂದ ವ್ಯಕ್ತವಾಗಿದೆ. ಲಿಂಗಾಂಗ ಸಾಮರಸ್ಯದ ಬಲದಿಂದ ಶಿವಯೋಗಿಯ ಸಂಕಲ್ಪಶಕ್ತಿ ಬೆಳೆಯುತ್ತದೆ. ಅವರ ಅಪ್ಪಣೆಯನ್ನು ಮಾನವರಷ್ಟೇ ಏಕೆ ? ಇತರ ಪ್ರಾಣಿಗಳು ಸಹ ಪಾಲಿಸುತ್ತವೆಂಬುದು ಇಲ್ಲಿ ವೇದ್ಯವಾಗದೆ ಇರದು. ಕೃತಿಕರ್ತರು ವಚನಗಳನ್ನು ಸಹ ರಚಿಸಿ ಪ್ರಕಟಿಸಿದ್ದಾರೆ. ಹಿಂದೀ ಭಾಷೆಯಲ್ಲೂ ಪುಸ್ತಕವನ್ನು ಬರೆದಿದ್ದಾರೆ. ಜಂಗಮ ಕಾಯಕಗೈಯುತ್ತಿರುವ ಶ್ರೀಗಳಿಂದ ಇನ್ನೂ ಹೆಚ್ಚಿನ ಅನುಭಾವದ ಕೃತಿಗಳು ಮೂಡಿಬರಲೆಂದು ಹೃದಯ ದುಂಬಿ ಹಾರೈಸುತ್ತೇವೆ. ಈ ಕೃತಿ ಸೇವೆಗೆ, ಸಹಕರಿಸಿದವರಿಗೆ, ಭಾವುಕ ಭಕ್ತರಿಗೆ, ಓದುಗರಿಗೆ ಮಂಗಲ ಕೋರಿ ಅಚ್ಚುಕೂಟದ ಬಳಗಕ್ಕೂ ಶುಭವನ್ನು ಬಯಸಲಾಗಿದೆ. ಶ್ರೀ ಚನ್ನವೀರನ ಶರಣ ಸಂತಾನ ಚಿರಂತನವಾಗಿ ಮುನ್ನಡೆಯಲಿ.

ಸಕಲರಿಗೆ ಲೇಸಾಗಲಿ

ದಿ ೨೮-೧೨-೯೦

ಮುಂಡರಗಿ.

# ನುಡಿ ಪ್ರಸಾದ

ಸ್ವಾನುಭಾವದ ನೆಲೆಯ ನಾನೇನ ಬಲ್ಲೆನೈ
ನೀನೆ ಬ್ಬಳ ಪೊಕ್ಕು ಏನ ನುಡಿಸಿದೊಡದನೆ
ನಾನುಡಿವೆ ಗುರುವೆ ಕೃಪೆಯಾಗು ‖ (ಗು. ಕ. ತ್ರಿ-೧

ನಾನೋರ್ವ ನಿತ್ಯ ಅಭ್ಯಾಸಿಯಯ್ಯ
ತತ್ವಾನುಭವಿ ಕೃತಿಗಳೇ ಪಾಠಕರಯ್ಯ
ಶೂನ್ಯಾನುಭವಿಗಳೇ ನಿರೀಕ್ಷಕರಯ್ಯ
ಪ್ರಮಥ ಪುಂಗವರೇ ಪರೀಕ್ಷಕರಯ್ಯ
ನಿರುಪಾಧೀಶನೇ ನಿರ್ಣಾಯಕನಯ್ಯ (ವಚನಾಂಕ

ಈ ಕೃತಿಯ ಕರದಲ್ಲಿಡಿದು ನಿರೀಕ್ಷಿಸಲು ಎತ್ತಣ ಮಾಮರ ಎತ್ತಣ ಕೋಗಿ ಎತ್ತಣಿಂದೆತ್ತ ಸಂಬಂಧವಯ್ಯಾ- (ಅಲ್ಲಮ ವ-೫೯). ಈ ವಚನಾಮೃತ ತಮ ನೆನಪಾಗದೇ ಇರದು. ಇವರೀರ್ವರ ಅದಾವ ಸಂಬಂಧ ? ಇದು ತಮ್ಮ ಯೋಚನೆ ಬಾರದೇ ಇರದು. ಅನಿಮಿತ್ಯ ಬಾಂಧವ್ಯ, ಈ ತತ್ವ ವಿಲಾಸ ವಿವರಿಸಲು ವಿಶೇ ಕಾರಣವುಂಟು.

ಜಮಖಂಡಿಯ ಬಸವ ತತ್ವ ಪ್ರಸಾರ ಸಂಸ್ಥೆಯವರು ಇಟ್ಟುಕೊಂಡ ಐದನೇ ಹಂಪಿಯ ಶರಣ ಸಮ್ಮೇಲನದಲ್ಲಿ ಭಾಗವಹಿಸಿ, ಬಳಿಕ ೧೫-೪-೧೯೮೭ ರಂ ಮುಂಡರಗಿಗೆ ಬಂದಾಗ ಕೊಡುಗೆ ರೂಪದಲ್ಲಿ ಪೂಜ್ಯರು ಅನುಗ್ರಹಿಸಿದ 'ವೀರಶೈ ದಾರ್ಶನಿಕ ಸಿದ್ಧಾಂತ' ವೆಂಬ ಬೃಹತ್ ಕೃತಿಯ ಅಭ್ಯಾಸದ ಪ್ರತಿಫಲವೇ ಚಿಗುರಿ ಬಂ ಸತ್ಫಲ ಕುರುಹವೇ ಈ 'ಚನ್ನವೀರ ವಿಲಾಸ' ಎಂಬ ಚಿತ್ಫಲ. ಗುರುಕರುಣೆ ತ್ರಿ ಧಿಯ ಬಗ್ಗೆ ತಿಳಿಯಲಾರದೆ ನಿಂತ ವಿಷಯ-ಸಿದ್ಧಾಂತ ಕೃತಿಯ ನಿರೂಪಣೆ ಸಂತ ತಂದು ಕೊಟ್ಟಿತು. ತ್ರಿವಿಧಿಯ ಬರೆದ ಬಸವಲಿಂಗ ಕವಿಯ ಗುರುಗಳ ಪುರಾ ಮಠದಲ್ಲಿ ಹಚ್ಚಬೇಕೆಂದು ವಿಚಾರಿಸಿದಾಗ ಇಲ್ಲವೆಂದು ತಿಳಿದುಬರಲು ಬರೆಯು ಅಭಿಲಾಷೆ ಮೂಡಿ, ಸನ್ನಿಧಿಯವರ ಮುಂದೆ ಇಡಲು ಆಶೀರ್ವಚನವಿತ್ತರು.

ಬಸವಲಿಂಗ ಶರಣರು ತಮ್ಮ ಗುರುಗಳ ಬಗ್ಗೆ ತಮ್ಮ ಕೃತಿಗಳಲ್ಲಿ ನಿರೂಪಿ ದ್ದಾರೆ. ಅವೇ ಈ ಕೃತಿಗೆ ಪ್ರಮಾಣ. ಸ್ಥಲದ ವಿಚಾರ ವೀರಶೈವ ಸಿದ್ಧಾಂತದ ಬಂದಂತೆ ಬೇರೆಲ್ಲಿಯೂ ಗ್ರಹಿಸಿರದಿದ್ದರೂ, ಶ್ರೀ ನಿಜಗುಣ ಶಿವಯೋಗಿಗಳು ಕೈವ ಪದ್ಧತಿಯಲ್ಲಿ ಸ್ಥಲಗಳೆಂದು ಭಾಗ ಮಾಡಿದ್ದಾರೆ. ಆಯಾ ಸ್ಥಲಗಳ ದೃಷ್ಟಿ ಬ್ರಹ್ಮದ ದಿಶೆಯನ್ನೇ ಬೋಧಿಸುತ್ತವೆ. ಕಾರಣ ಅವರು ಅವುಗಳಿಗೆ-ಸ್ಥಲ ಅಂತ ಸೂಚಿಸಿರುವದೆಂಬುದು ನನ್ನ ವಿಚಾರ. ಅರ್ಥಗರ್ಭಿತ ಸ್ಥಲದ ವಿಚಾರ ಮಂದ ಮತಿಯಾದ ನನಗೆ ಅಸಾಧ್ಯ. ಅನುಭವಿಗಳ ಸೂಕ್ತಿಗಳ ಆಧಾರ, ಶ್ರೀ ಮುಂಡರ

## ಕೃತಿಕರ್ತರು



ಶ್ರೀ ಶ್ರೀ ನಿರುಪಾಧಿ ಸ್ವಾಮಿಗಳು
ಶ್ರೀ ಅಡವಿಸಿದ್ದೇಶ್ವರ ಮಠ, ಮರೆಗುದ್ದಿ.

ಪೂಜ್ಯರು ವಿವರಿಸಿದ ವಿಷಯ ಇದಕ್ಕೆ ಪ್ರೋತ್ಸಾಹಿತ. ಹರಡಿದ ಮುತ್ತುಗಳ ಒಂದು ಗೂಡಿಸಿ ಮಾಲೆ ಹೆಣೆದ ಕಲಾಕೃತಿ. ಅಲ್ಲಲ್ಲಿ ಸಂಕ್ಷಿಪ್ತ ಟಿಪ್ಪಣಿ ಸೂಚಿಸಲಾಗಿದೆ. ವಚನಗಳ, ಪದಗಳ ಕ್ರಮಾಂಕ ಮೂಡಿಸಲಾಗಿದೆ. ಈಶ, ಕೇನ, ಕಠ, ಮುಂಡಕ ಅಂತಾ ಉಪನಿಷದಗಳ ಹೆಸರನ್ನು ತಿಳಿಸಿಡಲಾಗಿದೆ. ಬೋಧಕರಿಗೆ ಇವು ಸಹಕಾರ ನೀಡದೇ ಇರಲಾರವು. ಶ್ರೀ ಗಣೇಶ ಪುರಾಣಕ್ಕೆ ಟೀಕೆ ಈ ಕೃತಿಗೂ ಬಂದರೂ ಚಕಿತಲ್ಲ ! ಟೀಕೆಗಳು ನಮ್ಮನ್ನು ಎಚ್ಚರಿಸುವ ಗಂಟಾನಿನಾದಗಳು. ಮತಿವಂತರಿಂದ ಮಾ ರ್ಗ ದ ರ್ಶ ನ ಸಿಗದೇ ಪ್ರತಿಕಾರ ಪರಾಗ ಬಂದರೂ ಗ್ರಾಹ್ಯವೇ ಸರಿ.

ಶ್ರೀ ಶಿವಾನುಭವಿಗಳ ಕೃತಿ ಬರೆದ ಲಾಭ–ಮತ್ತಷ್ಟು ವಚನ ಶಾಸ್ತ್ರಾಧ್ಯಯನ. ಸೊನ್ನವವಾಢೆಯಲ್ಲಿ ಗಣೇಶ ಚವತಿಯ ಪ್ರಸಂಗದಲ್ಲಿ ನಡೆಯುವ ಸಮಾರಂಭದಲ್ಲಿ ಇಂಗಳೇಶ್ವರ ಪೂಜ್ಯರಾದ ಶ್ರೀ ನಿ. ಪ್ರ. ಚನ್ನಬಸವಸ್ವಾಮಿಗಳಿಂದಾ ನಡೆಯುವ ರಸಮಯ ವಚನ ವಿಚಾರ, ಹಿರೇಆಲ್ಲುಗಂಡಿಯಲ್ಲಿ ಫಾಲ್ಗುಣ ಮಾಸದ ಮಧ್ಯದಲ್ಲಿ ನಡೆಸಿಕೊಂಡು ಬಂದ ಶಿವಾನುಭವ ಗೋಷ್ಠಿಯ ಸತ್ಸಂಗದ ಲಾಭ. ಈ ಕೃತಿಗೆ ಸಹಕಾರಿಯಾಗಿವೆ ಎಂಬುದು ಮರೆಯದ ವಿಷಯ.

ಪೂರ್ತಿಯಾದ ಕೃತಿಯನ್ನು ಶ್ರೀ ಮುಂಡರಗಿ ಪೂಜ್ಯರಡಿಯಲ್ಲಿ ತಾ ೨೬-೬-೧೯೮೮ ರಂದು ಶಿವಯೋಗ ಮಂದಿರದಲ್ಲಿ ಓದಿ ತೋರಿಸಿದಾಗ, ತಿದ್ದಿ, ಚನ್ನವೀರವಿಲಾಸ ಅಂತಾ ನಾಮಕರಣ ಸೂಚಿಸಿದ್ದು ಯಥಾರ್ಥವೇ. ಆದ್ದರಿಂದ-ವಿಜಯ ತಗೆದು 'ಚನ್ನವೀರ ವಿಲಾಸ' ಅಂತಾ ನಾಮಕರಣ ಮಾಡಲಾಯಿತು. ಪೂಜ್ಯರ ಸದಭಿಪ್ರಾಯದಂತೆ ಚರಿತನಾಯಕರ ಪೀಠದ ಸದ್ಯದ ಶ್ರೀಗಳ ಮುಂದೆಯೂ ೧೫–೮–೧೯೮೮ ರಂದು ಮುಂಡರಗಿಯಲ್ಲಿ ಓದಿ ಅವರ ಸೂಚನೆಗಳನ್ನು ಗ್ರಹಿಸಿ ಅದರಂತೆ ಶುದ್ಧಪಡಿಸಿದ ವಿಲಾಸವಿದು.

ಸೊನ್ನದಲ್ಲಿಯೂ, ದಾಸ್ಯಾಳಕ್ಕೆ ಬನ್ನಿಮುಡಿಯಲು ಹೋದಾಗ್ಗೆ, ಎಲ್ಲಟ್ಟಿ, ನಾವಲಗಿಯ ನಿರುಪಾಧಿ ಮಠಗಳಲ್ಲಿಯ ಬರೆದ ಸ್ಥಲಗಳು ಕಥಾಸಾರ ಸಹ ಬರೆಯಲಾಗಿದೆ. ಮತಿವಂತರು ದೋಷಗಳ ತಿಳಿಸಿದಲ್ಲಿ ಋಣಿ. ಹಲವಾರು ಕೃತಿಗಳನ್ನು ಬರೆದು ಅಭ್ಯಾಸಿಗಳಿಗೆ ಅನುಕೂಲ ಮಾಡಿದ ಹಾಗೂ ಕೃತಿಗೆ ಮಾರ್ಗದರ್ಶಕರೂ ಆಶೀರ್ವಚನ ನೀಡಿದ ಶ್ರೀ. ಮ. ನಿ. ಪ್ರ. ಜ. ಅನ್ನದಾನೀಶ್ವರ ಮಹಾಸ್ವಾಮಿಗಳ ಚರಣಕ್ಕೆ ದೀ. ಪ್ರಣಾಮಗಳು. ಶುದ್ಧ ಸಾಹಿತ್ಯದೆಡೆ ಒಯ್ಯುವ ಡಾ. ಎಸ್. ಎಮ್. ಬಿರಾದಾರ ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ ಜಮಖಂಡಿ ಮತ್ತು ಶರಣರ ಬಗ್ಗೆ ಸಿದ್ಧ ವೈಚಾರಿಕ ಕೃತಿಗಳನ್ನು ಅಧ್ಯಯನಕ್ಕೆ ಕೊಟ್ಟು ಅನುಕೂಲ ಮಾಡಿದ ಹಿರೇ ಆಲ್ಲುಗಂಡಿಯ ಸಾಹಿತ್ಯ ಪ್ರೇಮಿ ಸದ್ಭಕ್ತ ಶ್ರೀ ದುಂಡಪ್ಪ ಕುಂಬಾರ ಇವರೀರ್ವರ ಸೇವೆ ಸ್ಮರಣೀಯ.

ಕೃತಿಯಿದಂ ಸ್ವೀಕರಿಸಿ, ಜೊತೆಗೆ ರಸ ಹೊಸಹೊಸತು,
ಕೃತಿಗೆ ಸಹಕರಿಸಿ, ಹೃದಯದಿಂ ದೃಷ್ಠಿರಿಸಿ,
ಮತಿಯೊಳವಧರಿಸು ಆಡವೀಶ.

ಮರೆಗುದ್ದಿ
೧೫–೯–೧೯೮೮, ಗಣೇಶ ಚವತಿ

ಕೃತಿಕರ್ತ
ಶ್ರೀ ನಿರುಪಾಧಿ ಸ್ವಾಮಿಗಳು

# ಚನ್ನವೀರ ವಿಲಾಸ ಕಥಾಸಾರ

## ೧ನೇಯ ಸ್ಥಲ

ಶ್ರೀ ಲಿಂಗನಾಯ್ಕನ ಹಳ್ಳಿಯ ಚನ್ನವೀರ ಶಿವಯೋಗಿಗಳ ಲಿಂಗ ಲೀಲಾ ವಿಲಾ ಬಗ್ಗೆ ಬರೆದ ಈ ಕೃತಿಗೆ ಶ್ರೀ ಚನ್ನವೀರ ವಿಲಾಸವೆಂಬ ನಾಮಕರಣ ಮಾಡಿ ಬರೆಯುವ ಕಾರಣ ಏನೆಂಬುದನ್ನು ಈ ಸ್ಥಲದಲ್ಲಿ ತಿಳಿಯುವದು ಅದೆ. ಗುರುವಿಗೆ ನಮನ. ಭ ಮಹೇಶಾದಿ ಆರು ಸ್ಥಲಗಳೇ ಸ್ಕಂದನೆಂದು, ಪ್ರಣವಾಕಾರ ಗಣಪನನ್ನು ನಿರಾ ದೇಶಿಕರೆಂದು, ನಂದಿಯನ್ನೇ ಭಕ್ತನೆಂದು, ಅಷ್ಟತನುಗಳನ್ನೇ ಅಷ್ಟಾವರಣವೆಂದು ಮಾತೃನ ಪಂಚಮುಖಗಳೇ ಶಿವಾಚಾರ, ಗಣಾಚಾರ ಮುಂತಾದ ಪಂಚಾಚಾರಗಳೆ ತಿಳಿದು ಸಾಗುವೆನು. ಶರಣ ಸಮೂಹವನ್ನೇ ಗಣಗಳೆಂದು, ಶರಣರ ಅಂಗಣವೇ ಭೃ ಯಾಂಗಣವೆಂದು, ಶರಣರ ಬೋಧೆಯೇ ಸಿದ್ಧಾಂತ ಶಿಖಾಮಣಿ ಗುರುಗೀತೆಯೆಂದು ಅ ಆಚಾರವೇ ಭದ್ರನ ವೀರಾಚಾರವೆಂದು, ಶರಣರ ನಡೆ-ನುಡಿಯೇ ಶಿವ-ಪಾರ್ವತಿಯ ಸ್ತುತಿಸುವೆ. ಆರಾಧ್ಯ ಮೂರ್ತಿಯಾದ ಅಂಕಲಗಿಯ ಅಡವಿಶಿದ್ಧೇಶ್ವರನನ್ನು ಸ್ಮರಿ ಅಹಂಕಾರ ಬರದಂತೆ ಸದಾದೃಷ್ಠಿಯನ್ನು ಇಡಲು ಬೇಡಿಕೊಳ್ಳಲಾಗಿದೆ. ಬಸವೇಶ್ವ ನನ್ನು ಬೀಳೂರು, ಬಿದರಿ, ಇಳಕಲ್, ಅಥಣಿ, ಸಾವಳಗಿ, ಅರಭಾವಿ, ಯಡೆಯೂ ಮೂಜಗಂ, ಮುಂಡರಗಿಯ ಅನ್ನದಾನೇಶ, ಶೇಗುಣಸಿ, ಬಬಲೇಶ್ವರ, ಧಾರವಾಡ ಪೂಜ್ಯ ಮಹಾಂತಪ್ಪನವರನ್ನು ಸ್ಮರಿಸಿ ನಿತ್ಯ ಸಾಗುವೆನು. ೧೯೬೪ ರಲ್ಲಿ ಸಸಾಲ ಮಂಟಪಕ್ಕೆ ದಯಮಾಡಿಸಿದ ಧಾರವಾಡದ ಶ್ರೀಗಳು ಸಭೆಯಲ್ಲಿ ಗುರುಕರುಣ ತ್ರಿವಿ ಯನ್ನು ಸ್ತುತಿಸಲು ಅದರಂತೆ ತಾ. ೨೮-೫-೧೯೭೮ ರಂದು ಶ್ರೀಮಠಕ್ಕೆ ಬಂದಾ ಅದೇ ಸ್ತುತಿಯನ್ನು ಮಾಡಿದಾಗ, ಆ ಕೃತಿಯನ್ನು ತರಿಸಿ ಓದಿದರೆ ಅರ್ಥ ತಿಳಿಯ ಇರಬೇಕಾಯಿತು. (೧ ರಿಂದ ೧೦)

ಗೋಕಾಕ ತಾಲೂಕ ಅಂಕಲಗಿಯ ಅಡವಿ ಶಿದ್ಧೇಶ್ವರ ಚರನಾಶ್ರಯದಲ್ಲಿದ ಸೇವೆ ಮಾಡಿ, ಸನ್ಯಾಸ ಆಶ್ರಮ ಪಡೆದುಕೊಂಡು ಗುರುಗಳ ಆಜ್ಞೆಯಂತೆ, ಮರೆಗು ಯಲ್ಲಿ ಅಡವಿಸಿದ್ಧೇಶ್ವರ ಮಠವೆಂದು ಸ್ಥಾಪಿಸಿ ಶರಣ ಸ್ಥಲ ಅಂದರೆ ವಿರಕ್ತ ಮ ಸಂಪ್ರದಾಯದಲ್ಲಿ ಮುಂದುವರಿಸಿದ ಗುರು ಪರಂಪರೆಯಲ್ಲಿ ಬೆಳಗಿದ ಗುರುಪಾದ ಸ್ವಾ ಗಳ ಶಿಷ್ಯರಾದ ನಿರುಪಾಧಿ ಸ್ವಾಮಿಗಳು ಮಠದ ದಾಸೋಹ ಕಾರ್ಯದಲ್ಲಿ ಮುಂದುವ ದಿರಲು ಜಮಖಂಡಿಯ ಬಸವತತ್ವ ಪ್ರಸಾರ ಸಂಸ್ಥೆಯವರು ಇಟ್ಟುಕೊಂಡ ಹಂಪಿ ಕೊಟ್ಟುರೇಶ್ವರ ಮಠದಲ್ಲಿ ಶರಣರೈದನೆಯ ಸಮ್ಮೇಳನದಲ್ಲಿ ತಾ. ೧೩-೪-೮೭ ರಂ ಭಾಗವಹಿಸಿ ಬಳಿಕ ಮರುದಿವಸ ಮುಂಡರಗಿ ಸನ್ನಿಧಿಯವರ ಅಪ್ಪಣೆಯ ಮೇ ಅಲ್ಲಿ ಆಗಮಿಸಿ ೯ನೇಯ ಜಗದ್ಗುರುಗಳ ಪುಣ್ಯಾರಾಧನೆ ತಾ. ೧೪-೪-೮೭ ರಂ ಮುಗಿಸಿಕೊಂಡು ಹೊರಡುವ ಸಮಯದಲ್ಲಿ ಸದ್ಯದ ಪೂಜ್ಯರಿಂದ ಬರೆಯಲ್ಪಟ್ಟ ಶ್ರೀ "ಗುರುಕರುಣ ತ್ರಿವಿಧಿಯಲ್ಲಿ ವೀರಶೈವ ದಾರ್ಶನಿಕ ಸಿದ್ಧಾಂತ" ಎಂಬ ಮಹೋನ್ನ

ಕೃತಿಯನ್ನು ಪಡೆದ ಬಳಿಕ ಶ್ರೀ ಸನ್ನಿಧಿಯಲ್ಲಿಯೂ ಚರಿತನಾಯಕರ ಪೀಠದ ಸಪ್ತಮಾಧಿಕಾರಿಗಳಾದ ಶ್ರೀ ಚನ್ನವೀರ ಮಹಾಸ್ವಾಮಿಗಳ ದರ್ಶನಕ್ಕೆ ಹೋಗಿ ಅಪ್ಪಣೆ ಪಡೆದು ಹೊರಟ ಪ್ರಸಂಗದಲ್ಲಿ ಪೂಜ್ಯರಲ್ಲಿ ಸರಳತೆ, ಸುಹೃದಯ, ನಿರಹಂಭಾವ ಕಂಡು ಪ್ರಭಾವಿತನಾದೆ. (೧೧ ರಿಂದ ೧೫) ಆಶೀರ್ವದಿಸಿದ ಕೃತಿಯನ್ನು ಅಭ್ಯಾಸ ಮಾಡಲು ತೊಡಗಿದಾಗ, ಶರಣರ ಗುರುಗಳೂ, ಚರಿತನಾಯಕರ ಲೀಲಾವಿಲಾಸ ಬರೆಯಬೇಕೆಂಬ ಆಸೆ ಆಯಿತು. ಗಣೇಶ ಪುರಾಣ ಬರೆಯುವ ಪ್ರಸಂಗದಲ್ಲಿ ನಿರಾಭಾರಿಗಳ ಚರಿತೆ ಬರೆ ಎನುವ ಆತ್ಮೀಯರ ನುಡಿಯೂ ಇದಕ್ಕೆ ಪ್ರೋತ್ಸಾಹ. ಜಂಗಮ ಪುಂಗವರ ಮಹಿಮೆಯನ್ನು ಬರೆಯುವದು ಕಠಿಣ. ಆದರೂ ಪಾಂಡಿತ್ಯವಿಲ್ಲದ ಕಾವ್ಯ ಸೌಂದರ್ಯತೆ ಕಾಣದ ಈ ಕೃತಿಯು ಹೆಡ್ಡನ ಹೆಣಿಕೆ ಎಂದು ಗ್ರಹಿಸಿದರೆ ಸಾಕು. ಉಂಗುರದೊಳಗೆ ಶೋಭಾಯಮಾನವಾದ ವಜ್ರ ಹೊಳೆಯುವಂತೆ ಮಾತ್ರಾಬದ್ಧ ಷಟ್ಪದಿಯ ಈ ಕಾವ್ಯ ಪ್ರಸಾದ ಕೊಡದೇ ಇರದು. ಕೃತಿಯ ಓದಿ ಮಾರ್ಗದರ್ಶನ ಮಾಡದೇ ಹೀಗೆ ಬರೆಯುವವ ಬಹಳ ಇಹರೆಂಬ ಅವರ ಸಂಕುಚಿತ ಭಾವನೆ ಪ್ರಕಟವಾದರೂ ಆಶ್ಚರ್ಯಪಡಬೇಕಾಗಿಲ್ಲ. ಗುರುಪರಂಪರೆಯಲ್ಲಿ ನಡೆಸಿಕೊಂಡ ದಾಸೋಹ ಕಾಯಕದಲ್ಲಿ ಸ್ವಯಂ ಬರೆದ ಕೃತಿಯಿದು. ಈ ಕೃತಿಯನ್ನು ಬರೆಯುವದೆಂದರೆ ಬಾಲಕನು ಸಿದ್ಧಾಂತ ಕೌಮುದಿ ಪಾಠ ಕಠಿಣವಾದಂತೆ ಪ್ರಸಾದ ಪುರುಷರ ಲೀಲೆ ಬರೆವುದು ಸರಳಲ್ಲ. ಕನ್ನಡಿಗೆ ಧೂಳಿ ಬಡಿದಂತೆ, ಕೃತಿಯಲ್ಲಿ ದೋಷ ಕಂಡು ಬರುವದು ಸ್ವಾಭಾವಿಕ ಪಂಡಿತರು ತಿದ್ದಿಕೊಂಡು ಬೋಧಿಸಬೇಕೆಂಬುದು ಬರೆದವರ ಇಚ್ಛೆ. ಇದು ಡಾಂಬಿಕರ ವಾಮಾಚಾರಿಗಳ ರಾಜರ ಕಥೆಯಲ್ಲ. ಶರಣ ಸಿದ್ಧಾಂತದಲ್ಲಿ ಪರಿಪೂರ್ಣಗೊಂಡ ಪ್ರಭು ಪರಂಪರೆಯ ನಿರಾಭಾರಿಗಳ ಲೀಲಾವಿಲಾಸ ಕೃತಿಯಿದು. ಸಾತ್ವಿಕರಿಗೆ ಇದು ಒಪ್ಪುವದು. ಕಾಯಕ ತತ್ಪರ ಲಿಂಗಾಂಗ ಸಮರಸದಲ್ಲಿ ರುಚಿಯಿದ್ದವನೇ ಈ ಕೃತಿಯ ಕೇಳಲು ಅಧಿಕಾರಿ. ಅಷ್ಟಾವರ್ಣಾದಿಗಳೇ ವಿಷಯ; ಬೋಧ್ಯ ಬೋಧನೆ ಸಂಬಂಧ ; ಶೂನ್ಯ ಸಂಪಾದನೆ ಪಡೆಯುವದೇ ಪ್ರಯೋ-ಜನ. ೧೯೦೯ನೇಯ ಶಕೆಯ ಆಷಾಢ ಶುದ್ಧ ೧೨ ಬುಧವಾರ ಅನುರಾಧೆಯಂದು ೬೭ನೇಯ ವಯಸ್ಸಿನಲ್ಲಿ ಬರೆಯಲು ಪ್ರಾರಂಭಿಸಲಾಯಿತು. ಅಂಕಲಗಿ ಸಂಪ್ರದಾಯದಲ್ಲಿ ಸ್ಥಾಪಿತವಾದ ಮರೆಗುದ್ದಿಯ ಅಡವಿ ಸ್ವಾಮಿಮಠದ ಗುರುವಂಶದಲ್ಲಿ ಬಂದ ಶ್ರೀ ಗುರುಪಾದಸ್ವಾಮಿಗಳ ಕರಸಂಜಾತರಾದ ನಿರುಪಾಧಿ ಸ್ವಾಮಿಗಳು ಬರೆದ "ಲಿಂಗನಾಯಕನ ಹಳ್ಳಿಯ ಪೂಜ್ಯ ಚನ್ನವೀರ ವಿಲಾಸ"ವೆಂಬ ಕೃತಿಯ ಒಂದನೆಯ ಸ್ಥಲ ಸಮಾಪ್ತ (೧೬-೩೫).

## ೨ನೇಯ ಸ್ಥಲ

ಈ ಸ್ಥಲದಲ್ಲಿ ಶಿವನು ಗಿರಿಜೆಗೆ ಚನ್ನವೀರ ಶಿವಯೋಗಿಗಳು ತನ್ನ ಚೇತನದ ಅಂಶವೆಂದು ಹೇಳಿದನು. ಶ್ರೀ ಗುರುವಿಗೆ ನಮನ. ಬರೆದಿರುವ ಕೃತಿ ನೀನೆ ಆಲಿಸು. ನಿರ್ಗುಣ ಸ್ವರೂಪನಾದ ಪರಮಾತ್ಮನೆ ಲೀಲೆಗೋಸ್ಕರ ಜಂಗಮ ರೂಪಧರಿಸಿ, ಗಿರಿಜೆ

ಸಹಿತ ವಿರಾಜಮಾನನು. ಹಲವಾರು ಲೀಲೆ ಮಾಡಿದಂಥವನು. ವಿವಿಧ ಗಣಂಗಳ ದೇವತೆಗಳು ಭೃಂಗಿ ಸಹಿತ ಕೂಡಿಕೊಂಡು ಅನುಭವಗೋಷ್ಠಿ ನಡೆಸಿದ ಪ್ರಸಂಗ ನಾರದನು ಬಂದು ಅಮರ ಗಣಾಧೀಶ್ವರರು ಕುಳಿತಲ್ಲಿಗೆ ತಾನೂ ವಿರಾಜಮಾನನಾ ಬಳಿಕ ಮತ್ತೆ ಚರ್ಚೆ ಪ್ರಾರಂಭವಾಯಿತು ಆಗ ಗೌರಿಯು ಪ್ರಮಥರೆಡೆಗೆ ನೋಡ ಪ್ರಸಂಗದಲ್ಲಿ ಹರನು ಕಂಡು ಗೌರಿಗೆ ನೀನೇನು ಯೋಚಿಸುತ್ತೀ? ಎನ್ನಲು, ಆಗ ಪಾ ತಿಯು ಈ ಗಣಂಗಳು ದೇಹಿಯಾಗಿರು.ವಾಗಲೇ ಈ ಪರಮ ಸ್ಥಾನ ಪಡೆದಿಹರೆ? ಅಥ ದೇಹಪಾತದ ನಂತರ ಪಡೆದಿಹರೆ ? ಆಗ ಪರಮಾತ್ಮನು ಇಂತೆಂದನು— ದೇಹಿಯಾ ವಾಗ ಲಿಂಗಾಂಗ ಸಾಮರಸ್ಯವನ್ನರಿತು ಜೀವನ್ಮುಕ್ತರಾಡಂಥವರು. ದೇಹ ಪತನಾ ನಂ ಅನುಭವಕ್ಕೆ ಬರಲಾರದು. ಆದ್ದರಿಂದ ಜೀವನ ಮುಕ್ತರೆ ಇವರು. ವಿದೇಹ ಮುಕ್ತಿ ಮಿತ್ರನು ಕಂಡ ಕನಸಿನಂತೆ ತಿಳಿಯುವದು. ಆ ಕನಸು ಮಿತ್ರನಿಗಲ್ಲದೆ ತನಗಲ್ಲ ಹೇಗ ಹಾಗೆ ವಿದೇಹ ಮುಕ್ತಿಯ ಸ್ಥಿತಿ. ಹೀಗೆ ಎನಲು ಭೈರವಿಯು ಇಂತೆಂದಳು. ಅಂತ ಯಾರ್ಯಾರು? ಎನಲು,ಶಿವನು- ಚನ್ನಬಸವ ಬಸವಣ್ಣ,ಮರುಳ ಶಂಕರದೇವ, ಪ್ರಭು ಅವರನ್ನು ಸ್ಮರಿಸಿಕೋ ಅಂದಾಗ, ಈಗ ಆ ಸ್ಥಿತಿಯವರು ಭೂಲೋಕದಲ್ಲಿ ಇದ್ದಾರೆ ಎಂದು ಪ್ರಶ್ನಿಸಿದಳು. ಆಗ ಶಿವನು, ಎನ್ನ ಚೇತನ ಮೂರ್ತಿಯಾದ ಚನ್ನವೀರನು ಗು ಪರಂಪರೆಯುಳ್ಳವನು, ಪಿಪೀಲಿಕಾ ಕ್ರಮದಿಂದ ತಿಳಿಸುವಂತವನು. (೧ ರಿಂದ೧೫) ನೀನು ಗುಹೇಶ್ವರನ ಪರೀಕ್ಷೆ ಮಾಡಲಿಕ್ಕೆ ಹೋದಂತೆ ಎನ್ನ ಗಣಂಗಳನ್ನು ಪ ಮಾಡಲು ಹೋಗಬೇಡಾ, ಮಾಡಿ ಮರಗಬೇಡಾ. ಜಂಗಮ ಪುಂಗವರ ಹಿರಿಮೆ ಸ ಭಾವನೆಗೆ ಮಾತ್ರ ತಿಳಿಯುವದು. ಭೂತಳದಿ ಇವನು ಮಹಾಪ್ರತಿಭಾವಂತ, ಮ ಪುರುಷ, ಗಾರುಡಿಗನಲ್ಲ. ಕಾಮಿನಿಕಾಂಚನ ಹುರಿದಂತವನು, ವೈರಾಗ್ಯ ಶೀಲ ನೂರೊಂದು ಸ್ಥಲದ ವಿಚಾರ ಸಂಪನ್ನನು, ನಿಜಾನುಭವಿ ಇವನು. ಇರುವ ಸ್ಥಾನದಲ್ಲಿ ಜಲ, ಫಲ, ಸಸ್ಯ ಎಲ್ಲವೂ ಪಾವನವು, ಆರವತ್ತೊರು ಶೀಲದಲ್ಲಿ ನಿಷ್ಠೆಯುಳ್ಳವ ನಡೆನುಡಿ ಒಂದಾದ ಸತ್ಪುರಷ ಹೃಷಿಕೇಶ, ಕಾಶಿ, ಮುಂತಾದೆಡೆಗೆ ಸಂಚರಿಸುತ್ತ ತೀ ಗಳನ್ನು ಪಾವನಮಾಡುತ್ತಾ, ಹಂಪೆಯನ್ನು ತಂಪಿರಿಸಿ, ವಿದ್ಯೆಯನ್ನು ಬೋಧಮಾಡ ಮಹಾ ಮೂರ್ತಿ, ಶೂನ್ಯ ಪರಂಪರೆಯ ಲೀಲೆಯೊಳು ಅನುಷ್ಠಾನ ಮಾಡುತ್ತಿ ಜಂಗಮ ಪುಂಗವನು. ಈ ಪ್ರಕಾರ ಗಣಪಿತನು ಹೇಳಿದ್ದನ್ನು; ಭೈರವಿಯು ಇಂ ಪ್ರಮಥರೇ ಧನ್ಯರೆಂದು ಯೋಚಿಸುತ್ತಾ ಚನ್ನವೀರನ ವಿಲಾಸವನ್ನು ಕಾಣಬೇಕ ಭಾವದಲ್ಲಿ ಮೌನವಾದಳು. (೧೬ ರಿಂದ ೩೪)

## ೩ನೇಯ ಸ್ಥಲ

ಹರಪುರದ ನಾಯಕನಾದ ಸೋಮಶೇಖರ ದಂಪತಿಗಳಿಗೆ ಲಿಂಗಧಾರಣ ಮಾ ವಿಷಯ ಇಲ್ಲಿ ತಿಳಿಯುವದು ಚನ್ನವೀರ ಶಿವಯೋಗಿಗಳು ಹೋದ ಹೋದಲ್ಲಿ ಶಿವಾನು

ಚರ್ಚಿಸುತ್ತಾ ಹಾಲವರ್ತಿಯ ಬೆಟ್ಟದ ಸೌಂದರ್ಯ ಕಂಡು ಪ್ರಶಾಂತ ವಾತಾವರಣದ ಸ್ಥಿತಿಯಲ್ಲಿ ತಪ ಪ್ರಾರಂಭ ಮಾಡಿದರು. ತಪಃಪ್ರಭಾವಕ್ಕೆ ಅಲ್ಲಿಯ ಕ್ರೂರ ಪ್ರಾಣಿಗಳು ವೈರಭಾವ ಮರೆತು ಚೆಲ್ಲಾಟ ಮಾಡುತ್ತಿದ್ದವು. ಆತ್ಮ ಸಾಕ್ಷಾತ್ಕಾರ ಮಾಡಿಕೊಂಡಿರುವ ಯೋಗಿ ತನ್ನ ನಿಜಾನಂದದೊಳು ಇರುತ್ತಿರುವ ಈ ಪ್ರಸಂಗ, ಹೊರ ಜಗತ್ತಿನಲ್ಲಿ ವಿಷಮತೆಯಿಂದ ಕೂಡಿಕೊಂಡಿತ್ತು. ನಾಸ್ತಿಕವಾದಿಗಳ ವಿಚಾರ ಜನರಲ್ಲಿ ಮೂಡಿ ವೀರಶೈವಾಚಾರ ಪದ್ಧತಿಯು ಲೋಪಗೊಂಡಿತ್ತು. ಆಂಗ್ಲರ (ಮುಸ್ಲೀಮರ ಹಾಗೂ ಸಂಸ್ಥಾನಿಕರಲ್ಲಿ ಮೇಲಿಂದ ಮೇಲೆ ಒಳಜಗಳ ನಡೆದು ಸಮಾಜದಲ್ಲಿ ಶಾಂತಿ ಇಲ್ಲವಾಗಿತ್ತು. ) ಬಾಹ್ಯ ಬ್ರಹ್ಮ ನುಡಿಯುವ ಗಾಳಿ ಜೋರಾಗಿತ್ತು. ಇಂತಹ ಪ್ರಸಂಗದಲ್ಲಿ ಗವಿಯಿಂದ ಶಿವಯೋಗಿಗಳು ಹೊರಗೆ ಆಗಮಿಸಿದರು. ಸ್ವಯ, ಚರ, ಪರ ಜಂಗಮನೇ ತಾನಾಗಿ ಹಾಲವರ್ತಿಯಲ್ಲಿ ಶಿವಾನುಭವ ಕೇಂದ್ರ ಸ್ಥಾಪಿಸಿ ವೀರಶೈವಾಚಾರ ಬೋಧ ಮಾಡುವ ಪದ್ಧತಿ ಹಾಕಿಕೊಂಡರು. ಈ ಸುದ್ದಿ ಎಲ್ಲಡೆಗೆ ಹರಡಿ ಶಿವಭಕ್ತರ ಶಿವಾನುಭಾವಿಗಳ ಆಗಮನ ನಡೆಯಿತು. ಈ ಪ್ರಸಂಗದಲ್ಲಿ ಒಮ್ಮೆ ಹರಪುರದ ದೊರೆ ಸೋಮಶೇಖರನು ಪತ್ನಿ ಬಸವಮ್ಮ ಹಾಗೂ ಅನುಚರರ ಜೊತೆಗೆ ಬೇಟೆಯಾಡಲು ಹಾಲವರ್ತಿಯ ಸಮೀಪಕ್ಕೆ ಬಂದಾಗ ಆಕಸ್ಮಿಕವಾಗಿ ಶಿವಾನುಭಾವಿಗಳ ದರ್ಶನವಾಯಿತು. ಆಗ ಅವನ ಕಂಡು ಶಿವಾನುಭವಿಯು ತತ್ತ್ವೋಪದೇಶ ಮಾಡಲು ಪ್ರಾರಂಭ ಮಾಡಿದರು. ಈ ಗುಡ್ಡವು ಕ್ರೂರ ಪಶು-ಕೀಟಾದಿಗಳಿಗೆ ವಾಸ ಮಾಡಲು ಬಿಟ್ಟಿರುವ ದೊಡ್ಡ ಆಶ್ರಮವು ಇದ್ದಂತೆ. ಚಿಕ್ಕವರು ತಪ್ಪಿದರೆ ಕರೆದುಕೊಳ್ಳುವರುಂಟು. ದೊಡ್ಡವರು ತಪ್ಪಿದರೆ ಹೇಗೆ ? ನೀನು ಈ ಭಾಗಕ್ಕೆ ನಾಯಕನಾಗಿದ್ದರೆ ನಿನಗೋರ್ವ ನಾಯಕನು ನಿನ್ನೊಳಗೆ ಇರುವನು. ಅದನ್ನು ಅರಿತವನೇ ನಿಜವಾದ ನಾಯಕನು ಅರಿಯದವ ಕುರುಡ. ಉಚಿತವಾದದ್ದನ್ನು ಗ್ರಹಿಸಿಕೊ. (೧ ರಿಂದ ೨೫) ಬೇಡರ ಕಣ್ಣಪ್ಪನ ಚರಿತೆ ನಿನಗೆ ನೆನಪಾಗಿರಬಹುದು, ಪೂಜಿಸುವ ಬ್ರಾಹ್ಮಣನ ಭಕ್ತಿಗೂ ಕಣ್ಣಪ್ಪನ ಭಕ್ತಿಗೂ ಬಹಳ ಅಂತರ. ಹಿಂಸೆ ಯಾರಿಗೂ ಸರಿಯಲ್ಲ. ದಯವೇ ಧರ್ಮದ ಮೂಲವೆಂಬ ಅಣ್ಣನ ಮಾತು ನೆನಪಿಗೆ ತಂದುಕೋ. ಬೇಟೆಯಾಡಿ ತಂದ ಚಿಗರಿಗೆ ಆದ ನೋವು ನಿನಗೆ ಕಾಣದು. ಬಾಣವನ್ನು ನಿನಗೆ ನೀನೆ ಚುಚ್ಚಿಕೊ ಆಗ ಅನುಭವಕ್ಕೆ ಬರುವದು.ಇಂತಹ ಹಿಂಸಾ ಭಾವವ ತೊರೆದು ಅಹಿಂಸಾ ಸಂಪನ್ನನಾಗಿ ಲಿಂಗ ಧರಿಸಿಕೊ. ಜೀವರೊಳು ಕರುಣೆ ಇಡಬೇಕೆಂಬ ನೀತಿಯನ್ನು ಅನುಕರಿಸು. ಸಾತ್ವಿಕ ಗುಣವು ಮುಕ್ತಿಗೆ ಸಹಕಾರಿ. ಶಿವಭಕ್ತಿ ಸಂಪನ್ನನಾಗು. ಅಣ್ಣನವರು ಹೇಳಿದಂತೆ-ಕಳಬೇಡ, ಕೊಲಬೇಡ ಎಂಬ ಸಪ್ತ ಸೂತ್ರವನ್ನು ಯಾವನು ತಿಳಿದವನೋ ಅವನೇ ಜಾಣ. ಪುಣ್ಯ ಪಾಪಕ್ಕೆ ಕರ್ಮವೇ ಕಾರಣವಾದರೂ ಸತ್ಕರ್ಮ ಪ್ರಿಯನಾಗು. ಪತಿವ್ರತೆಯು ತಪ್ಪಿದರೆ ಜನರ ಕೂಗಾಡು; ಸೂಳೆಗೆ ಆರು ನುಡಿವರು ? ಆಳು ತಪ್ಪಿರೆ ಲೇಸು, ನೀನೇ ತಾಳ ತಪ್ಪಿದರೆ ಹೇಳುವವರಾರು ? ಮನುಷ್ಯನು ಮಾನವೀಯತೆಯ ಮೌಲ್ಯವನ್ನರಿತು

ಸಾಗಬೇಕು. ಉನ್ಮತ್ತ ಸ್ಥಿತಿ ಸುಖವಾಗದು. ತನುವೇ ರಥ ಇಂದ್ರಿಯಗಳೇ ಕುದು
ಮನವೆ ಲಗಾಮು, ಬುದ್ಧಿಯೆ ಸಾರಥಿ, ಜೀವಾತ್ಮನೇ ಸ್ವಾಮಿ ಇಂತಹ ರಥ ಹತ್ತು
ನಾಗು. ಬನ್ನಿಯ ಗಿಡದ ಅಡಿಗೆ ನಂದಿಯ ಮೂರ್ತಿ ಇಲ್ಲವಾದರೆ ಕುರುಬನಿಂದ
ಗಿಡವು ನಾಶವಾಗುವಂತೆ ಅದರಂತೆ ಸದ್ವಿಚಾರ ಇಲ್ಲದವನು ಅದೇ ರೀತಿ ಕ
ಹೊಂದುವನು. ಲೋಹಕ್ಕೆ ಹತ್ತಿದ ಜಂಗು ಲೋಹವನ್ನೇ ನಾಶಪಡಿಸಿದಂತೆ ನಿ
ಕುವಿಚಾರ ನಿನ್ನನ್ನೇ ನಾಶಪಡಿಸುವದು. ಈ ಪ್ರಕಾರವಾಗಿ ಬೋಧಿಸಿದ
ಯೋಗಿಯು ಆತ್ಮಚೈತನ್ಯ ಪ್ರತೀಕವಾದ ಚಿಕ್ಕಲಾಂಶವನ್ನು ಶರಣಾಗತ
ದಂಪತಿಗಳಿಗೆ ಕರುಣಿಸಿದನು. ಆ ಬಳಿಕ ಕೊಟ್ಟ ಕುರುಹವನ್ನು ಪೂಜಿಸುತ್ತಾ
ವನ್ನು ಅರಿತು ನೀನು ಸಾಗೆಂದು ಬೋಧಿಸಿದ ಬಳಿಕ ಮತ್ತೆ ಗೃಹಸ್ಥ ಧರ್ಮವ ತಿ
ತೊಡಗಿದನು. ಈ ಸಂಬಂಧವು ಕೋಗಿಲೆ ಮಾಮರ ಸಂಬಂಧಗೂಂಡಂತೆ ಶೋ
ಗೊಂಡಿತ್ತು. ಗೃಹಸ್ಥಾಶ್ರಮವು ಇನ್ನುಳಿದ ಮೂರು ಆಶ್ರಮಗಳಿಗೆ ನಿಜದಾಶ್ರಯ
ನಿಮ್ಮ ದಾಂಪತ್ಯ ಜೀವನ ಮೋಳಿಗೆಯ ಮಾರಯ್ಯನಂತೆ ಇರಲಿ. ದ್ವಿದಳ ಧಾ
ಭಿನ್ನವಾದರೆ ಮೊಳಕೆ ಒಡೆಯದು, ಫಲ ತೋರದು. ಇರುವಿಕೆ ಒಮ್ಮತವಾಗಿರ
ಕಲ್ಯಾಣ ಕ್ರಾಂತಿ ಸಮಯದಲ್ಲಿ ಬಸವರಸಿ ಗಂಗಾಂಬಿಕೆಯಂತೆ ಧರ್ಮಪಾಲನಕ್ಕಾ
ನಿನ್ನ ಜೀವನ ಇರಲೆಂದು ರಾಣಿ ಬಸವಮ್ಮಣ್ಣಿಗೆ ಹೇಳಿದಾಗ ಮಾತೃತ್ವಭಾವದ
ತಾನು ಶಿವಾನುಭವ ಮಂಟಪ ಕಟ್ಟಿಸಿಕೊಡುವ ಬಗ್ಗೆ ಚರನ ಸನ್ನಿಧಿಯಲ್ಲಿ ನಿವೇದ
ಲಾದ ಒಪ್ಪಿಗೆ ಸಿಗಲು ಅದರಂತೆ ಕಟ್ಟಿಸಿ ಸೇವೆ ಸಲ್ಲಿಸಿದಳು. ಗುರುಗಳನ್ನು ನೆನೆಯು
ಅವರು ಇರಲು ಮುಂದೆ ಚರಿತನಾಯಕನು ಮುಂದೆ ಹರಪನಹಳ್ಳಿ ಸಮೀಪ
ಕಲ್ಲಳ್ಳಿಗೆ ಹೋದ ವಿಷಯು ಮುಂದಿನ ಸ್ಥಲದಲ್ಲಿ ತಿಳಿಯುವದು.(—೭೫.)

### ೪ನೇಯ ಸ್ಥಲ

ಕಲ್ಲಳ್ಳಿ ಪತ್ರಿವನದಲ್ಲಿ ಅನುಷ್ಠಾನ ಮಾಡುವ ಚರಿತನಾಯಕರು ಅನುಗ್ರ
ಮಾಡಿದ ವಿಷಯು ಇಲ್ಲಿ ತಿಳಿಯುವದು. ಘನಮಠದ ನಾಗಭೂಷಣ ಸ್ವಾಮಿಗಳನ್ನು
ಸ್ಮರಿಸಿ; ಶಿವಾನುಭವಿ ಚನ್ನವೀರ ಶಿವಯೋಗಿಗಳ ಸಂಚಾರದ ವಿಷಯ ಪ್ರಾರಂಭ
ವಾಗುವದು. ಅವರು ಹೋದಲ್ಲಿ ಬೋಧ ಮಾಡುತ್ತ ಅವರಿಗೆ ಪಾದೋದಕ ಪ್ರಸಾ
ಕೊಡುತ್ತಾ ಸಾಗಿದರು. ನೆರಳು ಬೆನ್ನುಹತ್ತಿ ಬಂದಂತೆ ಧರ್ಮ ಕೀರ್ತಿ ಬೆನ್ನು ಹತ್ತಿ
ಬರುತ್ತದೆ. ಸಮಾಜದಲ್ಲಿ ಕಂಡು ಬರುವ ದೋಷಗಳನ್ನು ತಿದ್ದುತ್ತಾ ಜನಮ
ಕಲ್ಯಾಣ ಮಾಡುತ್ತಾ ಮುಂದೆ ಸಾಗಿ ಹರಪುರದ ಸಮೀಪ ಕಲ್ಲಳ್ಳಿಗೆ ಬಂದಾಗ (ಶಿಲ
ಪಳ್ಳಿ) ಅಲ್ಲಿಯ ಬಿಲ್ವವನ ಪ್ರಕೃತಿ ಸೌಂದರ್ಯ ಕಂಡು, ಅನುಷ್ಠಾನಕ್ಕೆ ಕಮಠಗಿಯ
ಹುಚ್ಚೀಶ್ವರರಂತೆ ಪ್ರಣವನಾದ ಮಾಡುತ್ತ ವಿರಾಜಮಾನರಾದರು. ತಪದಲ್ಲಿ ಲೀ
ನಾದರು. ಯಾವದೇ ಕರ್ಮದ ಮೊದಲು ಓಂ ಎಂದು ಪ್ರಾರಂಭ ಮಾಡು

ಛಾಂದೊಗ್ಯದ (೧/೧) ನುಡಿಯು ಕೂಡ ಹೇಳಿದ ಮಾತು ಶಿವಯೋಗಿ ಅನುಷ್ಠಾನದಲ್ಲಿ ಮೂಡಿ ಬಂದಿತ್ತು. ಪ್ರಣವ ಮಂತ್ರವು ತಾನೆ ನಿಮ್ಮ ಮಯುವು ಗುಹೇಶ್ವರಾ ಎಂಬಲ್ಲಿವ್ವ ಪ್ರಭುವಿನ ವಚನದಂತೆ ಪಂಚಾಕ್ಷರ ಮಂತ್ರವನ್ನು ಗರ್ಭೀಕರಿಸಿಕೊಂಡ ಪ್ರಣವನಾದವು ಗಾಯತ್ರಿ ಮಂತ್ರಮಯವೇ ಆಗಿದೆ. ಸರ್ವ ಶೃತಿ ಶಾಸ್ತ್ರಗಳು ಪ್ರಣವದ ಅಂತರ್ ಭೂತವೇ ಸರಿ. ಗೀತಾ (೧೪-೨೪-೨೭) ದಲ್ಲಿ ಸೂಚಿಸಿದಂತೆ ಓಂ ಎನ್ನದೆ ಯಾವ ಕಾರ್ಯ ಪ್ರಾರಂಭ ಮಾಡದು. ಅಂದರೆ ಓಂ ಎಂದೇ ಪ್ರಾರಂಭ ಮಾಡುವದೆಂಬ ಸೂಚನೆ, ಮಂತ್ರಗಳು, ತಂತ್ರಗಳು ಹಲವಾರು ಇದ್ದರೂ ಕೂಡಾ ಕ್ಷುದ್ರ ಕಾರ್ಯಕ್ಕೆ ಉಪ ಯೋಗಿಸಬಾರದು. (೧ ರಿಂದ ೧೬)

ಇಂತಹ ಪ್ರಣವನಾದದಲ್ಲಿ ಕೂಡಿಕೊಂಡಾಗ ಆ ಧ್ವನಿಯು ಗವಿಯ ಹೊರ ವಲಯದಲ್ಲಿ ಅನುರಣಿತವಾಗುತ್ತಿತ್ತು. ಅದನ್ನು ಆಲಿಸದ ಗೋಪಾಲಕರು ಗ್ರಾಮದಲ್ಲಿ ತಿಳಿಸಲು ಅವರು ಬಂದು ನೋಡಲಾಗಿ ಪೂರ್ವ ಆವರನ್ನು ಕಂಡಂತೆ ಸ್ಮರಣೆಗೆ ಬಂದು ನಮನ ಸಲ್ಲಿಸಿ ಅವರ ಬಿನ್ನಹದ ಮೇರೆಗೆ ಗ್ರಾಮಕ್ಕೆ ದಯಮಾಡಿಸಿದರು. ಅಂದಿನಿಂದ ಚರಿತನಾಯಕರು ಹಾಲವರ್ತಿಯ ವಿರಕ್ತಮಠದವರೆಂದು ಪ್ರಸಿದ್ಧರಾದರು. ಅಲ್ಲದೆ ಅಷ್ಟಾಂಗಯೋಗವು ಕಠಿಣವೆಂದು ಶಿವಯೋಗವು ಸರಳವೆಂದು ಅದನ್ನು ತಿಳಿಸುತ್ತಾ ಪಾದವಿಟ್ಟ ಸ್ಥಾನವನ್ನು ಪವಿತ್ರಮಾಡುತ್ತ ಲಿಂಗಲೀಲಾವಿಲಾಸದೊಳು ಸಾಗ ತೊಡಗಿದರು. ಪ್ರಾತಃಕಾಲ ಗುರುಲಿಂಗ ಜಂಗಮನನ್ನು ಸ್ಮರಿಸಿಕೊಂಡು ಸಾಗಿರೆಂದು ಪರಸತಿಯರೆಡೆಗೆ ನೋಡಬಾರದೆಂದು ಮನವೆಂಬ ಕೋಗಿಲೆಗೆ ತಿಳಿಸಿರೆಂದು ಭೋದಿಸಿದ. ಮಾನವ ಜನ್ಮವೇ ಶ್ರೇಷ್ಠ. ಇದರಲ್ಲಿಯೆ ಗುರುಕೃಪೆ ಸಾಧಿಸಬೇಕೆಂದು ಸತ್ಕಾಯಕ ನಿರತರಾಗಿರೆಂದು ಬೋಧಿಸಿದ ಈ ಬೋಧಕತ್ವದ ಪಾತ್ರತೆಯನ್ನು ನೋಡಿದಾಗ ಶ್ವೇತಾ ಶ್ವತರುಪನಿಷತ್ತಿನಲ್ಲಿ ಬಂದ ದ್ವಾಸುಪರ್ಣಾ-ಶ್ಲೋಕದ ಭಾವ ಇಲ್ಲಿ ಸ್ಮರಣ ತರು ವಂತೆ ಇತ್ತು. ಈ ಪ್ರಕಾರವಾಗಿ ಅಲ್ಲಿಯ ಜೀವಿಗಳನ್ನು ಪಾವನರನ್ನಾಗಿ ಮಾಡಿ; ಆನೆ ಹಾಗೂ ನೀರು ಒಂದೆಡೆ ನಿಲ್ಲರಾರದೆಂಬ ನೀತಿಯಂತೆ ತಮ್ಮ ಮುಂದಿನ ಸಂಚಾರ ವನ್ನು ಆ ಪುರದ ಜನರಿಗೆ ತಿಳಿಸಿದಾಗ ಆ ಪುರದ ಜನರಿಗೆ ಅಗಲುವಿಕೆಯ ನೋವಾ ಯಿತು. ವಿರಹದ ನೋವು ಸಾಧಕನಿಗೆ ಅದು ಉಪಕಾರವೇ ಸರಿ. ಅದು ಪರಮಾತ್ಮ ನನ್ನು ಮರೆಸದು. ಗುಂಡಯ್ಯನ ಕಾಯಕದಂತೆ ವೈದ್ಯನು ಮಾಡುವ ಶಸ್ತ್ರಕ್ರಿಯೆ ಯಂತೆ ಜಂಗಮ ಪುಂಗವನ ಬೋಧ ಸತ್ಕಾಯಕವಾಗಿತ್ತು. ಆಕಾಶಕಡೆಗೆ ಹೋದ ಗಂಧ ತಿರುಗಿ ಬರದಂತೆ ಜಂಗಮನು ಮುಂದೆ ಎಲ್ಲಿಗೆ ಹೋದನು ಎಂಬುವದು ಮುಂದಿನ ಸ್ಥಲದಲ್ಲಿ ತಿಳಿಯುವದು. (—೪೨.)

## ಐನೇಯ ಸ್ಥಲ

ಕಲ್ಲಳ್ಳಿಯಿಂದ ಲಿಂಗನಾಯಕನ ಹಳ್ಳಿಗೆ ದಯಮಾಡಿಸಿದ ವಿಷಯ ಇಲ್ಲಿಪ್ರಾರಂಭ. ಎಡೆಯೂರ ಸಿದ್ದಲಿಂಗೇಶ್ವರರಿಗೆ ನಮನ. ಕಲ್ಲಳ್ಳಿಯಿಂದ ಹೊರಟು ಹಾಳು ಗುಡಿಯಲ್ಲಿ

ಇರುತ್ತಾ ಶಾಂತಿ ಕಾವ್ಯ ಧರಿಸಿದ. ಭೂಪಾವನಾತ್ಮಕನಾದ ಪರದೇಶಿ, ಷ
ವಚನಗಳನ್ನು ಮೆಲಕು ಹಾಕುತ್ತಾ, ಶಿವಭಕ್ತರಿಗೆ ಪಾದೋದಕ ಪ್ರಸಾದ, ಮ
ಳಿಗೆ ಧ್ಯಾನಾಮೃತವನ್ನು ನೀಡುತ್ತ ಬಂದ ಮಹಾ ಶಿವಯೋಗಿಯು ಶುಭ್ರಕಂ
ಯನ್ನು ಹೊತ್ತ ಸ್ವಯ, ಚರ, ಪರಜಂಗಮನು, ಪಂಚಭೂತಾದಿಗಳಿಗೆ ಸ್
ಭೂತನು. ವಿಶ್ವತೈಜಸ ಪ್ರಾಜ್ಞಜೀವರಿಗೆ ತಾ ಸಂಜೀವ ಜಂಗಮನಾಗಿ ಕ್ರಿಯ
ಜ್ಞಾನಯುಕ್ತ ಲಿಂಗಾರ್ಚನೆಯ ಆನಂದದಲ್ಲಿ ಕಾಲ ಕಳೆಯುತ್ತ; ಹಳ್ಳಿ
ಏಕ ರಾತ್ರಿ ಕಳೆಯುತ್ತಾ ಬೋಧಿಸುವ ಜಂಗಮವರೇಣ್ಯನು. ಸಂಚಾರದಲ್ಲಿ ಅನ
ನಯನವೇ ನಂದಾದೀಪ. ಎರಡು ಹುಬ್ಬಿನ ನಡುವಿನ ಚೌಪೀಠವೇ ಮಂಚ
ತಿಳಿದ ಅರ್ಚನವು. ಲಕ್ಷಣ ವಿಲಕ್ಷಣದಲ್ಲಿ ನಡೆದು ನಡೆಯುವ ಸೌಖ್ಯ ಪುರುಷ
(೧-೧೧). ದಕ್ಷಿಣ ಕಾಶಿ ಎನ್ನುವ ಕುರುಕ್ಷೇತ್ರ (ಕುರುವತ್ತಿ)ದಲ್ಲಿ ಮೆರೆಯುತಕ್ಕ
(ಶಿ. ದರ್ಪಣ ಪದ ೭೧/೫) ಗುರು ನಂಜೇಶನ ಶಿಷ್ಯರಿಗೆ ದರ್ಶನ ಕೊಡುತ್ತಾ ತು
ಭದ್ರೆಯನ್ನು ದಾಟಿ ಅಲ್ಲಿಯ ಪ್ರಕೃತಿ ಶೋಭೆಯಲ್ಲಿ ಲಿಂಗಾರ್ಚನೆಯ ಆನಂದ
ಎಷ್ಟೋ ದಿನಗಳವರೆಗೆ ಕಳೆದರು. ಮನವಿಕಾರತೆ ಅಳಿದ ಅವರ ಸ್ಥಿತಿ ನಿತ್ಯ ಚತುರ್ವಿ
ಸುಜ್ಞಾನಸಾರದ ಸ್ವಾನುಭಾವದ ಮೂರ್ತಿಯೆ ತಾನಾಗಿದ್ದ ಗು. ಕ. ತ್ರಿ. ೫
ಶಿವಯೋಗಿ, ನಿರುಪಾಧಿ ಸ್ಥಿತಿಯ ನಿರಂಜನ ಮೂರ್ತಿಯು, ಈ ಪ್ರಕಾರ ಲ
ವಿರುತಿರಲು ಕಗ್ಗೆರೆಯೊಳಗೆ ನಂಬೆಣ್ಣಶೆಟ್ಟಿಯ ಆಕಳು ಎಡೆಯೂರ ಸಿದ್ಧಲಿಂಗೇ
ಇರುವ ಹುತ್ತದ ಮೇಲೆ ಹಾಲು ಕರೆದು ಬರುವಂತೆ ಹರವಿ ಗ್ರಾಮದ ಪು
ಮಠದಯ್ಯನ ಆಕಳು ಚನ್ನವೀರ ಶಿವಯೋಗಿ ಇದ್ದ ಗವಿಯೆಡೆಗೆ ಬಂದು ಹಾ
ಕರೆಯಲಿಕ್ಕೆ ಹತ್ತಿದ್ದರಿಂದ ಮಠದಲ್ಲಿ ಬಂದಾಗ ಬರಿದಾದ ಸ್ಥಿತಿಯನ್ನು ಕಂಡು ಮ
ದಿವಸ ಕಪಿಲೆಯ ಬೆನ್ನು ಹತ್ತಿ ಗುಡ್ಡಕ್ಕೆ ಬಂದನು. ಅಲ್ಲಿ ಆಕಳು ಪೂರ್ವದ
ಗವಿಯ ಕಡೆಗೆ ಹೋಗಿ ಮಾಡುವ ಕಾರ್ಯಾಚರಣೆಯನ್ನು ಕಂಡು ಹರಿವಾಣ ತು
ಹಾಲ ಕರೆದಿರಲು ಹರವಿ ಅಂತಾ ನಾಮದಿಂದಾ ಈ ಪುರವು ಕರೆಯಿಸಿಕೊಳ್ಳುವಂ
ಯಿತು. ಮಠದಯ್ಯನು ಶ್ರೀಗಳ ಪ್ರಭಾವಕ್ಕೆ ಒಲಿದು ಹರವಿಯಲ್ಲಿ ಒಂದು ಹಾ
ಲಿಂಗನಾಯಕನ ಹಳ್ಳಿಯ ಭದ್ರೆಯ ತಟದಲ್ಲಿ ಒಂದು ಮಠವನ್ನು ಕಟ್ಟಿಸಿಕೊಟ್ಟನ
(ಶಿ. ದರ್ಪಣ ೭೩/೧೬) ೭ ರಿಂದ ೨೫ ಶ್ರೀಗಳ ಖ್ಯಾತಿ ಸುತ್ತೆಲ್ಲ ಪ್ರಚಾರವಾ
ಶರಣರು ಬಂದು ನೆಲೆಸಿದರು. ಮಂಗಳಗಳ ಕಾಟ ಕಾರಣವೋ ಅಥವಾ ಸವಿಸ
ನಾಯಕನ ಕಪಿಚೇಷ್ಟೆ ಕಾರಣವೋ ಮಂಗನಾಯಕನ ಹಳ್ಳಿ ಎಂದು ನಾಮಕ
ಜನವದಂತಿ ಇದೆ. (ಶ್ರೀ ಚ. ಶಿ. ಪು. ೨೩) ಮುಂದೆ ಶ್ರೀಗಳ ಪ್ರಭಾವದಿ
ಮಂಗ ಹೋಗಿ ಲಿಂಗನಾಯಕನ ಹಳ್ಳಿ ಎಂದು ಪ್ರಖ್ಯಾತವಾಯಿತು. ಓಂಕಾರನ
ನಿನಾದ ಅದರ ಪ್ರತಿಪಾದನೆ ಜಂಗಮ ತತ್ವದ ನಿರೂಪಣೆ ಹಾಗೂ ಅದನ್ನು ಸ್ವ
ಮೈಗೂಡಿಸಿಕೊಂಡು ಬೋಧಿಸುವ ಶ್ರೀಗಳ ಕೃಪೆ ವರ್ಣನೀಯ. ಇದು ಕಲ್ಯಾ

ಅನುಭವ ಮಂಟಪ ಸ್ಮರಣೆಗೆ ತರುವಂತಿದ್ದಿತು. ಶರಣರು ಹೇಗೆ ಏನೆ ಅವರು ಹಾಗೆಯೇ ಎನಬೇಕಾದುದು. ನಿಜ ಲಾಭ ಪಡೆದ ಪ್ರಮಥ ಶರಣರ ವಿಷಯ ಮುಂದಿನ ಸ್ಥಲದಲ್ಲಿ ನಿರೂಪಣೆವಿದೆ. (೨೬ ರಿಂದ ೩೬).

## ೬ನೇಯ ಸ್ಥಲ

ಆಶ್ರಮದಲ್ಲಿ ನೆಲೆಸಿ ನಿಜದ ಶರಣರ ಸ್ಥಿತಿಯನರಿತು ಹೋದವರ ವಿಷಯ ಕ್ರಮವಾಗಿ ತಿಳಿಯುವದು. ಚನ್ನವೀರರನ್ನು ಸ್ತುತಿಸಿ; ಮುಂದಿನ ವಿಷಯ ನಿರೂಪಣೆ. ಲಿಂಗನಾಯಕ ಹಳ್ಳಿಯ ಗುರುಕುಲದಲ್ಲಿ ನಡೆಯುವ ಅನುಭವ ಗೋಷ್ಠಿಯ ಸುದ್ದಿ ಹಬ್ಬಿ, ಆಶ್ರಮದೆಡೆಗೆ ನಿರ್ಜಲ ಸರೋವರದಿಂದ ಸಜಲ ಸರೋವರದೆಡೆಗೆ ಹಂಸಗಳು ಬರುವಂತೆ ಶರಣ ಸಮೂಹದ ಆಗಮನವಾಯಿತು. ಮಠಮಾನ್ಯಕ್ಕಾಗುವ ಮಾನ್ಯ ವಟುಗಳ ತಂಡು, ಸಾಧಕರನ್ನೆ ಮಾಡಿ, ಶಿವಾನುಭವ ಕಲಿಸಿ, ಅಧಿಕಾರಿಗಳನ್ನಾಗಿ ಮಾಡುವ ಮಹಾಕಾರ್ಯವನ್ನು ಕೈಕೊಂಡರು ಚನ್ನವೀರ ಶಿವಯೋಗಿಯು. ಈ ಗುರುಕುಲದ ಇರುವಿಕೆ ಹಿಂದಿನ ಕಾಲದ ಗುರುಕುಲಗಳ ನಾಲಂದಾ, ತಕ್ಷಶಿಲೆಗಳ ಸ್ಮರಣ ತರುವಂತೆ ಇದ್ದಿತು. (ಮುಂಡಕ- ಅಂಧೇನೈವ ನೀಯಮಾನಾ ಯಥಾಂಧಾಃ) ಅಜ್ಞಾನದಲ್ಲಿದ್ದ ಪಂಡಿತರು ತಾವೇ ಧೀರರೆಂದು ತಿಳಿದು ಹಿಡಿಸುತ್ತಾ ಕುರುಡರನ್ನು ಕರೆದುಕೊಂಡು ಹೋಗುತ್ತಿರುವ ಕುರುಡರಂತೆ ಇರುವ ಅಜ್ಞರನ್ನು ತ್ಯಾಗ ಮಾಡಬೇಕು. ಹಾವು ಪರೆಯನ್ನು ಕಳಚಿಕೊಳ್ಳುವಂತೆ ತತ್ವಬದ್ಧ ಶಿಷ್ಯರು ಸರ್ವವಿದರಲ್ಲಿ ಶರಣಾಗತರಾಗಿ ತಾನೆಂತಾ ಬೆಳಗುವ ಸ್ಥಿತಿಯನ್ನು ಪಡೆದುಕೊಳ್ಳುವ ಈ ಗುರುಕುಲವು ಎಲ್ಲರನ್ನು ಆಕರ್ಷಣೆ ಮಾಡಿಕೊಂಡಿತು. ಪ್ರಾತಃ ಸ್ಮರಣೀಯ ಗುರುಗಳಾದ ಶ್ರೀ ಚನ್ನವೀರ ಶಿವಯೋಗಿಗಳ ಚರಣದಲ್ಲಿ ವಟುಗಳು, ಶರಣರು ಶೋಭಿಸಿದರು. ಆತ್ಮಕ್ರೀಡನು, ಆತ್ಮರತಿಯು ಕ್ರಿಯಾಸಂಪನ್ನನಾದ ಚರಿತನಾಯಕನನ್ನು ಪೂಜಿಸುತ್ತಾ ತಮ್ಮ ಕಾಮನೆಗಳನ್ನು ಪೂರ್ತಿ ಮಾಡಿಕೊಂಡರು. ಆತ್ಮಜ್ಞಾನಿಯನ್ನು ಪೂಜಿಸಲುಬೇಕೆಂಬ (ಮುಂಡಕ-೩/೧/೧೦) ಈ ನುಡಿಯಂತೆ ಶಿವಯೋಗಿಗಳನ್ನು ಪೂಜಿಸಿ ಸಾಫಲ್ಯ ಪಡೆಯುವವರು ಶ್ರಮೆ ಶ್ರದ್ಧಾಭರಿತರು. ಒಂದು ಪಣತಿಯಿಂದ ಮತ್ತೊಂದು ಪಣತಿಯು ಬೆಳಗುವಂತೆ, ಚುಂಬಕವು ಸೆಳೆಯುವಂತೆ ವಟುಗಳನ್ನು ಆಕರ್ಷಣ ಮಾಡುವ ಶಕ್ತಿ ಅವರಲ್ಲಿ ಇತ್ತು. ಒಂದು ಅಳಿದರೆ ಮತ್ತೊಂದು ಸಾಧ್ಯ, ಲೋಕದ ಆಸೆ ತ್ಯಾಗ ಮಾಡಿದವರು ಚಿತ್ತ ಶುದ್ಧವಾಗಿಸಿಕೊಂಡವರು ಎಲ್ಲ ಪರೀಕ್ಷೆಗೆ ಸಿದ್ಧರಾಗಲು ಬರುತ್ತಿದ್ದರು. ವಿರತಿ ಬಲಿಯದೇ ಬಲಹೀನನಿಗೆ (ಮುಂಡಕ-ನಾಯಮಾತ್ಮಾ-೩/೨/೪) ಆತ್ಮಲಾಭ ದೊರೆಯದು. ಶಿವಯೋಗಿಯೇ ಸಾಗರ, ಶರಣ ಪುಂಗವರೇ ಅದರ ತೆರೆಗಳು, ಸುಜ್ಞಾನಾಸ್ತೆ ಪಡೆದು ಸಮರಸವಾಗಲು ಬರುತ್ತಿದ್ದರು.

ಅಷ್ಟೇ ಅಲ್ಲದೆ ಗುರುನಂಜೇಶನ ಕರಕಮಲ ಸಂಜಾತರು ಗುರುಕುಲದ ಸೇವಾಭಾಗಿಗ (೧ ರಿಂದ ೨೫).

ಲಿಂಗಾಂಗಗಳ ಸಂಬಂಧ ನವಲಿಂಗ ಸಕೀಲದ ಮುಖಾಂತರ ತಿಳಿದುಕೊ ಬೇಕಾದುದು ಪ್ರತಿಯೊಬ್ಬ ವೀರಶೈವನ ಕರ್ತವ್ಯ. ಯಾರು ಕ್ರಿಯಾಚಾರ ಸಂಪನ್ನರಿ (ಮುಂಡಕ-ಕ್ರಿಯಾವಂತಹಾ-೩/೨/೧೦) ಅವರಿಗೆ ಶ್ರೀವಿದ್ಯೆಯನ್ನು ಬೋ ಬೇಕೆಂಬ ವಿಧಿಯಂತೆ ಸಾಗಿರಲು, ಆದರಂತೆ ಸಾಧಕರು ಬಂದಿರಲು ಶಿವಯೋಗಿ ಬೋಧಿಸುತ್ತಾ ಸಾಗಿದ. ಅದರಂತೆ ತಿಳಿದು ಪ್ರಖ್ಯಾತರಾದ ವೈಲಾರದ ಬಸವಲಿ ಬನ್ನಿಮಟ್ಟಿ ಚನ್ನಪ್ಪ, ಹೊಳಲಿನ ಚೆನ್ನಪ್ಪನೆಂಬ ಶರಣರು; ಸಣ್ಣ ಬರಹದ ರಾಚೋ ಟೇಶ, ಶಾಂತ ವೀರೇಶ, ಯರನಾಳದ ಬಾಲಲೀಲಾ ಮಹಾಂತರು. ಇವರಲ್ಲಿ ಶಾ ವೀರೇಶ ಅಗ್ರಗಣ್ಯ. ತಾವು ಪ್ರಮುಖರಾಗಿದ್ದರೂ ಶಾಂತವೀರರಿಂದಲೇ ಸಾಧಕ ಬೋಧಿಸುವ ಪದ್ಧತಿ ಹಾಕಿ ಬಿಟ್ಟ ಮಹಾನುಭಾವರು. ಬಾಲವಟುಗಳಿಗೆ ಮೇ ಸಾಧಕರಿಂದ ಬೋಧಿಸುವ ಪದ್ಧತಿ ಈ ಗುರುಕುಲದಲ್ಲಿ ನಿತ್ಯಾಚರಣೆಯಾಗಿತ್ತು ನಾಲಗೆಯು ರುಚಿ ತಕ್ಷಣ ತಿಳಿಯುವಂತೆ ವಟುಗಳ ಭಾವವನ್ನು ತಕ್ಷಣ ಅ ಅದರಂತೆ ಆಚಾರ, ವಿಚಾರ ನಡೆಯುತ್ತಿತ್ತು. ಪ್ರಾತಃಕಾಲ ಪ್ರಾರ್ಥನೆ, ಶಾ ವೀರೇಶರಿಂದ ಪ್ರಾರ್ಥನೆ, ವಟುಗಳಿಗೆ ಲಿಂಗಪೂಜಾ ಪದ್ಧತಿ, ಶಿವಾನುಭವ ಗೋ ಕ್ರಮವಾಗಿ ನಡೆಯುತ್ತಿತ್ತು. ಆಚಾರ್ಯನು ಪೂರ್ವರೂಪ ಶಿಷ್ಯನು. ಉತ್ತರ ರು ವಿದ್ಯೆಯೇ ಸಂಧಿ, ಪ್ರವಚನನೇ ಸಂಧಾನವೆಂಬುವ (ತೈತರೀಯ-ಶಿಕ್ಷಾವಲ್ಲಿ ೧/ ರೀತಿ ಇಲ್ಲಿ ನಡೆಯುತ್ತಿತ್ತು. ವಿದ್ಯಾದಾನ ಮಾಡುವದೇ ಶಿವಯೋಗಿಗಳ ಕಾರ್ಯ ಅದರ ಅರ್ಪಣವೇ ಅವರಿಗೆ ಆನಂದ ಪಾರಮಾರ್ಥ ಜೀವನಕ್ಕೆ ಸ್ವಾಧ್ಯಾಯ ಪ್ರ ನಾಧಿ (ತೈತರೀಯ-೧/೯ ವೃತಂ ಚ ಸ್ವಾದ್ಯಾಯ ಪ್ರವಚನೇಚ) ಕಾರಣವೆಂಬ ತಿಳಿದ ಶಿವಯೋಗಿ ತಿಳಿಸಲು ಮುಂದಾದರೆ ಬಂದ ವಟುಗಳಿಗೆ ಸಂತಸವಾಗಿ ಬೋಧಿ ಬೋಧಿಸಲು ಮಾರ್ಗದರ್ಶನ ನೀಡುತ್ತಿದ್ದರು. ಸೇವೆ ಮಾಡುವಲ್ಲಿ ಯಾವದಕ ಹೇಸಿಕೊಳ್ಳದ ಸ್ಥಿತಿ ಅಲ್ಲಿಯ ಶರಣ ವಟುಗಳಿಗೆ ಬಂದಿತ್ತು. ಅಭ್ಯಾಸ ಮಾ ಹೊರಟಂಥಹ ಸ್ನಾತಕರಿಗೆ ಕೊನೆಗೆ ತಿಳಿಸಿದಂತೆ (ತೈತರೀಯ-೧/೧೧/ಆಚಾ ದೇವೋ ಭವ) ಗುರು ಅತಿಥಿಗಳನ್ನು ದೇವರೆಂದು ಮನ್ನಿಸಿರಿ. ಅರಮನೆಗೆ ಬಂದ ಪ್ರ ವನ್ನು ಬಸವಣ್ಣ ಬರಮಾಡಿಕೊಂಡಂತೆ, ಬರಮಾಡಿಕೊಳ್ಳಿ. ನೀವು ಅಭ್ಯಾಸ ಮ ಕೊಂಡಂತಹ ವಿಷಯವನ್ನು ಸ್ವಾಧ್ಯಾಯ ಪ್ರವಚನಾದಿ ಬಲಿಸಿಕೊಂಡು ಪಂ ಚಾರಾದಿಗಳ ಸರ್ವರಿಗೆ ತಿಳಿಸಿಕೊಡುತ್ತಾ ಸಾಗಿದರೆ ಅದುವೆ ಗುರುದಕ್ಷಿಣೆಯೆಂದು ಹೇ ಕಳಿಸುತ್ತಿದ್ದರು. ಯಾವ ಸೇವೆಗೂ ಹೇಸಿಕೊಳ್ಳದ ಶಾಂತವೀರೇಶರಿಗೆ ಚಿನ್ಮಯಾನುಗ್ರ ಮಾಡಿದರು. ಹಾಗೂ ಇಂತಹ ಶಾಂತವೀರೇಶರು ಸಾಧಕರಾಗಿ ಬೆಳೆದು ಚನ್ನಪೀರ ಯೋಗಿಗಳ ಕಟಾಕ್ಷ ಪಡೆದ ಮಹಾಂತಲೀಲೆಯನ್ನು ಮುಂದಿನ ಸ್ಥಲದಲ್ಲಿ ಅಲಿಸುವ (೨೬ ರಿಂದ ೪೬).

## ೭ ನೇಯ ಸ್ಥಳ

ಇಲ್ಲಿ ಮುಳಗುಂದ ಬಾಲಲೀಲಾ ಮಹಾಂತ ಶಿವಯೋಗಿಗಳು ಗುರುಕುಲ ವಾಸದಲ್ಲಿದ್ದ ಪ್ರಸಂಗ ನಿರೂಪಣೆ ಈ ಸ್ಥಳದಲ್ಲಿದೆ. ಹಂಪೆಯ ಮಹಿದೇವ ಶಿಷ್ಯನಾದ ರಗಳೆ ರಾಜ ಹರಿಹರನನ್ನು ಸ್ಮರಿಸಲಾಗಿದೆ. ತನ್ನಲ್ಲಿ ವಿದ್ಯೆಗೆ ಬೆಲೆ ಬರಬೇಕಾದರೆ, ಅಭ್ಯಾಸ ಮಾಡುವ ವಟು ಅಲ್ಲಿ ಬರಬೇಕು. ಮಗು ಉಂಡರೆ ತಾಯಿಗೆ ಸಂತಸ. ಹಾಗೆ ವಟುಗಳನ್ನು ಕಂಡು ಶಿವಯೋಗಿಗಳಿಗೆ ಸಂತಸ. (ತೈತ್ತರೀಯ ಶಿಕ್ಷಾವಲ್ಲಿ ೧/೪). ಈ ಬ್ರಹ್ಮಚಾರಿಗಳ ಆಗಮನ ನಿರೀಕ್ಷಿಸುತ್ತಿದ್ದರು. ಬಂದಂಥ ವಟುಗಳನ್ನು ಬ್ರಹ್ಮ ಚರ್ಯತ್ವದ ಬಗ್ಗೆ ಪರೀಕ್ಷೆ ಮಾಡುವ ಪರೀಕ್ಷಕರಂತಿದ್ದರು. ಸಮಾಜಕ್ಕಾಗಿ ತಮ್ಮನ್ನು ತ್ಯಾಗ ಮಾಡಿಕೊಂಡಿದ್ದ ಮಹಾನುಭಾವಿ ಕಲಿಯುಗದಲ್ಲಿ ಕರೆದು ಶಿಷ್ಯಗೆ ನನುಸಿ ಹೇಳಬೇಕೆಂಬ ಪ್ರಭುವಿನ ವಚನ (೫೨) ಸೂಚಿಸುತ್ತದೆ. ತಮ್ಮ ಸಂಚಾರದಲ್ಲಿ ವಟು ಗಳ ಶೋಧನೆ ಮಾಡುತ್ತಿದ್ದರು. (೧ ರಿಂದ ೭).

ಆಲಮಟ್ಟಿಯ (ಯರನಾಳ) ಹಿರೇಮಠ ಚನ್ನಮಲ್ಲಾರ್ಯ ಅನ್ನಪೂರ್ಣೆಗೆ ಮಕ್ಕಳಿಲ್ಲದೆ ಚಿಂತಿಸುತ್ತಿರಲು ಮುಳಗುಂದದ ಗುರು ಮಹಾಂತ ಸ್ವಾಮಿಗಳು ಸಂಚಾರ ಮಾಡುತ್ತ ಬಂದು ಇವರಿಗೆ ಒಂದು ಮಗುವನ್ನು ತಮ್ಮ ಜೋಳುಗೆಯಿಂದ ಕೊಟ್ಟು ಅವನ ಭಾವಿ ವಿಷಯ ತಿಳಿಸಿ ಹೋಗುತ್ತಾರೆ. ಅದರಂತೆ ಇವನು ಎರಡನೆಯ ವರ್ಷ ದಲ್ಲಿ ಪಾಠ ಶಾಲೆಗೆ ಹೋಗದೆ ತನ್ನ ಎಂಟನೆಯ ವಯಸ್ಸಿನಲ್ಲಿ ಕಿವಿ ಟೊಪ್ಪಿಗೆ ಹಾಕಿ ಕೊಂಡು ಜೋಳಿಗೆ ಧರಿಸಿಕೊಂಡು ಗುರುಶೋಧನೆಗೆ ಹೊರಡುತ್ತಾನೆ.

ಮಧ್ಯದಲ್ಲಿ ಶೋಧನೆ ಮಾಡುತ್ತಾ ಲಿಂಗನಾಯಕನ ಹಳ್ಳಿಯ ಗುರುಕುಲಕ್ಕೆ ಬಂದು ತಲುಪಿ ಆಶ್ರಯ ನೀಡಿ ಉದ್ಧಾರಮಾಡಿರೆಂದು ಬೇಡಿಕೊಳ್ಳುತ್ತಾನೆ. ಉಪ್ಪು ನೆಲ್ಲಿಕಾಯಿ ಸಂಬಂಧದಂತೆ ತನ್ನನ್ನು ಅಪ್ಪಿ ತತ್ವದ ಹಾಲನ್ನು ಕುಡಿಸೆಂದು ಬೇಡಿ ಕೊಳ್ಳುತ್ತಾನೆ. ಈ ಪ್ರಕಾರ, ಮಹಾಂತನ ಬೇಡಿಕೆಯನ್ನು ಒಪ್ಪಿಕೊಳ್ಳಲು ಅವನು ಅಲ್ಲಿ ಚತುರ್ವಿಧ ಸೇವೆ ಮಾಡುತ್ತಾ ಅಭ್ಯಾಸದಲ್ಲಿ ತೊಡಗಿದನು. ಮುಂದೆ ಶಿವ ಪೂಜಾ ವಿವರ ತಿಳಿಸಬೇಕೆನಲು ಒಪ್ಪಿ ಶಾಂತವೀರರಿಗೆ ಅಪ್ಪಣೆ ಮಾಡಿದರು. ಆ ಪ್ರಕಾರ ಮಹತೆ ಗುಣವಿಡಿದ ಮಹಾನುಭಾವರ ಅಪ್ಪಣೆಯ ಪ್ರಕಾರ, ಲಿಂಗದೀಕ್ಷೆ ಯನ್ನು ಮಾಡಿ ಅದನ್ನು ಸದಾ ಧರಿಸಬೇಕೆಂದು ನಿರೂಪಿಸಿದನು. (-೩೦) ತಾನು ಧನ್ಯನಾದೆನೆಂದು ಸ್ತುತಿಸಿದನು. ಈ ತಾತ್ವಿಕ ತಿಳಿಯದ ಕೆಲವೊಂದು ಮಂಗಗಳು ಲಿಂಗವನ್ನು ಮೊಣಕಾಲಕ್ಕಾದರು ಕಟ್ಟು, ಮೀನಗಂಡಕ್ಕಾದರೂ ಕಟ್ಟು ಎಂದು ನುಡಿಯುವ ಭಂಡರ ಮಾತು ಕೇಳದು. ವೇಶ್ಯೆಯ ಸಮದಂತೆ ಬರಿಮಾತು ಕಲಿತ ಭೂಪರು ಸಾಕಷ್ಟು. ವೀರಶೈವರನ್ನು ತನ್ನಡೆಗೆ ಒಲಿಸಿಕೊಳ್ಳಲು ತೋರಿಕೆಗಾಗಿ ಧರಿಸಿಕೊಂಡಂತಹ ಸೋಗಿಗಳು ಉಂಟು. ಇಂತಹ ದುರುಳರಿಗೂ, ವೇಶ್ಯೆಯರಿಗೂ

ಏನು ಅಂತರವಿದೆ ? (–೩೬) ಮಧುರ ಗುಣ ಇರುವೆ, ವೇಳೆ ಕೋಳಿ, ಬಳ್ಳ ಗೋತ್ರ ಕಾಗೆ ಬಲ್ಲದು. ಹೊಟ್ಟೆ ಪಾಡಿಗಾಗಿ ನಾಲ್ಕು ಮಾತು ಕಲಿತು ಮಾ ಮಾಡುವವರು "ಕೋಳಿಯಿಂ ಕೀಳು".

ಸಾತ್ವಿಕ, ಸಂಪನ್ನ ಮಹಾಂತದೇವರು ಶಾಂತವೀರರ ಕರುಣೆಯಿಂದ ಎಲ್ಲವ ಅರಿತು ಸಾಗಿರಲು ನದಿಯಲ್ಲಿ ಸ್ನಾನಮಾಡುವ ಸಮಯದಲ್ಲಿ ಲಿಂಗವು ಅಂಗದಿ ಕಳಚಿಕೊಂಡಿತು. ಮಳೆ ಬಂದರೂ ಕೂಡ ನದಿಯಿಂದ ಮೇಲೆ ಬರಲಿಲ್ಲಾ. ವಿಷಯ ಶಿವಯೋಗಿಗಳಿಗೆ ತಿಳಿದು ಅವರು ಬರಲು ಅವರ ಕೃಪೆಯಿಂದ ಅ ದೊರೆತು ಬಿಟ್ಟಾಗ ಗ್ರಹಿಸದೆ ಇರುತಿರಲು ಚನ್ನವೀರರ ಅಪ್ಪಣೆಯ ಮೇ ಸ್ವೀಕರಿಸುವನು. ಈ ಪ್ರಕಾರವಾಗಿ, ಸ್ವಾತಿಮುತ್ತಿನಂತೆ ಸಿದ್ಧರಾದ ಮಹಾಂತ ಇರುತ್ತಿರಲು ಬಸವಮ್ಮ ಶರಣೆಗೆ ಮೊಲೆಗೆ ಹುಣ್ಣು ಆಗಿರಲು ಅದನ್ನು ಕಳೆದು ಮೊಲೆ ಹಾಲನ್ನು ಕುಡಿದು ಬಾಲಲೀಲೆ ಮಾಡಿದ ಕಾರಣ ಬಾಲಲೀಲಾ ಮಹಾ ನೆಂದು ಪ್ರಸಿದ್ಧನಾದನು. ಅಲ್ಲದೆ ಪದಗಳನ್ನು ರಚಿಸಿ ಶಿವಕವಿ ಎನಿಸಿಕೊಂಡ (–೪೮).

## ೮ ನೇಯ ಸ್ಥಲ

ಇಲ್ಲಿ ಮೈಲಾರ ಬಸವಲಿಂಗಗೆ ಅನುಗ್ರಹ ಮಾಡಿದ ನಿರೂಪಣೆ ಅದೆ. ಶತಕತ್ರ ಅನುಭವ ಸೂತ್ರ ಮುಂತಾದ ಕೃತಿ ಬರೆದ ಮೊಗ್ಗೆಯ ಮಾಯಿದೇವರ ಯಿರಲೆಂದು ಬೇಡಿಕೆ. ಅಮೃತವು ತಿರುಗಿ ಹಾಲು ಆಗಲಾರದು. ಶಿವಯೋ ಕೃಪೆ ಪಡೆದವರು ಭವ ಬಂಧನಕ್ಕೆ ಮರಳಿ ಬರರು. ಸಾತ್ವಿಕ ಶಿಷ್ಯನಿಗೆ ಬೋ ಉಂಟು ಬಂದವರೂ ಬಹಳ, ಬಂದು ಹೋದವರೂ ಬಹಳ, ಅರಿತು ಮರೆತವ ಉಂಟು. ಅವರಲ್ಲಿ ಲಿಂಗನಾಯಕನ ಹಳ್ಳಿ ಸಮೀಪದ ಮೈಲಾರಪುರ ವಾಸಿ ಬಸವಪ್ಪನು. ವ್ಯಾಪಾರ ಕಾಯಕವುಳ್ಳವನು. ಮಹಾತ್ಮರ ಸೇವೆ ಮಾಡಿದರೆ ಆ ವೃದ್ಧಿಯೆಂದು ಮನು ನೀತಿ (೨/೧೨೧). ತಪ, ಸೇವೆ, ಜಂಗಮ ತೃಪ್ತಿ ಒಂದಕ್ಕೊಂದು ಹೆಚ್ಚಳ ಫಲವನ್ನು ಕೊಡುವವು. ಇಂತಹ ಜಂಗಮ ಗುರುಕ ದಲ್ಲಿ ಮನಮುಟ್ಟಿ ಸೇವೆ ಮಾಡತಕ್ಕವರಿದ್ದರು. ಮನಮುಟ್ಟಿ ಮಾಡದ ವೇಶ್ಯೆಯರ ಅಪ್ಪುಗೆಯ ಸಮವಾದುದು. (ಚ-ಬ-ವ ೮೧೦) ಅನು ಪೂರ್ಣ ಶಿವಾನುಭವ ಗೋಷ್ಠಿಗೆ ಬಸವಲಿಂಗ ಬರುತ್ತಿದ್ದ. ರುಚಿಯು ನಾ ಅರಿಯುವಂತೆ ಇಲ್ಲಿಯ ಗುರುಕುಲ ವಾಸಿಗಳು ತೀಕ್ಷ್ಣಮತಿಗಳಾಗಿದ್ದರು. ಶಿವಯೋಗಿ ವ್ಯಕ್ತಿತ್ವ ಎಲ್ಲಡೆ ಪ್ರಸಾರವಾಗಿ, ವಿಷಯ ತಿಳಿದ ಬಸವಲಿಂಗನು ಈ ಸಭೆಗೆ ಬರುತ್ತಿದ್ದನು. ಬುದ್ಧನುಡಿಯಂತೆ (ದಮ್ಮ ಪದ–೬/೯) ಧನ-ಕನಕ ಆಸೆ ರಹಿತ ಸದಾಚಾರಿ. ಇಂತಹ ಸದಾಚಾರ ಸಂಪನ್ನತೆ ಕೂಡಿಕೊಂಡಿರುವ ಗುರುಕುಲ

ಬಸಪ್ಪನು ಬರುತ್ತಿದ್ದನು. ವಿಷಯ ಸುಖಕ್ಕಾಗಿ ಪ್ರಪಂಚವನ್ನು ಮಾಡಿ ಕೊನೆಗೆ ಹೊಟ್ಟೆಯ ಪಾಡಿಗಾಗಿ ಕಾವಿಯನ್ನು ಧರಿಸಿ ಗುರುವಾಗಬೇಕೆಂಬ ಈಗಿನ ಬೈರೂಪ ಗಾರರ ರೀತಿ ರಹಿತವಾದ ಸತ್ಯಾರ್ಥ ಗುರುಗಳೆಂದೇ ನಂಬಿ ಬಸವಪ್ಪನು ಗುರು ಕುಲಕ್ಕೆ ಬರುತ್ತಿದ್ದ. ಜಂಗಮ ಪುಂಗವನಿಂದ ಪ್ರಸಾದ, ವಿದ್ಯೆ, ಕೃಪೆ ಪಡೆದು ಅವಸಿಗೆ ಎದುರಾಗಿ ಬೀಳುವ ಇಂದಿನ ಜೀವಿಗಳಂತೆ ಅಲ್ಲದ ನಿಜವಾದ ಭಾವಿಕನಾದ ಬಸಪ್ಪನು ಗುರುಕುಲಕ್ಕೆ ಬರುತ್ತಿದ್ದ. ಸತ್ಕಾರ್ಯದಲ್ಲಿ ನಿರತನಾದ ಶರಣನು ವಚನಾರ್ಥ ಪ್ರಿಯ, ನಿತ್ಯದಭ್ಯಾಸಿಯೂ ಹೌದು. ಗುರುಕುಲದ ಸಾಧಕ ವಟುಗಳ ಜೊತೆ ಹೊಂದಿಕೊಂಡು ಪರತರವಾದಂತಹ ಶಿವಾನುಭವ ಪಡೆಯಲು ತಾರಾಮಂಡಲವಿಡಿದು ಶಶಿಯು ಗತಿಸಿದಂತೆ ಚನ್ನವೀರನು ತಿಳಿಸಿದ ಮಾರ್ಗದಲ್ಲಿ ನಡೆಯುವ ಪುರುಷನಾಗಿದ್ದ. ಈತನಿಗೆ ಗೋರಪ್ಪಗಳ ಆಚರಣೆ ಸರಿಬರಲಿಲ್ಲ. ಅದಕ್ಕಾಗಿ ಗುರುಕುಲದ ಸಾಧಕನಾಗಿ ಜಂಗಮ ಭಕ್ತಿ ಸಂಪನ್ನನಾಗಿ ಶಿವಯೋಗಿಗಳಿಂದ ಚಿನ್ಮಯಾನುಗ್ರಹ ಪಡೆದು ಬಸವ ಲಿಂಗನಾದ. ಹಾಗೂ ಅದರ ಅನುಭವವನ್ನೆ ಕಾವ್ಯ ರೂಪದಲ್ಲಿ ಶಿವಾನುಭವದರ್ಪಣ ಇತ್ಯಾದಿ ಗ್ರಂಥಗಳನ್ನು ಬರೆದು ಶಿವಕವಿ ಎನಿಸಿಕೊಂಡನು. ಶಿವಾನುಭವಿಗಳ ಸ್ಥಿತಿಯನ್ನು ನೊರಜ, ಸೊಳ್ಳೆ ತಿಳಿಯಲಾರವು. ಗಿರಿಯಲ್ಲಿ ನವಿಲು ಕುಣಿಯುವಂತೆ, ಹಂಸದಂತೆ, ಕೋಗಿಲೆಯಂತೆ ಅನ್ಯಕೆಳಸದೆ ಶರಣನ ಮನಸ್ಸು ಸದಾ ವಚನ ವಿಚಾರದಲ್ಲಿಯೇ ಮುಳುಗುತ್ತಿದ್ದ. ಇವನ ಪ್ರತಿಷ್ಠೆ ಬೆಳೆಯುತ್ತಿರುವದನ್ನು ಕಂಡು ಕೆಲ ಸಾಂಪ್ರದಾ ಯಕರು ಕಿರುಕುಳ ಕೊಡಬೇಕೆನುವಾಗ ಹಡಗಲಿ ತಾಲೂಕಿನ ಕಟ್ಟಾ ವೈಷ್ಣವ ತಹಶೀಲ್ದಾರರು ಬಂದಾಗ ಅವನ ಕಿವಿ ಊದಲು ಆಗ ಅವನು ಶರಣರನ್ನು ಕರೆದು ತನ್ನ ಮತಾಂಧತೆ ತೋರಿಸಿದ (–೩೧). ಆ ಸಮಯ ಗೋವಿನ ಮಹತ್ವ ತಿಳಿಸುವ ಶ್ಲೇಷ ಪದ್ಯ "ಗೋವಿಂದನಾದಿ........" (ಶಿ. ದರ್ಪಣ ಪದ ೩೬) ಹಾಡಿದನು. ಮತಾಂಧ ತಹಶೀಲ್ದಾರನಿಗೆ ಮಾತ್ರ ತನ್ನ ಹಟ ಸಾಧಿಸಿದಂತೆ ಭಾಸವಾಗಿತ್ತು. ಅದರಂತೆ "ಹರಿ ಭಕ್ತನಹುದು ಹರ ಭಕ್ತನಲ್ಲಂ".... ಈ ಪದವನ್ನು ಹಾಡಿ ಇದರಲ್ಲಿ ಮಂತ್ರದ ಸ್ಮರಣೆ ಮಾಡಿದ ರೀತಿ ತೋರಿಸಿದ ಅವನ ವಿಚಕ್ಷಣ ಮತಿಗೆ ಸಾಕ್ಷಿ ಅಧಿಕಾರಿಗೆ ಸಮಾಧಾನ ವಾದರೆ ಕೇಡರಿಗೆ ಮುಖಭಂಗವಾಯಿತು. ಗುರು ಅಧಿಕಾರದ ಮುಂದೆ ಯಾರ ಅಧಿಕಾರವೂ ಬೇಡ ಎನ್ನುವ ಅವನ ವಾಣಿ ಸ್ಮರಿಸುವಂತಹದು. (ಶಿ. ದರ್ಪಣ ಪದ–೯) ಬ್ರಹ್ಮನು ಹೆಚ್ಚೆಂದರೆ ಚಿವುಟಿದ ತನ್ನ ತಲೆಯನ್ನು ಮತ್ತೇಕೆ ಹುಟ್ಟಿಸಿಕೊಳ್ಳಲಿಲ್ಲ ? ಹರಿಯು ಕಾಮನನ್ನು ಏಕೆ ಉಳಿಸಿಕೊಳ್ಳಲಿಲ್ಲ ? ಆದ ಕಾರಣ ಇವರೆಲ್ಲರಿಗಿಂತ ಗುರುವೆ ಶ್ರೇಷ್ಠ ವೆಂದು ಸಾರಿದನು. ಈ ಪ್ರಕಾರ ಸಾಗಿರಲು ಒಮ್ಮೆ ಶಿವಯೋಗಿಗಳು ಹೊರಗೆ ಹೋಗುವ ಸಮಯ ವಟುವರರನ್ನು ಕರೆದುಕೊಂಡು ಹೋಗಿ ತಾವೊಬ್ಬರೆ ಮುಂದೆ ಹೋದಾಗ ಹುಲಿಯೊಂದು ಆ ವಟುವಿನ ಮೇಲೆ ಎರಗಲು ಚೀತ್ಕಾರ ಕೇಳಿ ಶಿವ ಯೋಗಿಗಳು ಆ ಮರಿಯು ನಮ್ಮದು ಹುಲಿರಾಯಾ ಅವನನ್ನು ಬಿಟ್ಟು ಬಿಡು ಎಂದಾಗ ಆ

ವಟುವನ್ನು ಬಿಟ್ಟು ಹೋಗಿಬಿಟ್ಟಿತು. ಶಿವಯೋಗಿಯ ಮಾತನ್ನು ಪಾಲಿಸಿತು. (-
ಶಿವಾನುಭವಿಗಳ ತಪಃಪ್ರಭಾವದಲ್ಲಿ ಕ್ರೂರ ಪಶುಗಳು ವೈರಭಾವವನ್ನು
ಮಾಡಿರುವದು ಸ್ವಾಭಾವಿಕ. ಇದಕ್ಕೆ ಪತಂಜಲ ಸೂತ್ರವೂ ಸಾಧಾರವು. ಸರ್ವಾ
ಭಾವ ಶರಣರಲ್ಲಿ ಕಂಡು ಬರುತ್ತದೆ. (ಅಕ್ಕನ ವ.–೨೭೪–೩೩೬) ಗಿಳಿ ಕೋಗಿ
ಮಲ್ಲಿಕಾರ್ಜುನ ಎಲ್ಲಿದ್ದಾನೆಂದು ಆಕೆ ಪ್ರಶ್ನೆ ಮಾಡುತ್ತಾಳೆ. ಅಲ್ಲಿ ಶಿವಚೈ
ಕಂಡಾಗಲೇ ಆ ಭಾವ ಹೊರಡುವದು ಶಕ್ಯ. ಅಂತೂ ಗುರುಕೃಪೆಯಿಂದ
ವಟುವಿಂದ ಆದ ಗಾಯ ಮಾಯ್ದು ಪ್ರಸಾದ ದೇವರು ಗುರುಗಳ ಸೇವಾಚಾ
ಮುಂದುವರೆದ. ಮುಂದೆ ಒಂದು ದಿನ ಸಂಪ್ರದಾಯದಂತೆ ಹಾಗೂ ಗುರುಕು
ಸಂಸ್ಕೃತಿಯನ್ನು ಮುಂದುವರಿಸಿಕೊಂಡು ಹೋಗುವ ನಿಮಿತ್ಯವಾಗಿ ಎಲ್ಲ
ಭಕ್ತರು ಹರಪುರದ ನಾಯಕರನ್ನು ಕರೆಸಿ ಪ್ರಸಾದ ದೇವರನ್ನೆ ತಮ್ಮ ಉತ್ತ
ಕಾರಿಯೆಂದು ಸೂಚನೆ ಪಡಿಸಿದರು. (–೫೨).

ಈ ನಾಮಕರಣ ಸಂಪ್ರದಾಯವನ್ನು ಕೆಲವೊಂದು ಮೂರ್ಖರು ಒಪ್ಪ
ಚೀಟಿಯ ಸಂಪ್ರದಾಯ ಇಟ್ಟುಕೊಂಡಿದ್ದಾದರೆ ಅದರಲ್ಲಿ ಕತ್ತೆಯ ಹೆಸರು ಬ
ಅದನ್ನೆ ಬಿಡುವರೇನು ? ರೋಗಿಯ ಸ್ಥಿತಿ ವೈದ್ಯ ಬಲ್ಲ. ಮಠಕ್ಕೆ ಆಗುವ ವಟು
ಲಕ್ಷಣ ಪೂರ್ವ ಮಠಾಧಿಕಾರಿ ಮಾತ್ರ ಬಲ್ಲ. ಒಂದು ಮಠಕ್ಕೆ ಒಬ್ಬ ಮರಿಯಿರತಕ್ಕ
ನಿಯಮ. ಕೆಲವೊಂದು ಮಂಗಗಳು ಇಬ್ಬರು ಇರಬೇಕೆಂದು ವಾದಿಸುತ್ತವೆ.
ಎನ್ನುವವರು ಒಂದು ಕನ್ಯೆಗೆ (ವಧುವಿಗೆ) ಇರ್ವ ವರಗಳನ್ನು ಜೋಡಿಸುವ ಮ
ಕಾರ್ಯ ಮಾಡದೆ ಬಿಡುವರೆ ? ಧಾರ್ಮಿಕ ಪೀಠದಲ್ಲಿ ಗೆದ್ದಲಿ ಹುಳು ನುಸಿಯ
ಹೊಕ್ಕು ಮಠಗಳನ್ನು ಹಾಳು ಮಾಡಿಬಿಡುವ ಹೇಸಿಗಳಿಗೂ ಕೊರತೆ ಇಲ್ಲ. ಕೆಲವೊ
ಮಠಾಧೀಶರು ತಮ್ಮ ಮಠಕ್ಕೆ ತಾವು ಓರ್ವರೆ ಸರ್ವಾಧಿಕಾರಿಗಳಾಗಿದ್ದು ಎರಡನೆ
ಮಠಕ್ಕೆ ಈರ್ವ ಮರಿಗಳನ್ನು ಮಾಡಿ, ಆ ಸ್ಥಾನಕ್ಕೆ ಕಲಹ ಹಚ್ಚುವ ಮಹಾ
ಭಾವಿಗಳೂ ಉಂಟು. ಕೆಲವೊಂದು ಕುಹಕ ಜೀವಿಗಳು ಏನೊಂದು ಅರಿಯದ
ಪೆದ್ದನನ್ನು ಕರೆದುಕೊಂಡು ಗೌಪ್ಯದಲ್ಲಿ ತಾವೇ ಅವನಿಗೆ ಕಾವಿಯನ್ನು ತೊ
ಧಾರ್ಮಿಕ ಸಮಸ್ಯೆ ತಂದು ಇಡುವವರೂ ಉಂಟು. ಯಾವಾಗಲೂ ವಾದ ಸಂ
ದಾಯ ತತ್ವಬದ್ಧವಾಗಿರಬೇಕು. ಆದಕಾರಣ ನಾಮಕರಣ ಸಂಪ್ರದಾಯ ಶ್ರೇ
ಅದಕ್ಕಾಗಿ ಗುರುಕುಲದ ಚನ್ನವೀರ ಶಿವಯೋಗಿಗಳು ಪ್ರಸಾದ ದೇವರನ್ನು ಸೂ
ಪಡೆಸಿದರು. ಅದಾವ ಕರ್ಮವೊ ಮೈಲಾರ ಬಸವಲಿಂಗ ಶರಣರು ಹುಳ (ಹ
ಮುಟ್ಟಿದ ವಸ್ತು ಪೂಜೆಗೆ ಯೋಗ್ಯವಲ್ಲವೆಂದು ಅಭಿಪ್ರಾಯವಿಟ್ಟಾಗ ಇನ್ನುಳಿದವ
ಚಕಿತವಾಯಿತು. ಮುಂದೆ ಗುರುವಿಗೆ ಎದುರಾಡಿದನೆಂಬ ವಿಚಾರವು ಉದಯವ
ಮರುಗಲಿಕ್ಕೆ ಹತ್ತಿದ. ಆಗ ಚಿಕ್ಕವರಾದರೂ ಮಹಾಂತ ವಟುಗಳು ಗುರು ಕೃಪೆ

ತಾರಕವೆಂದು ಸೂಚಿಸಲು; ಅದರಂತೆ ಮತಿಗೆ ಅಮಂಗಲತೆ ಹೋಗಲಾಡಿಸಲು; ಸ್ತುತಿ ಮಾಡಲು ಪ್ರಾರಂಭಿಸಿದ. ಚಿಕ್ಕವನಿಂದ ಯೋಗ್ಯವಾದ ಮಾತು ಬಂದರು ಕೂಡ ಗ್ರಹಿಸಬೇಕೆಂಬ ಮನುವಿನ ನುಡಿಯಂತೆ (ಮನು ೨/೧೫೧–೨೩೯) ಕಿರಿಯ ಸಾಧಕನಾದ ಮಹಾಂತ ವಟುವಿನ ಮಾತನ್ನು ಶರಣನನು ಮನ್ನಿಸಿದನು. (–೨೦)

ಶ್ರೀ ದೇಶಿಕನೆ ! ನೀ ನುಡಿಸಿದಂತೆ–ನಾ ನುಡಿದೆ. ಜಾಲದಲ್ಲಿ ಬಿದ್ದವನನ್ನು ಎಬ್ಬಿಸುವದು ಗುರುಸ್ವಾಮಿಯ ಕರ್ತವ್ಯ. ತಪ್ಪಿದ ಬಸವನಿಗೆ ಎಚ್ಚರಗೊಳಿಸಿದ ಅಲ್ಲಮನೆ ನೀನೆಂದು ತಿಳಿದಿರುವೆ. ತೆರಣಿಯ ಹುಳು ತಾನೇ ನೂಲು ಸುತ್ತಿ ಕಷ್ಟಪಡುವಂತೆ–ದುಃಖಪಡುತ್ತಿದ್ದೇನೆ. (ಅಕ್ಕನ ವಚನ–೩೨) ಹೃದಯಾರಾಧ್ಯ ಗುರುವೆ ಕ್ಷಮಿಸು. ನಿನ್ನ ಸಮ ನೀನೇ ಸೈ. ಅರುವನ್ನು ಕುರುಹು ರೂಪದಲ್ಲಿ ಕೊಟ್ಟು ಒಳಗಿನ ಚೇತನ ರೂಪವಾದ ರಸವನ್ನು ಕುಡಿಸಿ ಶರಣಾಗತರನ್ನು ಮುಕ್ತಮಾಡುವ ಗುರುನಾಥನೆ ನೀನಾಗಿದ್ದು ನಾನು ತಪ್ಪಿನುಡಿದ ಮಾತನ್ನು ಕ್ಷಮಿಸು. ಪತಂಗ ಹಾರಿಸಲು ಸೂತ್ರ ವಿರದೆ ಹಾರಲಾರದು. ನಿನ್ನ ಕೃಪೆಯಿಲ್ಲದೆ ನಾನು ಏನನ್ನೂ ಸಾಧಿಸಲಾರೆ. ನೀನು ಚಿದ್ಭಾವ ರಸಿಕತೆಗಾಮಿಯ ನಾಯಕನು. ಶರಣ ಸತಿಯೆಂಬ ನಾನೋರ್ವ ನಾಯಕಿಯು. ನಿರ್ಮೋಹಿಯಾದ ಗುರುವೆ ಕ್ಷಮಿಸು. ತಗಣಿ ಕಡಿದರೆ ತೊಗಲು ಕೊಯ್ಯುವರೆ ? ಗುರು ಸೋತು ಶಿಷ್ಯ ಗೆದ್ದರೆ ಗುರುವಿಗೆ ಸಂತಸವು. ಎದುರಾಡಿದ ನಿಂದೆಯು ಒಡಲಾಗ್ನಿಗೆ ನಿನ್ನ ಕರುಣಾ ಜಲವೇ ಶಾಂತಿರಸ. ಅಜಾತಶತೃವಾದ ನೀನು ಮಾತೃ ಸ್ವರೂಪದಲ್ಲಿ ಶಿಶುವೆಂದು ತಿಳಿದು ಜೋ ಜೋ ಎಂದು ಎನಬಾರದೆ ? ಈ ಪ್ರಕಾರ ಶರಣನ ಬೇಡಿಕೆ–ಕಂಡು ಹೃದಯ ಅರಳಿ ಅವನಿಗೆ ಹಿತೋಪದೇಶ ಮಾಡಲು ಪ್ರಾರಂಭ ಮಾಡಿದರು. ಬಹಿರಷ್ಟಾವರಣದಿಂದ ಅಂತರಂಗದ ಅಷ್ಟಾವರಣಕ್ಕೆ ಸೇರಿದ ನಿನ್ನಿಂದ ತಪ್ಪು ನುಡಿ ಹೊರಟದ್ದು ಆಶ್ಚರ್ಯ. ಮಂದಮತಿಯುಳ್ಳವರು ನುಡಿಯುವದು ಸ್ವಾಭಾವಿಕ. ನೀ ನುಡಿದದ್ದು ಆಶ್ಚರ್ಯ. ಅಷ್ಟಾವಕ್ರನನ್ನು ಕಂಡು ನಕ್ಕಂತಾಯಿತು ಸ್ಥಿತಿ. ನಿನ್ನದು ರಸಗೂಢವಾಗಿರುತ್ತದೆ. ಟೆಂಗಿನ ತಿರಳನ್ನು ಬಿಟ್ಟು ಪರಟೆಯನ್ನೇ ಬಯಸುವಿಯಾ ? ಇಷ್ಟಲಿಂಗವನ್ನು ಸವಿಯುವ ಸಂತುಷ್ಟ ಶರಣನನಿಗೆ ಶಂಕೆ ಬರದು. (ಚ. ಬ. ವ.–೧೨೬೪, ೧೨೫೧, ೧೨೫೮,) ಭಾವ ಭರಿತರಿಗೆ ಚರ್ಮ ಲಕ್ಷ ಬರದು. ಹೃದಯವೇ ಪರಿಶುದ್ಧ ಗಂಧದಿಂದ ಕೂಡಿಕೊಂಡಿರುವಾಗ ಹೊರಗಿನ ಗಂಧವೇಕೆ ? (ಅಕ್ಕನ ವಚನ–೨೪೩) ತುಂಬಿದುದು ತುಳಕದು ಗುರುಗಳಿಂದ ಪ್ರಕೃತಿ ಭಾವವನ್ನೆ ಹರಿದು ಸುಕೃತಿ ಭಾವವನ್ನೆ ತೋರಿ ಸಂಸ್ಕೃತಿ ಬದ್ಧನಾಗಿ 'ಕೊನೆಯ ಸ್ಥಿತಿ ಹೊದ್ದವನಿಗೆ ಹೊರದೃಷ್ಟಿ ಏಕೆ ? ಪಣತೆ ಕಲೆಯಿಂದ (ಕಣ್ಣಿನಿಂದ) ಕೂಡಿದರೆ ಪ್ರಕಾಶ ಕೊಡದಿರದೆ ? ಗೊರಲಿ ಹತ್ತಿದ ಶ್ರೀಗಂಧ ಸುವಾಸನೆ ಬೀರದೆ ಇರುವದೆ ? ದೀಪದಿಂದ ದೀಪ ಬೆಳಗಲು ಭಿನ್ನವೇನಿವುದು ? ಪ್ರಮಾಣಕ್ಕೆ ತಕ್ಕಂತೆ ಪ್ರಕಾಶ ಕೊಟ್ಟೇ ತೀರುವದು. ಇಲ್ಲಿಯವರೆಗೆ ಹೇಳಿದಂತಹ ವಿಷಯ

ತತ್ವ ಪ್ರಿಯನಾದ ನಿನಗೆ ಸಮಾಧಾನವಾಗಿರುವಬಹುದಲ್ಲವೆ ? ಈ ಪ್ರಕಾರ ಗುರು ಬೋಧನೆಯಿಂದ ಶರಣನಿಗೆ ಆನಂದವಾಗಿ ಗುರುಗಳಿಗೆ ಕೃತಜ್ಞತೆ ಸಲ್ಲಿಸಿ ಅವನ ಸ್ಥಿತಿಯನ್ನು ಕಂಡು ಗುರುಗಳು ಕರುಣಾಪೂರಿತರಾಗಿ ಬಸವಲಿಂ ಬಾ ಎಂದು ಅಪ್ಪಿಕೊಂಡರು. ಬಾಲ ಸಾಧಕರಾದ ಮಹಾಂತರಿಗೂ ಇದು ಸಂತಸ ತಂದಿತು. (–೧೧೧).

## ೬ ನೇಯ ಸ್ಥಲ

ಈ ಸ್ಥಲದಲ್ಲಿ ಅಷ್ಟಾವರಣದ ವಿಚಾರವನ್ನು ಕ್ರಮವಾಗಿ ನಿರೂಪಿಸಿದ್ದಾ ಮಣ್ಣೂರ ಮಠಾಧೀಶರಾದ ನಾಗೇಶ್ವರ ಶಿವಯೋಗಿಗಳ ಶಿಷ್ಯರಾದ ಮನ್ಮಥ ಸ್ವಾ ಗಳು ಮಹಾರಾಷ್ಟ್ರದಲ್ಲಿ ಆಗಿ ಹೋದ ಪ್ರಸಿದ್ಧ ಕವಿಗಳು. ಕಪಿಲಾಧಾರದ ನಿವಾಸಿ ಜನ್ಮ ಜನ್ಮಾಂತರವು ಅಷ್ಟಾವರಣದ ತಾತ್ವಿಕತೆ ಸ್ಥಿರವಾಗಿರಲೆಂದು ಬೇಡಿಕೊ ರುವ ಸ್ಥಿತಿಯನ್ನು ಸ್ಮರಿಸಲಾಗಿದೆ. (ಶರಣ ಚರಿತಾಮೃತ ಪುಟ ೬೪೫) ಸೂರ್ಯೋ ದಯವಾಗಿದೆ. ಪಕ್ಷಿಗಳ ಚಿಲಿಪಿಲಿ ನಾದ, ವಟುಗಳ ಪ್ರಾತಃಸ್ಮರಣೆ ಹಾಗೂ ಅ ನಿರಂತರ ನಡೆದ ಈ ಗುರುಕುಲವು ಬುದ್ಧ ಮಹಾದೇವಿ, ಚನ್ನಬಸವಣ್ಣ ಮು ದವರು ಪಡೆದ ದಿವ್ಯ ಜ್ಞಾನವನ್ನು ಈ ಗುರು ಕುಲದಲ್ಲಿ ಪಡೆದು ಪಾವನರಾದ ಬಹಳ ವಾಗದ್ವೈತಿಯಾಗದೆ; ಸಹಜಾನುಭವಿಯಾಗಿರುವದನ್ನು ಕಂಡ ಚನ್ನ ಶಿವಯೋಗಿಗೆ ಸಂತೃಪ್ತಿ. ಪೂಜ್ಯರು ಆಶ್ರಮದ ಕಾರ್ಯಕಲಾಪವನ್ನು ಶಾಂತವೀ ಒಪ್ಪಿಸಿ ಭಕ್ತರ ಬಿನ್ನಹಕ್ಕೊಪ್ಪಿ ಸಂಚಾರ ಮಾಡುತ್ತ ಬನ್ನಿಮಟ್ಟಿಗೆ ಆಗಮಿಸಿ ಹುಮ್ಮಾ ಎಂಬ ಪಕ್ಷಿಯ ತತ್ತಿಯು ಅಂತರಿಕ್ಷದಲ್ಲಿಯೇ ಒಡೆದು ತಾಯಿಯ ಸ್ಮರಣ ಮಾತ್ರದಿಂದ ಹೋಗಿ ಮುಟ್ಟುವಂತೆ ಆ ಭಾಗದ ಭಕ್ತರು ಆಕರ್ಷಿತ ಬಂದರು. ಅವರಲ್ಲಿ ಚನ್ನಪ್ಪನು ಶ್ರೀಗಳಿಂದ ತತ್ವಾರ್ಥ ತಿಳಿಯಲೋಸ್ಕರವಾಗಿ ಆಶ್ರ ಬರತಕ್ಕವನಂತವನಾದನು. ಇವರು ಬರುವದನ್ನು ಕಂಡು ವನ್ಯ ಪಶುಗಳು ಗೋ ಯರಂತೆ ನೋಡುತ್ತಿದ್ದವು. ಬೃಹಸ್ಪತಿ ಶಿಷ್ಯನಾದ ಉದ್ಧವನು ಬರಲು ಕೃಷ್ಣನೆ ತಿಳಿದು ಭಾವುಕರು ಅವನನ್ನು ನೋಡುತ್ತಿದ್ದರು. ಹಾಗೆ ಇವರ ಬರುವಿಕೆಯ ಶರಣರು, ಭಕ್ತರು ನೋಡುತ್ತಿದ್ದರು. ಆಶ್ರಮಕ್ಕೆ ತಲುಪಿದ ಚನ್ನಪ್ಪನು ಆವರಿದು ಕಾಲು ಚಾಚಿ ಕೂಡ್ರುವದನ್ನಾಗಲಿ, ಎತ್ತರ ಆಸನ ಬಯಸಿದವನಾಗಲಿ ಇರಲ (ಮನು ೨/೧೯೮–೨೦೦) ಮೃದುವಾಗಿ ಆಶ್ರಮದಲ್ಲಿ ಸೇರಿ ಆಶ್ರಮಕ್ಕೆ ದ್ರೋ ಬಗೆಯುವಂತಹ ಈಗಿನ ಜೀವಿಗಳಂತೆ, ಚನ್ನಪ್ಪನು ಅಲ್ಲ. ಸಾತ್ವಿಕ ಚನ್ನಪ್ಪ ಶಾಂತವೀರರ ಮುಖಾಂತರ ಲಿಂಗದೀಕ್ಷೆ ಮಾಡಿಸಿದರು. ನಿತ್ಯ ಶಿವಾನುಭವ ಗೋ ಯಲ್ಲಿ ಭಾಗ ವಹಿಸುವ ಪ್ರಸಂಗದಲ್ಲಿ ಅಷ್ಟಾವರಣದ ಬಗ್ಗೆ ನಿರೂಪಣೆ ಮ ಬೇಕೆಂದು ಬೇಡಿಕೊಂಡ. ಆ ಪ್ರಕಾರವಾಗಿ ಗುರುಗಳು ವಿವರಣೆ ಮಾಡಿದರು. (–

ಎಂಟು ಸಂಖ್ಯೆಯೆಂಬುದನ್ನು ಹಲವಾರು ಗ್ರಂಥಗಳಲ್ಲಿ ಉಪಯೋಗಿಸಿದ ವಿಷಯ ಬರುತ್ತದೆ. ಭೋಗ–ತನು, ಅಷ್ಟಾಂಗಯೋಗ–ಅರ್ಚನೆ–ಮದಗಳು ಇವೆಲ್ಲ ಎಂಟರಿಂದ ಕೂಡಿಕೊಂಡಿವೆ. ಬೌದ್ಧ ಧರ್ಮದಲ್ಲಿಯೂ ಅಷ್ಟಾಂಗಿಕ ಮಾರ್ಗಕ್ಕೆ ಮಹತ್ವ ಕೊಟ್ಟಿದ್ದಾನೆ. ಕ್ಷಮಾ, ತಿತಿಕ್ಷಾ, ನಿಂದೆ ಮಾಡದಿರುವದು, ಮತ್ತೊಬ್ಬರಿಗೆ ಪೆಟ್ಟು ಹಚ್ಚದಿರುವದು, ಸಾತ್ವಿಕ ಆಹಾರ ಇವೆಲ್ಲ ಬುದ್ಧನ ಧರ್ಮದಲ್ಲಿ ಪಾಲಿಸತಕ್ಕಂತವು. ಅಲ್ಲದೆ ಯೋಗ್ಯವಾದುದನ್ನು ಗ್ರಹಿಸುವರು. ಸಂಕಲ್ಪ, ಸಮ್ಯಕ್‌ವಚನ, ಸಮ್ಯಕ್ ಕರ್ಮ, ಸಮ್ಯಕ್‌ಜೀವನ, ಸಮ್ಯಕ್‌ಉದ್ಯೋಗ, ಸಮ್ಯಕ್‌ಸ್ಮೃತಿ, ಸಮ್ಯಕ್‌ಧ್ಯಾನ, ಇವೆ ಅಷ್ಟಾಂಗಿಕ ಮಾರ್ಗಗಳು. (ದಮ್ಮ ಪದ ೧೪/೭೪, ೨೦/೧) ಈ ಪ್ರಕಾರ ವಾಗಿ ಅಲ್ಲಿ ಹೇಳಿದಂತೆ ವೀರಶೈವ ಧರ್ಮಶಾಸ್ತ್ರದಲ್ಲಿ ಅಷ್ಟಾವರಣವು ಮುಖ್ಯ. ಇದು ಕವಚದಂತೆ, ಚಳಿಗೆ ಹೊತ್ತ ಕೌದಿಯಂತೆ ಸಾಧಕನನ್ನು ಅವು ರಕ್ಷಣೆ ಮಾಡುತ್ತವೆ. ಆವರಣವೆಂದರೆ ಹೊದಿಕೆ. ಲೌಕಿಕದ ವಿಷಯಾದಿಗಳ ಸಿಲುಕದ ಹಾಗೆ ಇರಿಸುವ ಸಾಧನಗಳೇ ಅಷ್ಟಾವರಣಗಳು. ಪರಶಿವನ ಸತ್, ಚಿತ್, ಆನಂದವೇ ಗುರು ಲಿಂಗ ಜಂಗಮರಾಗಿ ತೋರುತ್ತಾರೆ. ಪಂಚಭೂತಾದಿಗಳೇ ಗುರು ಸಂಸ್ಕಾರ ಪಡೆದು, ಪ್ರಸಾದ, ಪಾದೋದಕ, ರುದ್ರಾಕ್ಷಿ, ವಿಭೂತಿ, ಮಂತ್ರವಾಗಿ ಮಾರ್ಪಡುತ್ತವೆ. ಇವು ಸರಪಳಿಯಂತೆ ಒಂದಕ್ಕೊಂದು ಸಂಬಂಧ ಹಾಗೂ ಅಂಗ ಪ್ರಾಣಾತ್ಮ ಇವು ಮೂರು ಒಂದಕ್ಕೊಂದು ಸಂಬಂಧ ಒಂದಿರಲ್ಲೊಂದು ತೋರಲಾರವು. ಮುಂದೆ ತ್ಯಾಗಾಂಗ, ಭೋಗಾಂಗ, ಯೋಗಾಂಗ, ತ್ರಿವಿಧ ಅಷ್ಟಾವರಣದ ರೂಪ ಕವು ಸರ್ವದಕ್ಕೂ ಗುರುಪಥವೇ ಮೂಲ. ಗುರುವು ಸುಜ್ಞ ಸತ್ಯ ಅನುಭವಿ. ಪಿಂಡಾಂಡ ವನ್ನು ಬೆಳಗಿಸುವ ಮಹಾಪುರುಷ. (ದೀಕ್ಷಾ ಬೋಧೆ ೧/೩೯–೪೬) ಗುರುವಿನ ಮಹತ್ವ ಬಹಳ. ಅವನ ಅವಶ್ಯಕತೆಯುಂಟು, ಸ್ವಸ್ವರೂಪನೇ ಅವನು, ಸಿದ್ಧಾಂತ ಪ್ರಜ್ಞನು. (ಸಿದ್ಧಾಂತ ಶಿಖಾಮಣಿ ೬/೩) ಇವನ ಕೃಪೆ ಪಡೆದಂತವನು ಸರ್ವಾಂಗ ಲಿಂಗಮಯಿ ಯಾಗುವನು. ದೀಕ್ಷೆ ಮೂಬಗೆ ಅದುವೇ ಸಂಸ್ಕಾರದಲ್ಲಿ ಇಪ್ಪತ್ತೊಂದು ಬಗೆಯಾಗು ವದು. (ಸಂಸ್ಕಾರ ಪುಟ ೨೩–೩೬–೧೦೧, ಚ. ಬ. ವ–೯೧೭) ಗುರುಕೃಪೆಯಿಂದ ಮಲತ್ರಯಗಳು ನಾಶವಾಗುವವು. ಪತಿವ್ರತೆಯು ಪತಿಯ ಧ್ಯಾನಿಸುವಂತೆ ಶರಣ ಲಿಂಗದಿಂದೊಡಗೂಡಿರುವನು. (–೩೫) ಶ್ರೀ ಗುರು ಕೊಟ್ಟ ಕುರುಹೇ ಲಿಂಗ. ಅದು ಪ್ರಣವರೂಪಉಳ್ಳದ್ದು. ಹರಿ ಬ್ರಹ್ಮರಿಗೂ ಕೂಡ ಇದರ ನೆಲೆಯು ತಿಳಿಯ ಲಾರದೇ ಹೋದರೂ ಪಂಚ ಸೂತ್ರವುಳ್ಳದೇ ಪೂಜೆಗೆ ಯೋಗ್ಯ. ತುಂಬಿದ ತಂಬಿಗೆ ಯಲ್ಲಿ ಗಗನ ಅಡಕವಾದಂತೆ ಆತ್ಮ ಚೈತನ್ಯವು ಗುರು ಅನುಗ್ರಹಿಸಿದ ಕುರುಹು ಲಿಂಗದಲ್ಲಿ ಅಂತರಭೂತ. (–೪೧). ಇದರಲ್ಲಿ ಎಲ್ಲ ತೀರ್ಥಗಳು ಇದನ್ನು ಧರಿಸಿದವಗೆ ಸೂತಕಗಳ ಬಾಧೆ ಇಲ್ಲಾ. ಪೂರ್ವ ಸಂಬಂಧ ಅಳಿದು ಗುರು ಸಂಬಂಧವಾಗುವದು. (ದಿಕ್ಷಾ–೧/೬೧–೬೨, ೧೧೬ ರಿಂದ ೧೨೨) ನಾರಿಯು ಕನ್ನಡಿಯಲ್ಲಿ ತನ್ನನ್ನೆ ನೋಡಿ

ಕೊಳ್ಳುವಂತೆ, ಲಿಂಗದಲ್ಲಿ ತನ್ನಿರವನ್ನೆ ಅರಿವುದು. (ಶತಕತ್ರಯ ೧/೨೩)
ನೋಟದಲ್ಲಿ ತನ್ನನ್ನು ತಾನು ಮರೆಯಬೇಕು. ಕೂಡುವ ಕೂಟ ತಾನೇ
ಭವಿಸಿದಂತೆ,ನಿವೃತ್ತಿ ಕ್ರಮದಿಂದ ಪ್ರವೃತ್ತಿ ಕ್ರಮವಾಗಿ ಲಿಂಗ ಬಹಿರೂಪಣೆ ಗುರುವು
ಮಾಡುತ್ತಾನೆ. ಪ್ರವೃತ್ತಿಯಲ್ಲಿ ಪ್ರಾತ್ಯಕ್ಷಿಕತೆ ಇದ್ದರೆ ನಿವೃತ್ತಿಯಲ್ಲಿ ನಿರ್ಣಯ
ವಿಕೆಯಿದೆ. ಶಿಷ್ಯನ ತಲೆಯ ಹಿಂಭಾಗದ ಏಕದಳದ ಪಶ್ಚಿಮ ಶಿಖಾಚಕ್ರದ
ಸ್ವಚ್ಛದಾ ನಿರಂಜನ ಬ್ರಹ್ಮವೇ ಗುರುಕರುಣೆಯಿಂದ ಭಾವಲಿಂಗವಾಗಿ, ಶಿಖಾ
ನಿಶ್ಶೂನ್ಯ ಬ್ರಹ್ಮವನ್ನು ಧ್ಯಾನಿಸಿ ಮನದಲ್ಲಿ ಪ್ರಾಣಲಿಂಗವನ್ನಾಗಿ ಬ್ರಹ್ಮ
ನಿಷ್ಕಲಬ್ರಹ್ಮವನ್ನು-ನೇತ್ರದ್ವಾರಾ ಸದ್ರೂಪಗೊಳಿಸಿ ಇಷ್ಟಲಿಂಗವನ್ನಾಗಿ ಶಿಷ್ಯನ
ಮಲಕ್ಕೆ ತಂದಿರಿಸುತ್ತಾನೆ. ಮುಂದೆ ಅನುಗ್ರಹದ ನವಲಿಂಗಗಳನ್ನು ಕರದಿಷ್ಟ
ದಲ್ಲಿ ಸಮನ್ವಯಗೊಳಿಸುವನು. ಇದರ ಫಲವೇ ನಿವೃತ್ತಿ ಫಲ ಪಡೆಯು
(ತಿರಳು-p ೨೩೨) ಲಿಂಗಾಂಗ ಸುಖಗಳನ್ನು ತಾನೇ ಅನುಭವಿಸಬೇಕು. ನಾ
ಮೇಲೆ ಅದನ್ನು ಧರಿಸಬೇಕು. ರಟ್ಟೆ, ಶಿಖೆ, ಕಂಠದಲ್ಲಿಯೂ ಕೂಡ ಧ
ನಿಯಮವಿದೆ. ಯಾವನು ಲಿಂಗಪೂಜೆ ಮಾಡುತ್ತಾನೆಯೋ, ಅವನು ಲಿಂಗದಂ
ಕಾಣುತ್ತಾನೆ. ಶಿರದಲ್ಲಿ ಲಿಂಗ ಧರಿಸಿದರೆ ಯಾರಿಗೂ ಬಾಗಕೂಡದು. (-೪೭)
ಮನ-ಧನ ಗುರುಲಿಂಗಕ್ಕೆ ಅರ್ಪಿತವು. (ಬ. ವ. ೨೦೪, ೨೦೬) ನಿಜದಾಚರ
ಮೈಗೂಡಿಸಿಕೊಂಡಂತಹ ಜಂಗಮನಿಗೆ ಮನ್ನಿಸಬೇಕು ಇದು ಚನ್ನಬಸ
ನವರ ಆಜ್ಞೆ. (ವಿ. ದಾ. ಸಿ. ಪು. ೩೮೧). ಗುರುಲಿಂಗ ಜಂಗಮರು ಒಂದೇ ಆಗಿದ್ದ
ಶಿಷ್ಯನ ತ್ರಿಕರಣ ಶುದ್ಧಿಗೆ ತ್ರಿವಿಧವಾಗಿವೆ ಸ್ವಯ, ಚರ ಪರ ಎಂದು. ಸಿಂಧು, ಬ
ನಂತೆ ಭಕ್ತಿ ಅಳವಡಬೇಕು. ಜಂಗಮನೇ ಲಿಂಗ, ಲಿಂಗವೇ ಜಂಗಮವೆಂಬ
ಸೂಕ್ತಿ ಮರೆಯದು. (ಬ. ವ. ೩೯೨-೪೦೨) ಜಂಗಮಾರ್ಚನೆಯೇ ಮಾಟ ಕೂ
ಸಂಗಮನ ರಸಕೂಟವೆಂಬ ನುಡಿಯು (ಬ. ವ. ೧೭೭) ನುಡಿಯ ಘೋ
ಮಾಡುತ್ತದೆ. ಜಂಗಮ ವ್ಯಸನಿಯಾಗಬೇಕು. (ಬ. ವ. ೧೯೬-೨೬೨) ಬೇರಿಗೆ
ಹಾಕಲು ಗಿಡವು ಚಿಗುರುವದು. ಲಿಂಗದ ಬಾಯಿಯೆ ಜಂಗಮವೆಂದು ತಿಳಿ
ಸಕಲ ಸಂಪತ್ತು ಪ್ರಾಪ್ತಿ. ಅಲ್ಲದೆ ಎಣ್ಣೆ ಬತ್ತಿ ಮುಖಾಂತರ ಜ್ಯೋತಿಯ
ಬೆಳಗುವಂತೆ ದೀಪಕ್ಕೆ ಬತ್ತಿಯೆ ಮುಖ. (ಬ. ವ. ೪೭೦ ಗು. ಕ. ತ್ರಿ ೨೧೨)-
ಇಂತಹ ಜಂಗಮನ ಅರ್ಚನ ಫಲವೇ ಪಾದೋದಕ ಪ್ರಸಾದವು. ಜಂಗಮನ
ಸ್ಪರ್ಶದಿಂದ ನೀರಿನ ಜಡತ್ವ ಹೋಗಿ ಕರ್ಮಭೇದನ ಶಕ್ತಿ ಅದರಲ್ಲಿ ಬರುತ್ತ
(ವಿ. ದಾ. ಸಿ ೪೭೯) ಶರಣರು ಇದನ್ನೆ ಆಶಿಸುವರು. (ಚ. ವ. ೫೩೫) ಎಲ್ಲ
ಗಳು ಇಲ್ಲಿ ಅಡಕಾಗಿಹವು. ಮೋಳಗಿಯ ಮಾರಯ್ಯನೇ ಇದಕ್ಕೆ ಸಾಕ್ಷಿ. ಪಾದೋ
ದಶವಿಧವೆಂದು ತಿಳಿಯುವದು.(ಅಕ್ಕನ ವಚನ-೧೯೨-ವಿ. ದಾ. ಸಿ. ೫೦೧) ಗುರು

ಜಂಗಮನಿಂದ ಪ್ರಾಪ್ತಿಯ ಪ್ರಸಾದವೇ ಶುದ್ಧ, ಪ್ರಸಿದ್ಧ ಪ್ರಸಾದವದು. ಇವು ಕ್ರಮ ದಿಂದ ರೂಪವನ್ನು, ರುಚಿಯನ್ನು, ತೃಪ್ತಿಯನ್ನು ನೀಡುತ್ತವೆ ಹಾಗೂ ತನು, ಮನ, ಭಾವ ಶುದ್ಧಿಯಾಗುತ್ತದೆ. (ಚ. ಬ. ವ. ೬೧೮) ಜಂಗಮನ ಪಾದದ ಸ್ಪರ್ಶದಿಂದ ಆದದ್ದೇ ಪ್ರಸಾದ; ಅನ್ನ ಪ್ರಸಾದವಿಲ್ಲದಿದ್ದರೆ ಸ್ಮರಣ ಶಕ್ತಿ ಇಲ್ಲವಾಗುವದು. ಆದ್ದ ರಿಂದಲೇ ಅನ್ನಕ್ಕೆ ಬ್ರಹ್ಮವೆಂದು ಹೇಳಿದ್ದಾರೆ. (ತೈತ್ತರಿಯ ೩/೩) ಇಲ್ಲಿ ಮರಳು ಶಂಕರದೇವ ಹಾಗೂ ಆಯದಕ್ಕಿ ಮಾರಯ್ಯ ಚರಿತೆ ಸ್ಮರಣೀಯ. ಎಂತಹ ಕಷ್ಟ ಬಂದರೂ ಶರಣರು ಅನುಭವಿಸುತ್ತಾ ಹೋಗುವರು. ಲೌಕಿಕರಂತೆ ಖೇದಪಡುವದಿಲ್ಲ. ಪ್ರಸಾದದಲ್ಲಿ ಗುರು ಪ್ರಸಾದದಿಂದ ಜ್ಞಾನ ಪ್ರಸಾದದವರಗೆ ಹನ್ನೊಂದು ಬೇಧ ಹೇಳಲ್ಪಡುತ್ತದೆ-೬೮ ವೀರಶೈವರಿಗೆ ಭಸ್ಮ ಮುಖ್ಯ. ಇದರಲ್ಲಿ ಸೋಪಾಧಿಕ, ನಿರು ಪಾಧಿಕ ಎಂದು ಎರಡು ಭಾಗಗಳು ಗೋಮಯದಿಂದಾದುದೇ ಸೋಪಾದಿಕ.ಚಿದ್ಭಸ್ಮವೇ ನಿರುಪಾಧಿಕವು. ಒಂದು ಒಳಧಾರಣ ಇನ್ನೊಂದು ಹೊರಧಾರಣ (ದೀಕ್ಷಾ-೨/೪೧-೪೯, ಶಿ. ಶಿ. ೭/೧೫) ಉಪಾಧಿನಾಶವಾಗಿ, ತಾನೆ ತಾನಾಗಿ ಸತ್ಕ್ರಿಯಾಚರಣೆಯಿಂದ ಬೆಳಗುವ ಸುತೇಜವೇ ನಿರುಪಾಧಿಕ ಭಸ್ಮವು ಇದು ಕ್ರಿಮಿನಾಶಕವು. ನೊಸಲಿಗೆ ವಿಭೂತಿಯೇ ಶೃಂಗಾರ. ಈ ಪ್ರಕಾರ ಭಸ್ಮದ ಮಹಿಮೆಯನ್ನು ಸರ್ವ ಶರಣರು ನಿರೂಪಿಸಿದ್ದಾರೆ. (ಅಕ್ಕನ ವಚನ ೧೦೫) ಭಸ್ಮದಂತೆ ರುದ್ರಾಕ್ಷಿ ಧಾರಣವೂ ಬಹು ಮುಖ್ಯ. ತ್ರಿಪುರ ಸಂಹಾರ ಕಾಲದಲ್ಲಿ ಹರನ ನಯನದಿಂದ ಹೊರಟ ಹನಿಗಳೇ ರುದ್ರಾಕ್ಷಿಗಳು. (ಶಿ. ಸಿ. ೭/೪೬-೪೭) ಜಂಗಮನ ಪಾದಸ್ಪರ್ಶದಿಂದಾ ರುದ್ರಾಕ್ಷಿ ಗಳಾಗುತ್ತವೆ. ಶರೀರದಲ್ಲಿ ಕ್ರಮಡಿದು ಧರಿಸಬೇಕು. (ದೀಕ್ಷಾ-೨೫೭) ಇದರಿಂದ ಅಘನಾಶವು. ಸಕಲ ಸೌಖ್ಯವೂ ಹೌದು. (ಸ. ಶಿ. ೭/೯೧, ಶಿ. ದರ್ಪಣ ಪ. ೩೨) ಚಿದ್ಭಸ್ಮ ಧರಿಸಲು "ನಾ" ಎಂಬುದು ಹುರಿದು ಹೋಗುತ್ತದೆ. ರುದ್ರಾಕ್ಷಿ ಧರಿಸಲು "ನೀ" ಎಂಬುದು ಸುಳಿಯದು. (ಗು. ಕ. ತ್ರಿ. ೩೧೮)-೭೬. ರುದ್ರಾಕ್ಷಿ ಹೊರಗಿನ ಆಭರಣವಾದರೆ ಮಂತ್ರವು ಹೃದಯಾಭರಣವು. ಗುರು ಮುಖಾಂತರ ಪ್ರಾಪ್ತಿಯು. ಲಿಂಗದ ನಾಮವೇ ಮಂತ್ರವೆಂದು ತಿಳಿಯುವದು.(ಗು. ಕ. ತ್ರಿ. ೩೨೦, ಶಿ. ಸಿ. ೮/೧೭) ಪತಿ ಶುಭನಾಮ: ಗೌಪ್ಯವಿಡುವಂತೆ ಮಂತ್ರವನ್ನು ಗೌಪ್ಯ ಜಪಿಸಬೇಕು. ಗುರು ಮುಖಾಂತರ ಪಡೆಯದೆ ಜಪಿಸಲು ಫಲ ದೊರೆಯದು. ಮಂತ್ರ ಅಕ್ಷರವೆನಲಾರದು. ಮಂತ್ರವೇ ಲಿಂಗ. ( ಶಿವಾದ್ವೈತ-ದರ್ಶನ ಪು. ೪೮ ) ಇದನ್ನು ಕ್ರಮದಿಂದ ಜಪಿಸಬೇಕು. ಮೌನದಲ್ಲಿ ಜಪಿಸಬೇಕು. (ಗೀತಾ ೧೦/೨೫) ಈ ಪ್ರಕಾರವಾಗಿ ಇಲ್ಲಿವರೆಗೆ ತಾವು ಹೊರಗಿನ ಅಷ್ಟಾವರಣ ತಿಳಿದರೆ ಅಂತರ್ಮುಖದಿ ಅಷ್ಟಾ ವರ್ಣವನ್ನು ತಿಳಿಯಬೇಕು. ಅರಿವೇ ಗುರು, ಅನುಭವವೇ ಲಿಂಗ, ಚಿರತಮುದಾನಂದವೇ ಜಂಗಮ, ಗುರುಕೃಪಾಮೃತವೆ ಪಾದೋದಕ, ನಿರತ ಸತ್ಕ್ರಿಯಾತೇಜವೇ ಭಸ್ಮ,

ಪ್ರಸಾದ ದೃಷ್ಟಿಯೇ ಶಿವಾಕ್ಷ; ಚಿರದ ಅನುಗ್ರಹವೇ ಪ್ರಸಾದ, ಸದಾ ಜ್ಞ
ಮನವೇ ಚಿನ್ಮಂತ್ರವೆಂದು ಗ್ರಹಿಸಿಕೊಳ್ಳಬೇಕು. ಈ ಪ್ರಕಾರ ಗುರು ಹೇ
ತನ್ನ ಆನಂದದಲ್ಲಿ ಲೀನವಾದನು (೧೦೪).

## ೧೧ನೇಯ ಸ್ಥಲ

ಹೊಳಲಿನ ಲಿಂಗಪ್ಪನಿಗೆ ಪಂಚಾಚಾರದ ಬೋಧನೆ ಇಲ್ಲಿದೆ. ಚರಿತನಾ
ಹಗಲಿರುಳೆನ್ನದೆ ಸಂಚಾರ ಮಾಡುತ್ತಾ ಆಚಾರ ಬೋಧನೆ ಮಾಡುತ್ತಾ
ಇದ್ದರು. ಅನುಭವ ಮಂಟಪಕ್ಕೆ ಕಾಶ್ಮೀರ ದೇಶದ ಮಹಾದೇವ ಭೂಪಾಲ,
ಳದ ಏಕಾಂತ ರಾಮಯ್ಯ, ಅಫಘಾನಿಸ್ತಾನದ ಮರಳು ಶಂಕರದೇವ,
ಮಹದೇವ ಶೆಟ್ಟಿ, ಗುಜರಾತದ ಆದಯ್ಯಶೆಟ್ಟಿ ಅಲ್ಲಿ ಬಂದಂತೆ ಚರಿತನಾ
ಗುರುಕುಲಕ್ಕೆ ವಿವಿಧ ದೆಶೆಯಿಂದ ವಟುಗಳು ಬರತಕ್ಕವರಾದರು. ಈ
ಹೋದಲ್ಲಿ ಮೂಢನಂಬಿಕೆ ಕಳೆದು ಯಥಾರ್ಥವಾದ ಬೋಧ
ಮಾಡಿ ಮೈತ್ರೇಯಿ ಗಾರ್ಗಿ, ನೀಲಾಂಬಿಕಾ ಶರಣೆಯರಂತೆ ಸ್ತ್ರೀ
ಬೋಧೆ ಮಾಡಿ ಅವರ ಹೃದಯವನ್ನು ಪರಿಪಕ್ವ ಮಾಡಿ ಬರುತ್ತಾ,
ಗ್ರಾಮಕ್ಕೆ ಬಂದರು. ಅಲ್ಲಿ ಜ್ಯೋತಿಯವರೆಂಬ ಮನೆತನದ ಲಿಂಗಪ್ಪನೆಂಬ
ಗುರು ಲಿಂಗ ಜಂಗಮ ಪ್ರೇಮಿಯೂ ಇವನ ಪತ್ನಿ ಚಿಕ್ಕ ವಯಸ್ಸಿನಲ್ಲಿ
ವಾದ್ದರಿಂದ ಮರು ಮದುವೆಯಾಗದೇ ಅರವತ್ಮೂರು ಶೀಲ ಸಂಪನ್ನನಾಗಿ
ವೀರರ ಕೃಪಾಕಟಾಕ್ಷ ಪಡೆದುಕೊಂಡು ಅನುಭವಗೋಷ್ಠಿಯಲ್ಲಿ ಭಾಗವ
ಹತ್ತಿದ. ಒಂದು ದಿನ ಪಂಚಾಚಾರದ ಬಗ್ಗೆ ನಿರೂಪಿಸಬೇಕೆಂದು ಕೇಳಿಕೊ
ಗುರುಗಳು ಇಂತು ಬೋಧಿಸಲಿಕ್ಕೆ ಪಾರಂಭ ಮಾಡಿದರು–೨೦ ಪಂಚಾಚ
ಪ್ರಾಣಸಮವೆಂದು ತಿಳಿಯಬೇಕು. ಶರಣರು ಆಚಾರಕ್ಕೆ ಕ್ರಿಯೆ ಹೇಳಿದ್ದಾರೆ.
ಚಾರದಲ್ಲಿ ಸ್ವಾತಂತ್ರ್ಯವಿದೆ. ಸುಳ್ಳು ವಿಷಯಾದಿಗಳು ತುಂಬಿದಲ್ಲಿ ಲಿಂ
ಸಲ್ಲದು. ಎಂದು ಬಸವ ಘೋಷಣ (ಬ. ವ. ೯೭) ಈ ಲಿಂಗಕ್ಕೆ ಬಯಲು,
ಶೂನ್ಯ ಎಂದು ಕರೆದಿದ್ದಾರೆ. ಈ ಲಿಂಗಾಚಾರವಿದ್ದರೆ ಆದಕ್ಕೆ ಸದಾಚಾರವು
ತರುವದು ಲಿಂಗ ಶಬ್ದದ ವಿಷಯವಾಗಿ ವಿವಿಧ ಪ್ರಮಾಣಗಳು ಉಂಟು. (
೩/೬–೭ ತೈತ್ತರೀಯ ೩/೧)–೨೪.

ಸದಾಚಾರ : ಇದು ಸರ್ವರಿಗೆ ಹಿತ (ಚ. ವ. ೪೫) ಇದಕ್ಕೆ
ಯಾಜ್ಞವಲ್ಕ್ಯಶ್ರಿ, ಬುದ್ಧನು ಸಹಿತ ಒಪ್ಪಿದ್ದಾರೆ.(ದಮ್ಮಪದ ೪/೧೨–೧೪, ೬/೯,
ಮನು ೧೦/೧೨) ಭೋಗದಲ್ಲಿ ಭಾವವಿಡದೆ ಗುರು ಲಿಂಗ ಜಂಗಮರಲ್ಲಿ ಶರಣ
ಇರಬೇಕು. ಯಾವ ಕರ್ಮವನ್ನೇ ಮಾಡಲಿ ಫಲತ್ಯಾಗ ಭಾವವಿರಬೇಕುವೆಂದ

ಹೇಳಿದರೆ (ಗೀತಾ ೧೮।೬೦) ಒಸವಣ್ಣನವರು ಶರಣರ ಅನುಭಾವ ಫಲ ಪ್ರಸಾದಲ್ಲಿ (ಬ. ವ. ೬೫೮) ಗ್ರಹಿಸಬೇಕು ಎಂದು ಹೇಳಿದ್ದಾರೆ. ಸದಾಚಾರದಲ್ಲಿ ಉತ್ಪನ್ನ ಶೀಲ, ಆಚಾರ, ಉದ್ಯೋಗ, ಸಂಬಂಧ, ಉತ್ಕಲ, ಪ್ರಸನ್ನ, ಉತ್ತಮಶೀಲ ಎಂದು ಎಂಟು ಪ್ರಕಾರಗಳಿವೆ. (ಶಿವಾದ್ವೈತ ದರ್ಶನ ೧೪೮)-೩೩.

ಶಿವಾಚಾರ : ಲಿಂಗಸಂಗಿಯಾಗಿ ಜೊತೆ ಇದ್ದವರನ್ನು ಸಂಗಮ ಸ್ವರೂಪಿಗಳೆಂದು ಭಾವಿಸಿಕೊಳ್ಳಬೇಕು. ಶಿವಲಾಂಛನ ಮೂರ್ತಿಗಳಿಗೆ ನಟನೆ ರಹಿತ ಅರ್ಥ ಪ್ರಾಣಾದಿ ಅರ್ಪಣವೇ ಶಿವಾಚಾರ. ಮರಳು ಕಂಡ ಕನಸಿನಂತೆ ಶಿವಾಚಾರ. ಲಿಂಗ ಜಂಗಮ ಮೆಚ್ಚುವಂತಿರಬೇಕು. ಕರಿಯು ಕನ್ನಡಿಯೊಳು ಅಡಗಿದಂತ ಸ್ಥಿತಿಯೇ ಶಿವಾಚಾರ-೩೮.

ಗಣಾಚಾರ : ಮೊದಲಿನ ಮೂರು ಆಚಾರಗಳನ್ನು ಕೊನೆಯವರೆಗೆ ನಡೆಸುವದು; ಭವಿಗಳನ್ನು ಸುಗುಣಿಗಳನ್ನಾಗಿ ಮಾಡುವದು; ಧರ್ಮಗ್ರಂಥಗಳಲ್ಲಿ ಶ್ರದ್ಧೆ ಇದುವೆ ಗಣಾಚಾರ. ಅಧರ್ಮಿಯನ್ನು ಮರ್ಧಿಸುವ ಭಾವನೆ ತನಗಾಗದಿದ್ದಲ್ಲಿ ಬಹು ದೂರ ಹೋಗುವದು. ಇಲ್ಲವೆ ತನ್ನನೆ ತಾನು ಅರ್ಪಿಸಿಕೊಳ್ಳುವದೇ ಗಣಾಚಾರ. ಮಾಚಿದೇವನೇ ಇದಕ್ಕೆ ದೃಷ್ಟಾಂತ. "ಹತೋಬಾ ಪಾಪ್ತ್ಯ ಶಿ. ಸ್ವರ್ಗ"-(ಗೀತಾ ೨/೩೭)* ಇವೆಲ್ಲ ಗಣಾಚಾರ ಸ್ಥಿತಿಯನ್ನೆ ನಿರೂಪಣ ಮಾಡುತ್ತವೆ-೪೪.

ಭೃತ್ಯಾಚಾರ : ಇಲ್ಲಿ ಅಹಂಕಾರ ರಹಿತ ಸ್ಥಿತಿ ಗುರುಲಿಂಗ ಜಂಗಮರ ಚರಣದಲ್ಲಿ ಕಿಂಕರತ್ವವೇ ಇದು (ಬ ವ. ೨೪೬-೨೮೮) ಇವನು ಯಾವ ದೊಡ್ಡ ಪದವಿಯನ್ನು ಇಚ್ಛಿಸಲಾರ. ಕಿಂಕರನಾಗಿ ಶಂಕರನಾಗುವ ಭಾವ ಇಲ್ಲಿ ಅಡಕವಾಗಿದೆ. ಈ ಪಂಚಾಚಾರವು ಸ್ವಾತಂತ್ರತೆ, ಸತ್ಕಾಯಕ, ಭಾವೈಕ್ಯತೆ, ಚಿರಧರ್ಮಾಭಿಮಾನತೆ, ಕಿಂಕರತ್ವ, ತಿಳಿಸುತ್ತವೆ. ಇವು ಸಮಾಜಕ್ಕೆ ಬಹು ಉತ್ತಮು-೫೦ ಈ ಪ್ರಕಾರವಾಗಿ ಆಲಿಸಿದ ಲಿಂಗಪ್ಪ ಶರಣನು ನಿಜವಾಗಿ ಅನುಭವಿಸಿಕೊಂಡು ಹೊಲಕ್ಕೆ ಲಿಂಗಮುದ್ರೆ ಗಳನ್ನು ಹಾಕಿ ಶೀಲಾಚಾರ ಸಂಪನ್ನನಾಗಿ ಅಂತಿಮಾವಸ್ಥೆಯಲ್ಲಿ ಮೊಮ್ಮೊಗನಿಂದ ಹಣವಿಸಿದುಕೊಂಡು ತಾನೇ ದಾನಮಾಡಿ ಲಿಂಗೈಕ್ಯನಾದ ವಿಷಯು ಆವನ ವಂಶದ ರಿಂದಲೇ ತಿಳಿದುಕೊಂಡ ವಿಷಯುವಿದೆ-೫೮.

## ೧೧ನೇಯ ಸ್ಥಲ

ಇಲ್ಲಿ ಷಟಸ್ಥಲದ ಬೋಧ ವಿಚಾರವಿದೆ. (ಚಿಕ್ಕ ಬಾಣಾವರ ಗ್ರಾಮದ

* ಈ ಗೀತಾ ೨/೩೭ ರ ಸೂತ್ರಕ್ಕೂ ಗಣಾಚಾರಕ್ಕೂ ಹೊಂದಾಣಿಕೆ ಸರಿಯೆನಿಸುವದಿಲ್ಲ ವೆಂಬುದು ಕೆಲ ತತ್ವಜ್ಞರ ವಿಚಾರ.

ಮಲ್ಲಿಕಾರ್ಜುನಪ್ಪ ಚನ್ನಮ್ಮರ ಐದನೆಯ ಸುತನೇ ಸಪ್ಪಯ್ಯ) ಗುರುಶಿದ್ಧ ಯ
ಕರಸಂಜಾತ ಸರ್ಪಭೂಷಣರಿಗೆ ನಮನ. ಚರಿತ ನಾಯಕನು ಚರತ್ಯಥಿತಿರೂಪಿ
ಸಂಚಾರ ಮಾಡುತ್ತಾ ಸಮತೆಯೆಂಬ ಕಂತೆಯನ್ನು ತೊಟ್ಟವನಾಗಿ ಗುರುಕುಲ ಮ
ಯಾಗಿ, ಪ್ರಸಾದಮಯನಾಗಿ ಚಿಕ್ಕ ಕಬ್ಬೂರಿಗೆ ಆಗಮಿಸುವಂತವನಾದನು.
ಸಮಾಚಾರವನ್ನು ಕೇಳಿ ಅಷ್ಟಮಹಾಸಿದ್ಧಿಗಳು ಬೆನ್ನು ಹತ್ತಿದಂತೆ, ಭಕ್ತಿ ಭಾ
ಇವರಡಿಗೆ ಬಂದು ಮೈತ್ರಾ ಯಾಜ್ಞವಲ್ಕ್ಯರಿಗೆ ಪ್ರಶ್ನೆ ಮಾಡಿದಂತೆ, (ಬೃಹದಾ
೪/೫/೪) ತಮ್ಮ ತಿಳಿಯದ ವಿಷಯ ತಿಳಿಯುವ ಭಾವನೆಯಲ್ಲಿ ಪ್ರಶ್ನೆ ಮಾಡತಕ್ಕ
ರಾದರು. ಇಂಥಾ ಪ್ರಸಂಗದಲ್ಲಿ ಲಿಂಗಪ್ಪನೆಂಬವನು ಷಟ್‌ಸ್ಥಲದ ವಿಚಾರ
ಬೇಕೆಂಬ ಬೇಡಿಕೆ ಇಡಲಾಗಿ, ಪೂಜ್ಯರು ಬೋಧ ಮಾಡಲು ಪ್ರಾರಂಭ ಮಾಡಿ
೧೦. ಈ ಸ್ಥಲದ ವಿಚಾರ ವೀರಶೈವ ಶಾಸ್ತ್ರದಲ್ಲಿ ಬಂದಂತೆ ಮತ್ತೆಲ್ಲಿಯೂ ಬಂ
"ಸ್ಥ" ಎಂಬುದು ಲಿಂಗ "ಲ" ಎಂಬುದು ಸೃಷ್ಟಿ, ಉತ್ಪತ್ತಿ,
ಸೂಚಿಸಿದರೆ, "ಸ್ಥ" ಕಾರ ಅದರ ವಿರಾಮ ಸೂಚಿಸುತ್ತದೆ. "ಲ" ಕಾರವು
ಸೂಚಕವೆಂದು ಶಿವಾನುಭವ ಸೂತ್ರದ ಘೋಷಣ, "ಗ" ಕಾರವು ಗಮನ ಸೂ
ತ್ತದೆ. (ಶಿವಾನುಭವ ಸೂತ್ರ ೨/೨-೮, ಷ, ಜ್ಞಾ, ಸಾ, -ಮುನ್ನುಡಿ ಪುಟ ೧
ನಿಜಗುಣರ ಕೈವಲ್ಯ ಪದ್ಧತಿಯಲ್ಲಿ ಕೂಡ ಸ್ಥಲವೆಂಬ ಶಬ್ದ ಪ್ರಯೋಗ ಮಾಡಿದ
ಉದ್ಧಾರ ಶಿವಕಾರುಣ್ಯ ಸ್ಥಲ. ಆಧಾರ ಯಾವದೋ ಅದುವೇ ಸ್ಥಲ. ಇದ
ಉಪಾಸನೆಗಾಗಿ ಆರು ಬಗೆಯಾದುದು. ಅಂಗನಾದ ಜೀವನವು ಈ ಆರು ಸೋ
ನದ ಮೇಲೆ ಲಿಂಗದ ನೆರವಿನಿಂದ ಏರಿ ಸುಸ್ಥಿತಿಯ ಐಕ್ಯತೆಯಲ್ಲಿ ಸಮರಸ
ತ್ತಾನೆ. ಆ ಸ್ಥಲವೇ ಏಕಮೇವಾದ್ವಿತಿಯ ಎನಿಸುವ ಪರಶಿವತತ್ವವೇ ಎಂದು ಭಾ
ಬೇಕು-೧೬. ಆ ಸ್ಥಲದಲ್ಲಿ ಅಂಗಸ್ಥಲದಲ್ಲಿ ನಾಲ್ವತ್ನಾಲ್ಕು, ಲಿಂಗ ಸ್ಥಲದಲ್ಲಿ ಐವತ್ತೆ
ಒಟ್ಟು ಸೇರಿ ನೂರಾವೊಂದು ಸ್ಥಲಗಳು ಆಗುತ್ತವೆ. ಅಂಗಸ್ಥಲವು ಯೋಗಾ
ಭೋಗಾಂಗ, ತ್ಯಾಗಾಂಗವಾಗಿ ಇವುಗಳಲ್ಲಿ ಒಂದೊಂದರಲ್ಲಿ ಎರಡೆರಡು ಭಾಗವ
ವವು. ಅವು ಯೋಗಾಂಗದಲ್ಲಿ ಐಕ್ಯ-ಶರಣಸ್ಥಲ, ಭೋಗಾಂಗದಲ್ಲಿ ಪ್ರಾಣಲಿ
ಪ್ರಸಾದಸ್ಥಲ, ತ್ಯಾಗಾಂಗದಲ್ಲಿ ಮಹೇಶ್ವರ-ಭಕ್ತಸ್ಥಲ ಇವೇ ಆರು ಸ್ಥಲಗಳು. ಅದ
ಲಿಂಗಸ್ಥಲದಲ್ಲಿಯೂ ಕೂಡ ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗವೆಂದಾಗಿ
ಗಳಲ್ಲಿ ಮತ್ತೆ ಎರಡೆರಡಾಗುತ್ತವೆ. ಮಹಾಲಿಂಗ-ಪ್ರಸಾದಲಿಂಗ, ಜಂಗಮಲಿಂಗ
ಲಿಂಗ, ಗುರುಲಿಂಗ-ಆಚಾರಲಿಂಗ ಹೀಗೆ ಆರು ಲಿಂಗಗಳು ಆಗುತ್ತವೆ. ಈ
ಪರಿಣಾಮಗೊಂಡಿದ್ದರೂ ಅಂಗಲಿಂಗಕ್ಕೆ ಭಂಗವಿಲ್ಲಾ. ಆಭರಣಗಳು ಬೇರಾ
ಸುವರ್ಣಕ್ಕೆ ಭಂಗವಿಲ್ಲಾ. (ಶಿ. ವಚನ ೩೯, ಶಿ. ದ. ಪುಟ ೧೪೫)-೧೭. ಷಟ್‌ಸ್ಥ
ನಿರಾಮಯ, ನಿರವಯವ ಎಂದು ಎರಡು ಭಾಗ. ಭಕ್ತಾದಿ ಸ್ಥಲಾಚರಣೆಯಲ್ಲಿ
ಶಾಂತ, ಸ್ವಸ್ಥವಾಗಿ ನಿರ್ದೋಷಿಯಾಗಿ ಮುಂದುವರಿಯುವನು. ನಿರವಯವ ಷಟ್‌ಸ್ಥ

ಅವಯವ ಭಾವವಿರದ ಎಲ್ಲವೂ ಲಿಂಗಭಾವ ಅಂಗ (ಜೀವ) ಕ್ರಮೇಣ ಷಟ್‌ಸ್ಥಲವಲ್ಲಿ ವಿಕಾಸಗೊಂಡು ನಾಮರೂಪದಿಂದ ವಿಮುಕ್ತನಾಗಿ ಚಿತ್ ಚೈತನ್ಯದಲ್ಲಿ ಸಮರಸ ನಾಗುತ್ತಾನೆ. ಕರ್ಪೂರವು ಬೆಂಕಿಯಲ್ಲಿ ಸಮರಸವಾದಂತೆ (ಶಿ. ದರ್ಪಣ ಪು. ೧೪೬) ಹರಿಯುವ ಮುಖವನ್ನು ಅಂತರಮುಖಿಯನ್ನಾಗಿಸುವದೇ ಷಟ್‌ಸ್ಥಲ ತತ್ವ. ಇಂದ್ರಿಯ ವಿಕಾರಗಳಿಗೆ ಸಿಲುಕದೆ ಲಿಂಗಮುಖಗಳಲ್ಲಿ ಸುಳಿದು ಲಿಂಗಾಕಾರ ತಳೆದು ಲಿಂಗಮಯ ವಾಗುವಂತೆ ಮಾಡುವದೇ ಷಟ್‌ಸ್ಥಲ ಧರ್ಮ. ಭಕ್ತ ಮಹೇಶಾದಿ ಸ್ಥಲಗಳೇ ಅಂಗ ಷಟ್‌ಸ್ಥಲಗಳು. ಆಚಾರ ಲಿಂಗಾದಿಗಳೇ ಲಿಂಗ ಷಟ್‌ಸ್ಥಲಗಳು. (–೨೨). ಗುರು ಲಿಂಗ ಜಂಗಮರು ಪರರೂಪಿಯೆಂದು ತಿಳಿದು ನಡೆಯುವವನೇ ಭಕ್ತ, ಶಿವಪ್ರೇಮಿ ಸಾತ್ವಿಕ ಶ್ರದ್ಧಾಮೂರ್ತಿ ಇಂತಹ ಭಕ್ತ ಸ್ಥಲವನ್ನು ಸಾಧಿಸಿ, ಸಿದ್ಧಿಗೊಳ್ಳುವ ಪೂರ್ವದಲ್ಲಿ ಪಿಂಡ ಜ್ಞಾನಾದಿಯಲ್ಲಿ ಸಾಧಿಸಿಕೊಳ್ಳಬೇಕಾಗುತ್ತದೆ (ಅನೇಕ ಜನ್ಮಗಳ ಪುಣ್ಯದಿಂದ ಬಂದ ಶರೀರವೇ ಪಿಂಡ ಇದು ಪಿಂಡಸ್ಥಲ. ಶರೀರ–ಆತ್ಮ ಎರಡು ಒಂದಲ್ಲ ಎಂದು ತಿಳಿಯುವದೇ ಜ್ಞಾನ ಪಿಂಡಸ್ಥಲ. ವಿಷಯಾದಿಗಳ ಹೇಸುವದೇ ಸಂಸಾರ ಹೇಯಸ್ಥಲ. ಇದು ಭಕ್ತನ ಜೀವನ ಹಂತ. ಬಳಿಕ ಗುರುಕೃಪೆಯಿಂದ ಮಂತ್ರೋಪದೇಶ ಪಡೆದು ಶಿವಕಲೆಯ ಇಷ್ಟಲಿಂಗವನ್ನು ಸ್ಥೂಲಾಂಗಕ್ಕೆ ಧರಿಸುವದೇ ಲಿಂಗಧಾರಣ ಸ್ಥಲ. ಗುರುಕಾರುಣ್ಯ ದ್ಯೋತಕವಾಗಿ ರುದ್ರಾಕ್ಷಿ ಧರಿಸುವದೇ ರುದ್ರಾಕ್ಷಿ ಧಾರಣ ಸ್ಥಲ. ವಾಚಕ ಉಪಾಂಸು, ಮಾನಸ ಜಪವೆಂದು ವಿಧಾನವಿದ್ದರೂ ಮಾನಸ ಜಪವೇ–ಪಂಚಾಕ್ಷರ ಜಪಸ್ಥಲ. ಶಿವಪೂಜೆಯೇ ಜಪ, ಲಿಂಗಾರ್ಚನೆಯೇ ಕರ್ಮ, ಶಿವಧ್ಯಾನವೇ ಧ್ಯಾನ, ಆಗಮದ ತಿಳುವಳಿಕೆಯೇ ಸುಜ್ಞಾನ. ಈ ಕ್ರಮದ ಆಚರಣವೇ ಭಕ್ತಿ ಕ್ರಿಯಾ ಸ್ಥಲ. ಗುರುವಿಗೂ ಶಿವನಿಗೂ ಬೇಧವಿಲ್ಲ. ಇಷ್ಟ–ಪ್ರಾಣ–ಭಾವ ಲಿಂಗಗಳ ಜ್ಞಾನ ಗುರುವಿನಿಂದ ಪ್ರಾಪ್ತಿಯೆಂದು ತಿಳಿದು ಗುರು ಶಿವನೆಂದೇ ತಿಳಿಯು ವದು ಉಭಯ ಸ್ಥಲದ ಲಕ್ಷಣ. ಗುರುವಿನಿಂದ ಸಂಶಯ ನಿವಾರಣೆ ಲಿಂಗದಿಂದ ಅಮಿತಾನಂದ. ಜಂಗಮನಿಂದ ಶಿವತತ್ವಾನುಸಂಧಾನವದು, ಲಿಂಗಮುಖವೇ ಜಂಗಮ, ಅವನ ತೃಪ್ತಿಯೇ ಲಿಂಗ ತೃಪ್ತಿ. ಸ್ಥಾವರಕ್ಕಿಂತ ಜಂಗಮ ಹೆಚ್ಚಿನದು. ಜಂಗಮ ನಿಂದಕನಿಗೆ ಶಿವಪೂಜೆ ಗುರುಲಿಂಗಗಳಿಲ್ಲ. ಗುರುಲಿಂಗ ಜಂಗಮರಾಧನೆಯೇ ತ್ರಿವಿಧ ಸಂಪತ್ತಿ ಸ್ಥಲ. ಗುರುಪ್ರಸಾದ ಶುದ್ಧ, ಲಿಂಗ ಪ್ರಸಾದ ಸಿದ್ಧ, ಜಂಗಮಪ್ರಸಾದ ಪ್ರಸಿದ್ಧ ಈ ತೆರನಾದ ತ್ರಿವಿಧ ಪ್ರಸಾದವ ಪಾದೋದಕ ಸ್ವರೂಪದಲ್ಲಿ ಸೇವಿಸಿರುವದೇ. ಚತುರ್ವಿಧದ ಸಾರಯ ಸ್ಥಲ. ತನು–ಮನ–ಧನದಿಂದ ಗುರುಲಿಂಗ ಜಂಗಮವ ಅರ್ಚಿಸಿ ದಾನವೀಯಬೇಕು. ಸೋಪಾಧಿಕ, ನಿರುಪಾಧಿಕ, ಸಹಜವೆಂಬ ಮೂರು ದಾನಗಳು. ಫಲಾಪೇಕ್ಷೆ ದಾನವೇ ಉಪಾದಿ–ಮಾಟಸ್ಥಲ. ಇದು ಕನಿಷ್ಟ. ಫಲಾಪೇಕ್ಷೆ ಇರದ ಶಿವಾರ್ಪಣದಾನ ಮಾಟವೇ ನಿರುಪಾಧಿ ಮಾಟಸ್ಥಲ, ದಾನಿ, ದಾನವಸ್ತು ತೆಗೆದು ಕೊಳ್ಳುವಲ್ಲಿ ಭಿನ್ನಭಾವ ತೊರೆದು ಮಾಡುವದೇ ಸಹಜ ಮಾಟಸ್ಥಲ. ಇದು

ಸರ್ವೋತ್ತಮ ರೋಗ ನಿವಾರಕ, ಶಿವಯೋಗ ಪ್ರದಾಯಕ. ಭಕ್ತನು ಹೀಗೆ
ಸ್ಥಲದ ಈ ಹದಿನೈದು ವಿಭಾಗದಲ್ಲಿ ಪರಿಪಕ್ವಗೊಂಡವನೇ ಮುಂದಿನ ಸ್ಥಲಕ್ಕೆ ಹೋ
ವನು. ಇಂತವನನ್ನು ಸಂಗಮನಾಥನು ತಾನು ಎತ್ತಿಕೊಳ್ಳುವನು-೨೪ ಭಕ್ತ
ಕರಗಸದಂತೆ ಶ್ರದ್ಧೆ ಮುಖ್ಯ ಆಧಾರಸ್ಥಾನದಲ್ಲಿದ್ದು ಆಚಾರಲಿಂಗವನ್ನು ತನ್ನ ಸು
ಹಸ್ತದಿಂದ ಆರಾಧಿಸಿ ಗಂಧ ಪ್ರಸಾದವ ಸುಗಂಧ ಪ್ರಸಾದವಾಗಿರಿಸಿ ಅರ್ಪಿಸತಕ್ಕಂತ
ಭಕ್ತಸ್ಥಲದಿಂದ ಮುಂದೆ ಸಾಗುವನು-೨೬.

ಧೈರ್ಯ, ನಿಶ್ಚಯ, ಸ್ವಾಭಿಮಾನ ಇವೆಲ್ಲವುಗಳಿಗೆ ಮಾನ್ಯತೆ ಕೊಡುವಂಥ
ಮಹೇಶ ಸ್ಥಲವು. ಇವಲ್ಲದೆ ಅಂತರಭೂತವಾಗಿ ಉಪಸ್ಥಲಗಳು ಅವನಲ್ಲಿ (ತನ್ನಲ್ಲಿ)
ವಡಿಸಿಕೊಳ್ಳಬೇಕಾಗುತ್ತದೆ. ಇಲ್ಲಿ ಒಂಬತ್ತು ಉಪಸ್ಥಲಗಳು. (ಪರವಸ್ತುಗಳ
ಮನವೆಳಿಸದೆ ಆಗಮಶಾಸ್ತ್ರನಿರತ ಪ್ರಾಣ ಹಿತ ಬಯಸುವ ಶಿವೈಕ್ಯ ನಿಷ್ಠನೇ ಪ
ಶ್ವರನು. ಇದು ಮಹೇಶ್ವರ ಪ್ರಶಂಸಾಸ್ಥಲ. ವ್ರತ ಬಿಡದ ಇಷ್ಟಲಿಂಗ ಪೂಜಾಸ
ಪೂಜಾಸ್ಥಲ. ಕರ್ಣಾದಿ ಗುಣಗಳ ಉಭಯವಳಿದ ಸ್ಥಿತಿವಂತ ಅಷ್ಟಾವರಣಯು
ಜಾತಿ ನೋಡದ ಅವನೇ ಶಿವನೆಂದು ನಂಬಿ ನಡೆಯುವದೇ ಪೂರ್ವಾಶ್ರಯದ
ನಿರಶನ ಸ್ಥಲ. ಆಹ್ವಾನ, ವಿಸರ್ಜನ ವಿಧಿಗಳಿರದ ಲಿಂಗ ಚಿಂತನವೇ ಆಹ್ವಾನ ನಿ
ಸ್ಥಲ. ಶಿವನಿಗೆ ಪೃಥ್ವಿ ಆಪ್, ಅಗ್ನಿ, ವಾಯು, ಆಕಾಶ, ರವಿ, ಶಶಿ,
ಎಂದು ಎಂಟು ಶಿವನು ಶರೀರವಿದ್ದರೂ (ಶಿವನು ಎಲ್ಲ ವಸ್ತುಗಳಲ್ಲಿದ್ದರೂ) ಲಿಂಗ
ಪರನೆ ಸರ್ವಗತ್ವ ನಿರಸನ ಸ್ಥಲ. ಶಿವನಿಗೂ, ಜಗತ್ತಿಗೂ ಏಕತ್ವ ಉಂಟೆಂದು ತಿ
ವದೇ ಶಿವ ಜಗನ್ಮಯ ಸ್ಥಲ. ಶಿವಲಾಂಛನ ನಿರಾಭಾರ. ಜಂಗಮರಲ್ಲಿ ಶಿವನಿರುವ
ಭಕ್ತಿಯಿಂದಾಚರಿಸುವದೇ ಭಕ್ತದೇಹಿಕ ಲಿಂಗಸ್ಥಲ. ಇಲ್ಲಿಗೆ ಇಪ್ಪತ್ನಾಲ್ಕು ಉ
ಗಳಾಗುತ್ತವೆ. ನಿಷ್ಠಾಭಕ್ತಿಯುಳ್ಳವನೇ ಮಹೇಶ್ವರ. ಇವನು ಗುರುಲಿಂಗ
ಸುಬುದ್ಧಿ ಹಸ್ತದಿಂದ ಆರಾಧಿಸುವನು. ರುಚಿ ಪದಾರ್ಥವ ಶುಚಿ ಪ್ರಸಾದವ
ಲಿಂಗನಿಷ್ಠಾಪೂರ್ಣನಾಗಿ ಪೂರ್ವಾಶ್ರಯವನ್ನು ಅಳಿದಾತಪನು. (ಪೂರ್ವಾ
ಎಂಬುದೇ ಒಂದು ಬಟ್ಟೆ, ಆಶ್ರಯ ಎಂಬುವದೇ ಕರಣಾದಿ ಬಟ್ಟೆಗಳು) ಪ್ರಶಾಂತ
ದಲ್ಲಿ ಬ್ರಹ್ಮತ್ವ ಅಳವಡಿಸಿಕೊಂಡವನೇ ಮಹೇಶ. ಇವನಿಗೆ ಆಹ್ವಾನಾದಿಗಳಿಲ್ಲ
ಕಲೆಯಲ್ಲಿ ಸದಾ ಸನ್ನಿಹಿತನು. ಪರಿಪೂರ್ಣತತ್ವ ಭರಿತನು, ಕರೆಯುವದೆಂತು ? ಕ
ದೆಂತು ? ಶರಣ ಸತಿಗೆ ತನ್ನ ಲಿಂಗದಲ್ಲಿಯೇ ಭಾವವಿರುತ್ತದೆ. ಈ ಪ್ರಕಾರವಾ
ತಕ್ಕಂತವನೇ ಪ್ರಸಾದ ಸ್ಥಲವನ್ನೇ ಹೊಂದುವನು-೨೯.

ಪ್ರಸಾದ ಸ್ಥಲವು ನಾಭಿಗತ ಮಣಿಪೂರ್ವಕ ಸ್ಥಾನದಲ್ಲಿದ್ದು ಅವಧಾನ
ಯಿಂದಾ ಶಿವಲಿಂಗವನ್ನು ನಿರಹಂಕಾರ ಹಸ್ತದಿಂದ ಆರಾಧಿಸುವದು. ಸತ್ಪುರುಷರ
ಯದ ಇಂಗಿತವನ್ನು ತಿಳಿದು ಸಾಗುವಂಥವನು ತನ್ನದೆಲ್ಲವನ್ನು ತನ್ನ ಲಿಂಗಕ್ಕೆ ನಿ
ಕೊಳ್ಳುವನೇ ಪ್ರಸಾದಿಯು. ಈ ಸ್ಥಿತಿ ಬರಬೇಕಾದರೆ ಪೂರ್ವಭಾವಿಯಾದ

ಸತ್ಕಾರ್ಯದಿಂದ ಶುದ್ಧವಾಗಿರಬೇಕು. ಗುರುಲಿಂಗ ಜಂಗಮ ಮುಖಾಂತರವಾಗಿ ತ್ರಿವಿಧ ಪ್ರಸಾದ ರೂಪ ತಾಳಿರಬೇಕು. ಆದ್ದರಿಂದಲೇ ತೈತ್ತರೀಯ ಉಪನಿಷತ್‌ದಲ್ಲಿಯೂ ಅನ್ನವನ್ನು ಮನ್ನಿಸಿದವ ಮಹಾನ್ ಆಗುವನು ಎಂದು ಘೋಷಣವಿದೆ. ಈ ಪ್ರಸಾದಿ ಸ್ಥಲದಲ್ಲಿ ಉಪಸ್ಥಲಗಳು ಇದ್ದು, ಅವನ್ನು ಆರಾಧಿಸಬೇಕಾಗುವದು. (ಧರ್ಮಾಚಾರವೇ ಭ್ರಾಂತಿಯನ್ನು ತೊಲಗಿಸುವ ಪ್ರಸಾದ ಸ್ಥಲವು. ಗುರುವಿಲ್ಲದೆ ಧ್ಯಾನ ಲಭಿಸದು. ಅವನಿಗರ್ಪಿಸಿ ಅವನಿಂದ ಬಂದದ್ದನ್ನು ಸೇವಿಸುವದೇ ಗುರುಮಹಾತ್ಮ್ಯ ಸ್ಥಲ. ವೃಕ್ಷವನ್ನೊಳಗೊಂಡ ಬೀಜದಂತೆ ವಿಶ್ವವನ್ನು ಒಳಗೊಂಡಿಹುದೇ ಲಿಂಗ, ಅದರ ಪೀಠವೇ ಕ್ರಿಯಾಶಕ್ತಿ, ಗೋಲಕವೇ ಚಿತ್‌ಶಕ್ತಿ ಎಂದು ತಿಳಿದು ಲಿಂಗಪೂಜಿಸಿ ಅದರ ಸಿದ್ಧ ಪ್ರಸಾದವನ್ನು ಸೇವಿಸುವದೇ ಲಿಂಗ ಮಹಾತ್ಮ್ಯ ಸ್ಥಲ. ಲಿಂಗಾಂಗ ಸಾಮರಸ್ಯ ತಿಳಿದು ಲೋಕ ಹಿತಾರ್ಥಿಯಾಗಿ ಸಂಚರಿಸುವ ಸುಜ್ಞಾನ ಬೋಧ ಜಂಗಮನಿಗೆ ಅರ್ಪಿಸಿ ಆತನಿಂದ ಪ್ರಸಿದ್ಧ ಪ್ರಸಾದ ಪಡೆದು ಸೇವಿಸುವದೇ ಜಂಗಮ ಮಹಾತ್ಮ್ಯ ಸ್ಥಲ; ತ್ರಿವಿಧ ಪ್ರಸಾದವನ್ನು ಸೇವಿಸುವ ಶರಣನನ್ನು ಪೂಜ್ಯ ಭಾವದಿಂದ ಕಾಣುವದೇ ಭಕ್ತಿ ಮಹಾತ್ಮ್ಯ ಸ್ಥಲ, ಯಾರ ಅನ್ನವು ಅನ್ನದಲ್ಲಿ ಪ್ರತಿಷ್ಠಿತವಾಗಿದೆ ಎಂದು ತಿಳಿಯುವರೋ, ಆತನೇ ಅನ್ನದಾತ. ಅನ್ನ ನೀಡಿದವನು ಕೀರ್ತಿ ಪಡೆಯುತ್ತಾನೆ. ಶರಣರಲ್ಲಿ ಪೂಜ್ಯ ಭಾವನೆಯಿರಿಸುವದೇ ಶರಣ ಮಹಾತ್ಮ್ಯ ಸ್ಥಲ. ತ್ರಿವಿಧ ಪ್ರಸಾದ ಫಲವೇ ಚಿರಾನಂದ. ಇಂತಹ ಪ್ರಸಾದ ಸೇವಿಸುವದೇ ಪ್ರಸಾದ ಮಹಾತ್ಮ್ಯ ಸ್ಥಲ.) ಈ ಪ್ರಕಾರವಾಗಿ ಅಂತರ್ಭೂತ ಸ್ಥಲಗಳನ್ನು ಅರಿತುಕೊಂಡವನೇ ಪ್ರಾಣಲಿಂಗಿಸ್ಥಲವನ್ನು ಏರುವನು.

**ಪ್ರಾಣಲಿಂಗಿ ಸ್ಥಲ :** ಪ್ರಾಣಲಿಂಗದ ಅನುಸಂಧಾನವೇ ಈ ಸ್ಥಲ. ನವರಂಧ್ರಗಳ ಮುಚ್ಚಿ, ಬೋಧಾರೂಪ, ನಂದಾದೀಪ ಹಚ್ಚಿ, ತಾಳ್ಮೆಯೆಂಬ ತಿಳಿನೀರು ಮಜ್ಜನ ಮಾಡಿ, ನಿತ್ಯಾಭರಣ ವೈರಾಗ್ಯವೆಂಬ ಪುಷ್ಪಮಾಲೆ, ತಿಳಿವೆಂಬ ಹೊದಿಕೆ, ಸಮಾಧಿ ಶ್ರೀಗಂಧ, ನಿರಹಂಕಾರ ಅಕ್ಷತೆ' ಶ್ರದ್ಧಾಧೂಪ, ಮಹಾಜ್ಞಾನ ದೀಪ, ನಿಭ್ರಾಂತಿ ನೈವೇದ್ಯ ಮೌನರೂಪ ಘಂಟಾನಾದ, ವಿಷಯಾನುರೂಪ ತಾಂಬೂಲ, ಸಮತೆ ಎಂಬ ಪ್ರದಕ್ಷಣ, ತಥಾಸ್ತುರೂಪ ವಂಧನ, ತತ್ಪರಿಣಾಮ ಪರಮಾನಂದ ಪ್ರಸಾದ ರೂಪ ಪೂಜಾ ಸಾಹಿತ್ಯವನ್ನು ಪ್ರಾಣಲಿಂಗ ಸ್ಥಲದಲ್ಲಿ ಸಂಪಾದಿಸಬೇಕು ಹಂಸರೂಪಾತ್ಮ ಲಿಂಗವನ್ನು ಗುರುಮುಖವೆಂದು ತಿಳಿದು ಸೋಽಹಂಭಾವನೆಯಿಂದಾ ನಿಶ್ಚಲಧ್ಯಾನಸ್ಥನಾಗುವದೆ ಶಿವಯೋಗ ಸಮಾಧಿ ಸ್ಥಲ. ಲಿಂಗದಲ್ಲಿಯೇ ವಿಶ್ವದ ಹುಟ್ಟು. ಬಾಳು ಎಂಬ ಲಿಂಗ ನಿಧಿ ಸ್ಥಳ. ಹೃದಯ ಕಮಲದಲ್ಲಿ ಆರಾಧಿಸುವ ಲಿಂಗದಲ್ಲಿ ಜೀವ ಹೊಂದಿಕೊಂಡಿದೆ ಎಂಬ ಭಾವನೆಯೇ ಅಂಗ-ಲಿಂಗಸ್ಥಲ. ಇಲ್ಲಿಗೆ ಮೂವತ್ತಾರು ಉಪಸ್ಥಲಗಳು ಆದವು. ಈ ರೀತಿಯ ಸಂಪನ್ನತೆಯಿಂದ ಕೂಡಿ ಕೊಂಡವರು ಶರಣ ಸ್ಥಲಕ್ಕೆ ಹೊಂದುತ್ತಾರೆ.

**ಶರಣ ಸ್ಥಲ :** ಸತಿ ಪತಿ ಸಮಾಗಮ ಸುಖ ಸ್ಥಿತಿ (ಭವ ಬಂಧನದ ಕಳವಳ) ರಹಿತ ಸೌಭಾಗ್ಯ ವುಳ್ಳವನೇ ಶರಣ ಸ್ಥಲಿಯ ಶರಣನು. ಕಂಠಸ್ಥ ಪ್ರಸಾದ ಲಿಂಗವನ್ನು

ಸುಜ್ಞಾನ ಹಸ್ತದಿಂದ ಪೂಜಿಸಿ ನಿಷ್ಕಲ ಭಾವಲಿಂಗದ ಅನುಭಾವಿಯಾಗಿರುವ ಶ
ಶಿವ ಸುಖಬಯಸುತ್ತಾನೆ. ಹರಿಯುವ ನದಿಗೆ ನೈಯಲ್ಲಾ ಕಾಲು. ಈ
ಸರ್ವಾಂಗ ಲಿಂಗಿ ಶರಣ. ಸಾತ್ವಿಕಯುಕ್ತನಾಗುವದೇ ತಾಮಸ ನಿರಸನ ಸ್ಥಲ.
ಶಿವಜ್ಞಾನವೇ ಶೀಲ ಇಲ್ಲಿಗೆ ನಾಲ್ವತ್ತನೇಯ ಉಪಸ್ಥಲಕ್ಕೆ ಶರಣ ಸ್ಥಲ ಮುಗಿ
ಅರಿವೆ ಗುರು, ಆಚಾರವೇ ಶಿಷ್ಯ; ಜ್ಞಾನವೇ ಲಿಂಗ; ಪರಿಣಾಮವೇ ತಪ; ಸಮತೆ
ಯೋಗದಲ್ಲಿ ಹೇಳಿದ ತೋರ್ಪ ಸಿದ್ಧಿಯ ಶರಣನು ನೆಲ ಜಲವನ್ನು ಪಾವನ
ವನು. ಶರಣಸ್ಥಿತಿ ಮಾತನಾಡಿದರೆ ಲಿಂಗವೇ ಕಾಣಬಹುದೆಂದು ವಚನಸಾಕ್ಷಿ (
೮೬೧) ಶರಣ ಹೊಂದಿದ ಬಳಿಕ ಶರಣ ಮರಳಿ ಮಾನವನಾಗಲಾರ, ತುಪ್ಪ
ಬೆಣ್ಣೆಯಾಗದಂತೆ. (ಬ.ವ. ೮೬೯) ಶರಣನ ಪಾದವೇ ಪರುಷ. (ಬ.ವ. ೮೭೩)
ಸತಿ ಸ್ವರೂಪ ಲಿಂಗ ಪತಿ ಸ್ವರೂಪದ ಅನುಸಂಧಾನ ಐಕ್ಯತೆಯೇ ಇದರ ಅ
ಯಿದ್ದ ಶರಣನೇ ಐಕ್ಯಸ್ಥಲಕ್ಕೆ ಒಪ್ಪುವನು. (—೪೪).

ಐಕ್ಯ ಸ್ಥಲ : ಸ್ಥಲವೆಂಬ ಬಯಲಿನಲ್ಲಿ ಬಯಲಾಗುವದೇ ಐಕ್ಯಸ್ಥಲ. ಇ
ಉಪಸ್ಥಲಗಳುಂಟು. ಅವನ ಎಲ್ಲವೂ ಲಿಂಗ ಪೂಜೆ, ನುಡಿಯೆಲ್ಲವೂ ಲಿಂಗಲೀಲ
ಸರ್ವಾಚಾರಿ ಎಂಬ ಸ್ಥಲವನ್ನು ತಲುಪುತ್ತಾನೆ. ಜಗತ್ತು, ತಾನು, ಶಿವ ಮೂರೂ
ಎಂದು ಸಾಧಿಸುವದೇ ಏಕಭಾವ ಸ್ಥಲ. ಗುರು ಲಿಂಗ ಜಂಗಮರಿಗೆ ಅ
ಯಾವ ವಸ್ತು ಶಿವನಿಂದ ಬೇರಿಲ್ಲವೆಂದು ತಿಳಿದು ಬೇಧವಳಿದ ಅದ್ವೈತ ಸ್ಥಿತಿಯೇ
ಭೋಜನ ಸ್ಥಲಕ್ಕೆ ಬಂದು ಮುಟ್ಟುವನು. ಇವನೇ ಜೀವನ್ಮುಕ್ತ. ಇಲ್ಲಿಗೆ ನಾಲ್ವತ್ತ
ಅಂಗಸ್ಥಲಗಳು ಮುಗಿದವು. ಇಂತಹ ಕೊನೆಯ ಸ್ಥಿತಿ ಮುಟ್ಟಿದಂಥವನಲ್ಲಿ
ವನ್ನೇ, ಲಿಂಗೈಕ್ಯವನ್ನೇ ಅಕ್ಕನ ವಚನವು ಐಕ್ಯಸ್ಥಿತಿಯ ಲಕ್ಷಣ ತಿಳಿಸುತ್ತದೆ. ಇ
ವರೆಗೇರು ಅಂಗಸ್ಥಲಗಳು ಉಪಾಸಕವೆನಿಸಿದರೆ ಇವುಗಳಿಗೆ ಉಪಾಸ್ಯ ಎನಿಸಿದ ಆರು
ಸ್ಥಲಗಳು. ಇವುಗಳು ಅಂತರಸ್ಥಲಗಳು. ಐವತ್ತೇಳು ಸೇರಿ ನೂರಾವೊಂದು ಸ್ಥ
ಆಗುತ್ತವೆ. ನಿರವಯವ ಸ್ಥಲದಲ್ಲಿ ಆಚಾರ-ಗುರುಶಿವಜಂಗಮ-ಪ್ರಸಾದ-ಮಹಾ
ವೆಂಬ ಹೆಸರನ್ನು ಪಡೆದಿಹವು. ನಿರಾಮಯವು ಭವಭಯ ದೋಷ ಕಳೆದರೆ ನಿರವಯ
ಸ್ಥಲ ಪರಿಪಕ್ವ ಅನ್ಮೃತ ಫಲವೆನಿಸಿಕೊಳ್ಳುವವು. ಆಚಾರಲಿಂಗ ಆಚಾರಾದಿ ಸ್ಥಲ
ಮುಂದಿನ ಸ್ಥಲದವರೆಗೆ ಐವತ್ತೇಳು *ಲಿಂಗಸ್ಥಲಗಳು. (—೪೮).

ಐಕ್ಯಸ್ಥಲವೆಂದರೆ ಅಂಗಲಿಂಗ ಸಾಮರಸ್ಯ. ಈ ಸ್ಥಿತಿ ಮುಟ್ಟಿದನೇ ಜೀವನ್ಮು
ಇವನಲ್ಲಿ ಮೈತ್ರಿ, ಕರುಣೆ, ಮುದಿತೆ ಸದ್ಗುಣಗಳು ತೋರುವವು. ಶಿಷ್ಯರನ್ನು ಕ
ಮಾಳ್ಪ ಶಕ್ತಿ ಇವನಿಗಿದೆ. ಈ ಪ್ರಕಾರ ಬೋಧ ಮಾಡುವ ಪ್ರಸಂಗದಲ್ಲಿ ಓರ್ವ ಶ
ಪ್ರಶ್ನೆ ಮಾಡಿದ. ಇವನನ್ನು ಗುರ್ತಿಸುವದೆಂತು? ಇವನಿಗೆ ಬಾಧೆ ತೋರುವದೆ ? ಎ

* ಬಾಲಲೀಲಾ ಮಹಾಂತೇಶ ಪುಟ-೨-೫೦-೫೪ರಲ್ಲಿ ನೋಡಬಹುದು.

ಆಗ ಗುರು ತಿಳಿಸುತ್ತಾನೆ. ಪರಿಪಕ್ವತೆ ಕಂಡು ಫಲವನ್ನು ಗುರಿತಿಸುವಂತೆ; ಅವನ ತೇಜ ಸಮತ್ವ ದೃಷ್ಟಿ ಇತ್ಯಾದಿಗಳ ಮುಖಾಂತರ ತಿಳಿಯಬೇಕು. (ಕೈ.ಪ. ೫/೩೫) ಇವನಿಗೆ ಯಾವ ಕರ್ಮಕಾಟವೂ ಇರದು. ಇವನ ಭಾವ ಶಿವಮಯ. ಇವನು ಎಲ್ಲಕ್ಕೂ ಸಾಕ್ಷಿ ಯಾದ್ದರಿಂದ ಶಿವಚೈತನ್ಯವೆಂದು ತಿಳಿದ ಕಾರಣ ಯಾವ ಬಾಧೆಯೂ ಆಗದು. (ಕೈ.ಪ. ೫/೩೪–೪೦–೫೫–೫೭)–೫೮.

## ೧೨ ಸೇಯು ಸ್ಥಲ

ಜೇವರಗಿಯ ಷಣ್ಮುಖ ಶಿವಯೋಗಿಗಳಿಗೆ ನಮನ ಜ್ಞಾನಕ್ರಿಯೆ ಶುದ್ಧವಿರ ಬೇಕು. ದೋಷವನ್ನು ಕಳೆಯುವುದಕ್ಕಾಗಿಯೇ ಮಹಾತ್ಮರ ಸಂಚಾರವಿದೆ. ಅಂಗೂಲಿ ಮಾಲನೆಂಬ ಕೊಲೆಪಾತಕಿಯನ್ನು ಗೌತಮ ಬುದ್ಧನು ಪಾವನ ಮಾಡಿದಂತೆ. ಚನ್ನವೀರ ಶಿವಯೋಗಿಗಳು ಜೀವಿಗಳನ್ನು, ಪಾಪಾತ್ಮರನ್ನು, ಕ್ರೂರಿ–ದೀನರನ್ನು ಉದ್ಧರಿಸುತ್ತ, ಪಾದವಿಟ್ಟ ಸ್ಥಲಗಳನ್ನು ಪಾವನ ಮಾಡುತ್ತಾ ಅವರ ಸಂಚಾರ ಸಾಗುವದು ಪಾವನ ಮಾಡುವ ಸಂಚಾರವೇ ಅವರ ಕಾಯಕ. ಸಮಾಜದ ಕೈಗೊಂಬೆಯಾಗಿಸಾಗುವ ಸ್ವಾಮಿ ಯಂತಲ್ಲ ಸ್ವತಂತ್ರ ಜ್ಞಾನ ಪಥಗಾಮಿ. ತಾನು ಸಂಚಾರ ಮಾಡುತ್ತಿದ್ದ ಭಾಗದಲ್ಲಿ ಪರಿವರ್ತನೆಯಾದ ಭಕ್ತರನ್ನು ಕಂಡು ಸಂತಸ ಪಡುತ್ತಿದ್ದ. ಅರಣ್ಯದಲ್ಲಿ ಸಾಗುವ ಪ್ರಸಂಗದಲ್ಲಿ ವನ್ಯಪುಷ್ಪಗಳೇ ಅವರಿಗೆ ಸಲ್ಲಿಸುವ ಸೇವೆ. ಇಂಚರನಾದವೇ ಘಂಟಾನಾದ, ತಾರಾಮಣಿಗಳೇ ನೀಲಾಂಜನ ಬೆಳಗುವಿಕೆ, ಮಧುಪಹಾರಾಟವೇ ಮಂಗಲಗೀತ, ಲಿಂಗಾ ರ್ಚನ ಪರಿ. ಈ ತೆರನಾಗಿತ್ತು ಭೃಕುಟಿ ಧ್ಯಾನಯುಕ್ತನಾದ ಯೋಗಿ ಉದಯವಾಗಲು ಹೊರವೃತ್ತಿಯನ್ನು ಮಾಡಿ ಬಿದನೂರಿನಡೆ ಪ್ರಯಾಣ ಬೆಳೆಸಿದ. ಸಾಗರದಿಂದ ಅಮೃತವು ಉದಯವಾದಂತೆ ಮಹಾತ್ಮನು ಬಿದನೂರಿನ ಸಮೀಪ ಬಂದ. ಕೋಟೆ ಪ್ರವೇ ಶಿಸಿದಾಗ ಬಸವಪ್ಪನಾಯಕ ದಂಪತಿ ಸಹಿತವಾಗಿ ಇವರನ್ನು ಸತ್ಕರಿಸಿದ ಬಳಿಕ ಮಹಾ ಶಿವಯೋಗಿಯು ಅಲ್ಲಿಯ ವೈಭವವನ್ನು ಕಂಡು ಸುಮ್ಮನಿರಲು ಆಗ ನಾಯಕನು ಹೀಗೆ ಭಿನ್ನವಿಸಿಕೊಂಡ-ಗುರುವೇ ! ಏಕೆ ಮೌನವಾಗಿದ್ದೀರಿ ? ನನ್ನ ಆಡಳಿತದಲ್ಲಿ ಏನಾದರೂ ತಪ್ಪಿದ್ದರೆ ತಿಳಿಸಿರಿ ಎಂದು ಭಿನ್ನವಿಸಲು ಅವನಿಗೆ ಬೋಧಿಸತೊಡಗಿದರು-೫೫. ನಾಯ ಕನೇ ! ಬಣ್ಣ ನೂಲಿದ ಶುಭ್ರತೆಯನ್ನು ಮರೆಮಾಡಿದಂತೆ ನಿನ್ನ ಅಧಿಕಾರ ಮೋಹ ಧರ್ಮವನ್ನು ಮರೆಮಾಡಿದೆ. ಜನಕನಂತೆ ತತ್ವಬಲ್ಲಿದನಾಗು. ಮಿತಿ ಮೀರಿ ಭೂ ಕಂಡಾಯ ಪ್ರಜೆಗಳಿಗೆ ಶಾಂತಿ ನೀಡದೆಂದು ಹಿಂದಿನ ಮನು ಮಹರ್ಷಿಗಳಸೂಚನೆ ಇದೆ. ಚಾಡಿಯ ಮಾತು ಕೇಳಿದರೆ, ಬಿಜ್ಜಳನಂತೆ ಆಗುವದು. ಮರುವೇಷ ಧರಿಸಿ ಬಂಥತನ ಕಂಡು ಹಿಡಿದು ದಂಡಹಾಕಿ ದೇಶ ರಕ್ಷಿಸು. "ದಂಡೋಮಹತ್ತೇಜೋ" ಎಂಬ ಮನುವಾಕ್ಯ ದಂತೆ ದಂಡವಿಲ್ಲದೆ ವಿದ್ಯೆ ಕೂಡ ಬರದು. ಒಂದು ವೇಳೆ ದುಷ್ಟರನ್ನು ಮರ್ದಿಸವೇ ಹೋದರೆ ಉಸುಕು ಬಿರುಗಾಳಿ ಮುಖಾಂತರವಾಗಿ ಬೆಳೆಯನ್ನು ನಾಶಪಡಿಸಿದಂತೆ

ಆಗುವದು. ಭಕ್ತಿಯ ವ್ಯಸನಿ ನೀನಾಗು, ಜೂಜಾಟ ವಿಷಯಾದಿಗಳಲ್ಲಿ ನಳ
ಯರು ನಾಶ ಹೋಗಿದ್ದಾರೆ. ಶರಣರನ್ನು ಮನ್ನಿಸು, ಏಕಪತ್ನಿವ್ರತಸ್ಥನಾಗು.
ರಾಜ ಧರ್ಮದ ಜೊತೆಗೆ ಶರಣ ಧರ್ಮವನ್ನು ಪಾಲಿಸು. ನಿನ್ನದೆಲ್ಲವೂ
ಇತ್ಯಾದಿ) ಪ್ರಜೆ ಹಾಗೂ ಸಮಾಜಕ್ಕೆ ಮೀಸಲಾಗಿರಲಿ. ಎನ್ನ ಸತಿ ಮಕ್ಕಳಿಗೆನ್ನ
(ಬ. ವ. ೪೩೫-೭೮೦)ಎಂಬ ವಚನ ಲಕ್ಷ್ಯದಲ್ಲಿರಲಿ. ಸಹನಶೀಲ ಆಡಳಿತ ಶೋಭಿಸ
ಶಿಶುವಿನ ಸ್ನೇಹದಂತೆ ಇರಲಿ. ಆಡಳಿತ ಆಡು ಕಾಯ್ದಂತೆ ಅಲ್ಲ. ಸ
ಮಥನದಲ್ಲಿ ವಿಷವು ಹೊರಟಂತೆ ಅಪವಾದ, ಅಪಯಶ ಬರಬಹುದು. ತಾನು
ಪಟ್ಟು ಎರಡನೆಯವರನ್ನು ಸಂತೃಪ್ತಿಪಡಿಸುವದು ಮಹಾನುಭಾವರ ಲಕ್ಷಣ.
ದವರು ನಿನ್ನವರು. ಆದರೂ ಶಾಸನ ಮಾಡಲು ಹಿಂಜರಿಯ ಬೇಡ. ಏ
ವ್ರತನಸ್ಥನಾಗು. ಇದಕ್ಕೆ ತಪ್ಪಿದರೆ ಪಾರಿಜಾತದ ಪ್ರಶ್ನೆ ಮುರಳಿಧರಗೆ ಬ
ಬರಬಾರದು. ಸತ್ವ ಸಂಪನ್ನತೆ, ವಾಕ್-ಶುಚಿ; ದಂಡ ನೀತಿಜ್ಞ; ಸತ್ಯ-ಮತಿ;
ಭೂಪತಿಯ ಲಕ್ಷಣ. ಶರಣರ ರಸ ಮಾಲೆ ಧರಿಸಿ ಸಾಗು. ಶರಣರ ವಿರೋಧಿ
ಬೇಡ. ತಪ್ಪಿದರೆ ಬಿಜ್ಜಳನಿಗೆ ಆಗುವ ಫಲ ತಪ್ಪುವದಿಲ್ಲ. ಈ ಪ್ರಕಾರ ಬ
ಮಾಡಿ ಗುರುಗಳು ಹೊರಟಾಗ ರಾಣಿ ಬಸವಮ್ಮಾಜಿ ಸಹಿತ ಪಾದಪೂಜೆ
ಮುತ್ತು ರತ್ನಾದಿಗಳನ್ನು ಅರ್ಪಿಸಲು ಇವು ಯಾವವು ಬೇಡ. ನಿಮ್ಮ ದುಶ್ಚಟಗ
ಈ ಜಂಗಮ ಜೋಳಿಗೆಗೆ ಹಾಕಿದರೆ ಸಾಕೆಂದು ಆಶೀರ್ವದಿಸುತ್ತಾ; ಸತ್ಯಂ-
ಸುಂದರ ಸ್ವರೂಪನಾದ ಸಹಜಾನಂದ ಮೂರ್ತಿಯು ಮುಂದೆ ಸಾಗಿದ -೫೧.

## ೧೩ ನೇಯ ಸ್ಥಲ

ಪ್ರಸಾದದೇವರಿಗೆ ಚಿನ್ಮಯಾನುಗ್ರಹ ನೀಡಿದ ವಿಷಯ ಇಲ್ಲಿ ನಿರೂಪಣೆಯ
ಮುಪ್ಪಿನ ಷಡಕ್ಷರಿಗಳಿಗೆ ನಮನಗಳು. ಲಿಂಗನಾಯಕನ ಹಳ್ಳಿಯ ಗುರುಕ
ಸಾಕಷ್ಟುಸಾಧಕರು ಸಿದ್ಧರಾಗಿ ಹೋದರು. ಶಿವಕವಿಗಳೂ ಆದರು. ಗುರು
ಸಂಚಾರ ಮಾಡುತ್ತಾ ತಮ್ಮ ಜೊತೆಗೆ ಬರುವ ಸಮಯದಲ್ಲಿ ಪ್ರಸಾದ ದೇ
ಕಾಯಕ ಬೋಧ ಮಾಡುತ್ತ ಕಿನ್ನರಿಯ ಬೊಮ್ಮಯ್ಯ, ಕುಂಬಾರ ಗುಂಡಯ್ಯ. ಅ
ಚೌಡಯ್ಯ ಮುಂತಾದವರ ಕಾಯಕ ನಿಷ್ಠೆಯನ್ನು ಪ್ರತಿಪಾದನೆ ಮಾಡು
ಶೃತಿ ಪ್ರಮಾಣಕ್ಕನುಸಾರವಾಗಿ ಬೋಧ ಮಾಡುತ್ತ ಸಂಚಾರ ಮಾಡುತ್ತಾ ಬ
ಶಾರೀರಿಕ, ವಾಚಿಕ, ಮಾನಸಿಕವೆಂಬ ಕಾಯಕದ ಬೇಧಗಳನ್ನು ತಿಳಿಸಿದರು. ತಾನು
ಸಂಪತ್ತಿನಲ್ಲಿ ವಿಲಾಸ ಜೀವನ ಮಾಡದೇ ಜಂಗಮ ತೃಪ್ತಿಮಾಡುವಲ್ಲಿ ಒಡಗೂಡ
(ಸಾಗಬೇಕು) ಮಾಡುವ ಕಾಯಕ ಯಾವದೇ ಇರಲಿ ಲಿಂಗ ಜಂಗಮಕ್ಕಾಗಿಯೆ
ಲೆಂದು ಶರಣಸಿದ್ಧಾಂತ (ಬ. ವ. ೭೦೭-೭೦೮) ಸುಜ್ಞಾನ ಕ್ರಿಯೆಯುಕ್ತ ಕಾ
ಶ್ರೇಷ್ಠ (ವ. ಸಂ. ೩೩೪-೩೩೫) ಈ ಪ್ರಕಾರವಾಗಿ ೧೧೧ ಸ್ಥಲಗಳ ವಿಚಾರ
ಬೋಧಮಾಡುತ್ತ ಇರಲು; ಒಂದು ದಿನ ಅಲ್ಲಿರುವ ಸದ್ಭಕ್ತರು ಕೆಲವರು ಹ

ಜಾತ್ರೆಗೆ ಹೋಗುವ ಬಗ್ಗೆ ಕೇಳಿದಾಗ; ನಮ್ಮನ್ನು ಬಿಟ್ಟು ಹೋಗುತ್ತೀರಾ ? ಎನ್ನುತ್ತ ನಮ್ಮ ಜಾತ್ರೆಯು ಸಮೀಪಿಸಿದೆ ಎಂಬ ಗೂಢಾರ್ಥ ಪ್ರಶ್ನೆಯು ನುಡಿ ತಿಳಿಯದೆ ಸುಮ್ಮನೆಯಾಗಬೇಕಾಯಿತು. ಹೀಗೆ ಮತ್ತೆರಡು ದಿವಸ ಕಳೆಯಲು ಮತ್ತೆ ಅವರು ನೆನಪು ಮಾಡಲು ನಾಳೆ ಹೋಗೋಣವೆಂದರು. ಲಿಂಗಾರ್ಚನೆ ಮುಗಿದ ಬಳಿಕ ಪಾದೋದಕ ಪ್ರಸಾದವನ್ನು ಅವರಿಗೆ ಕೊಟ್ಟು ಕಣ್ಣು ಮುಚ್ಚಿರೆಂದು ಹೇಳಿದಾಗ ಜ್ಞಾನ ಚಕ್ಷು ಉದಯವಾಗಿ ಅವರು ಹಂಪಿಯಲ್ಲಿ ಇದ್ದಂತೆ, ಜಾತ್ರೆಯನ್ನು ಕಂಡಂತೆ, ವಿರುಪಾಕ್ಷನ ದರ್ಶನ ಪ್ರತ್ಯಕ್ಷ ಕಂಡಂತಾಯಿತು. ಶ್ರೀ ಗಣೇಶನು ವರೈಣ್ಯರಾಜನಿಗೆ, ಶಾಮನು ಪಾರ್ಥನಿಗೆ ನೀಡಿದ ಜ್ಞಾನ ಚಕ್ಷುವಿನ ಘಟನೆಯಂತೆ ಘಟಿಸಿತು. ಕತ್ತಲಿನಿಂದ ಬೆಳಕಿನಡೆ ಒಯ್ಯುವ; ಅಸತ್ಯದಿಂದ ಸತ್ಯದಕಡೆ ಒಯ್ಯುವ ಶೃತಿ (ಬೃಹದಾರಣ್ಯ. ೧/೩/೨೮) ಘೋಷದಂತೆ ಘಟಿಸಿತೆಂಬುದು ನಿಶ್ಚಿತವಾಯಿತು—೩೦.

ಎನ್ನಪ್ಪಾ, ನೀವು ಕಂಡದ್ದು ಎಲ್ಲಾ ಲಿಂಗದೇವರ ಮಹಿಮೆ. ಪೂಜಾರಿ ಬಂಧನದ ದೇವರು ನಮ್ಮ ದೇವರಲ್ಲ. ಕರಗುವಂತವು ದೇವರಲ್ಲ. (ಬ. ವ. ೫೫೬) ಮುರಿದು ಹೋಗುವತೇರು ನೋಡುವ ಆಸೆ ಎಕೆ? ದೇಹವೆಂಬ ತೇರು ಶಿವಾತ್ಮಜ್ಞಾನರೂಪ ಈ ತೇರನ್ನು ಸಾಗಿಸಬೇಕೇ ವಿನಃ ಜಡವಾದಂತಹ ಕಲ್ಲು ಕಟ್ಟಿಗೆಯ ತೇರು ಸಾಗಿಸುವಂತಹುದಲ್ಲ. ಕಾಯದ ಜೀವದ ಹೊಲಿಗೆಯನ್ನು ಅಳಿದು ಕಲೆಯ ತಿಳಿಯಬಲ್ಲವನಿಗೆ ಈ ಸ್ಥಿತಿ ಸಾಧ್ಯ. (ಶೂ. ಸಂಪಾದನೆ-೨೦೭) ಈ ಪ್ರಕಾರವಾಗಿ ಬೋಧ ಮಾಡಲು ಪದ್ಮಹನಿ ಉದುರಿದಂತೆ ಅವರ ಭ್ರಾಂತಿ ಕರಗಲು, ಮುಂದೆ ಪೂಜ್ಯರು ಮಠದ ಸಂಪ್ರದಾಯಕ್ಕನುಸಾರವಾಗಿ ಪೂರ್ವನಾಮಕರಣ ಮಾಡಿಬಿಟ್ಟು ಪ್ರಸಾದ ದೇವರಿಗೆ ಮಠಾಧಿಕಾರ ಒಪ್ಪಿಸುವ ಕುರಿತು ಹೇಳಿ ಆ ಪ್ರಕಾರ ಎಲ್ಲ ಸಿದ್ಧತೆಗಳು ನಡೆದವು. ೪೦–ಮಠಕ್ಕೆ ಒಪ್ಪುವ ಮರಿದೇವರಾದ ಪ್ರಸಾದ ದೇವರಿಗೆ ಅಧಿಕಾರಕೊಡುವ ಸಮಯದಲ್ಲಿ ಪೂಜ್ಯರು ಈ ರೀತಿ ಬೋಧ ಮಾಡಿದರು. ಪೂರ್ವದಿಂ ಬಂದಿರುವ ಗುರುಕುಲದ ವಟುಗಳಿಗೆಲ್ಲ ಮಾತೃ ಹೃದಯದವನಾಗು ಕೊನೆಯುವರೆಗೂ ಕಾವಿ ಬಟ್ಟೆಗೆ ಗೌರವ ತರುವಂತೆ ನಿಜದಾಚರಣೆಯಿರಲಿ, ಸಂಕಲ್ಪರಹಿತನಾಗು, ಜಂಗಮ ಪೀಠದ ಪಾವಿತ್ರತೆ ಕಾಯ್ದುಕೊಂಡು ಸಾಗು. ನೀನು ಜಂಗಮನಾದರು ಕೂಡ ಜಂಗಮ ಬರಲು ಆವನ ಕಂದ ನೀನಾಗು. (ಚ. ವ. ೧೪೪–೧೫೧) ಸ್ವಾಮಿಯಾದವನಿಗೆ ಹೊರನೋಟ ಸರಿಯಲ್ಲ. ಸಮಾಜದ ಕೈಗೊಂಬೆಯಾಗದೇ ಸಾಗು. ಸಮಾಜವು ಸ್ವಾಮಿಯನ್ನು ತನ್ನ ಕೈಗೊಂಬೆಯಾಗಿರಿಸಿಕೊಳ್ಳಲು ಪ್ರಯತ್ನ ಮಾಡುತ್ತದೆ. ತತ್ವಬೋಧದಿಂದ ಅವರನ್ನು ಪರಿಶುದ್ಧ ಮಾಡುತ್ತ ಅವರ ಹೃದಯ ಸಿಂಹಾಸನದಲ್ಲಿ ಸದಾ ಕುಳಿತಿರು. ಅರಸನ ಆಗಮನ ಕಂಡು ಸಂತಸ ಪಡದಿರು. ದರಿದ್ರನ ದೂರೀಕರಿಸದಿರು. ಇದು ನಿಜವಾದ ಸಮಾಜದ ಪೀಠಾಧಿಕಾರಿಯ ಸ್ಥಿತಿ. ಅಂಬಲಿಯೇ ಕೊನೆಯವರೆಗೆ ಉಳಿಯತಕ್ಕಂತಹದು. ಬಿದ್ದವನನ್ನು ಯಾರೂ ಮುದ್ದಿಸರು. ಬಿದ್ದವನನ್ನು ಎಬ್ಬಿಸಿ ಸದ್ಬೋಧೆಯನ್ನು ಮಾಡಿ ಶುದ್ಧ ಮೂರ್ತಿಯನ್ನಾಗಿ ಇರಿಸು.

ನಿನ್ನ ನಿತ್ಯಾಚರಣೆಗೆ ಸೇವಕನ ದಾರಿ ಕಾಯದಿರು. ನಿನಗೆ ನೀನೇ ಸೇವಕನಾಗಿರು. ನಡೆ-ನುಡಿ ರಾಜ-ಪ್ರಜೆ ಶರಣರಿಗೆ ಮಾರ್ಗದರ್ಶಕವಾಗಲಿ. ಕೋಶ ಪಂಡಿತ ಹೇಸಿ ಗುಣ ಸರಿಯಲ್ಲ: ಸರ್ವ ಜಗವಿದು ತನ್ನದೆನ್ನುವ ಭಾವ ಸ್ವಾಮಿಗೆ ಇರಲಿ. ಸ ಶುಭ ಚಿಂತನೆಯೇ ನಿನ್ನ ಪೂಜೆಯಾಗಲಿ. ವ್ಯಕ್ತಿಗಿಂತ ತತ್ವ ಶ್ರೇಷ್ಠ. ಮಠದಿಂದ ಬೆಳಗುವದಕ್ಕಿಂತಲೂ ಘಟದಿಂದ ಮಠ ಬೆಳಗಬೇಕು. ಶರಣರ ತತ್ವವನ್ನು ಹರಡಿಸು—೬೦. ಈ ಪ್ರಕಾರ ಧರ್ಮಬೋಧೆಯನ್ನು ಮಾಡಿ ಕರಣಹಸಿಗೆ, ಗೌಪ್ಯಾದಿ ಗ್ರಂಥಗಳ ವಿಷಯವನ್ನು ತಿಳಿಸಿದಾಗ ಒಪ್ಪಿದ ಪ್ರಸಾದದೇವರು ಸಲ್ಲಿಸುತ್ತಾರೆ. ಒಪ್ಪಿಗೆ ಸೂಚಿಸಲು ಕ್ರಮದಿಂದ ಚಿನ್ಮಯಾನುಗ್ರಹ ಪಡೆಯುವ ನಾದನು. ಮಠಾಧಿಕಾರಿಯಾಗುವ ಪ್ರಸಾದ ದೇವರಿಗೆ ಬಿಳಿ ಕಂಬಳಿ, ಕೈಯಲ್ಲಿ ಶರಣರ ವಚನ ಸಂಪುಟ, ಅವರ ಕರದಲ್ಲಿ ಕೊಟ್ಟು ಶೂನ್ಯ ಸಿಂಹಾಸನಕ್ಕೆ ಆ ಆರೋಹನವನ್ನು ಮಾಡಿಸಿ ತಮ್ಮ ತಪೋತೇಜವನ್ನು ಅವನಿಗೆ ಧಾರೆಯುರೆದು ಅ ಮಾಡಿದರು. ಕೂಡಿದ ಶರಣವೃಂದ ಭಕ್ತರು ಮತ್ತು ರಾಜರು ಇದನ್ನು ಕಂಡು ಗೊಂಡಾಗ ಸರ್ವರಿಗೆ ಇವರೇ ನಿಮ್ಮ ಗುರುವೆಂದು ಸೂಚನೆ ಪಡಿಸಿದಾಗ ಮ ತುಂಬ ಮೇಲೆ ಹಬ್ಬಿದ ಮಲ್ಲಿಗೆಯ ಹೂವುಗಳು ಉದುರಿ ಪುಷ್ಪಾಂಜಲಿಯ ಶೋಭೆಗೊಂಡವು. ವಿದುರನ ದಿವ್ಯಶಕ್ತಿ ಪಾತವು ವಿದುಷ್ಮರನಿಗೆ ಆದ ರೀತಿ ಹೆಚ್ಚಾದ (ಮಹಾಭಾರತ ಆಶ್ರಮವಾಸಿ ಪರ್ವ ೨೬/೨೬) ತೇಜ ಸ್ಥಿತಿ ಪ್ರ ದೇವರಿಗೆ ಆಗಿತ್ತು. ಕಾಮಧೇನುವಿನ ಕರು ಕಾಮಧೇನುವೇ ಆಗುವಂತೆ ದೀಪ ಬೆಳಗಿದ ದೀಪ ತತ್ಸಮತೆ ಹೊಂದುವಂತೆ ಪ್ರಸಾದ ದೇವರು ಪ್ರಸಾದ ಸ್ವಾಮಿಗಳ ಈ ಪ್ರಕಾರವಾಗಿ ಗುರುನಾಥನ ಕೃಪೆ ಪಡೆದು ಮಠಾಧಿಪತ್ಯವನ್ನು ಹೊಂದಿ ಕಾರ್ಯಾಚರಣದಲ್ಲಿಯ ನೂರೊಂದು ಸ್ಥಲಗಳಿಗೆ, ಚನ್ನಬಸವಣ್ಣನವರ ಕರಣ ಮಂತ್ರ ಗೌಪ್ಯಾದಿ ಕೃತಿಗಳಿಗೆ ಟಿಪ್ಪಣಿಯನ್ನು ಕೂಡ ಬರೆದು ಸಾಹಿತ್ಯ ಸೇವೆ ಮಾಡಿದರು. (ಶಿ. ದರ್ಪಣ ಪದ ೨೯/೭) ಮರಿಯ ಚೆಲ್ಲಾಟವನ್ನು ಸಿಂಹಿ ಕಂಡು ಸಂತಸ ಪಡುವಂತೆ ಚನ್ನವೀರ ಶಿವಯೋಗಿಗಳು ತಮ್ಮ ಶಿಷ್ಯನ ನಡೆ ಯನ್ನು ಕಂಡು ಸಂತಸ ಪಟ್ಟರು. ಮಠಾಧಿಕಾರಿಯಾಗದವರಿಗೆ ಇದರ ಸ್ಥಿತಿ ಯದು—೬೭.

## ೧೪ನೇಯ ಸ್ಥಲ

ಈ ಸ್ಥಲದಲ್ಲಿ ಚರಿತನಾಯಕರು ಬಯಲುಗೊಂಡ ನಿರೂಪಣೆಯಿದೆ. ಯೋಗ ಮಂದಿರ ಸಂಸ್ಥಾಪಕರಾದ ಹಾನಗಲ್ಲಿನ ಶ್ರೀ ಕುಮಾರ ಸ್ವಾಮಿಗಳ ಯನ್ನು ಬೇಡಿಕೊಳ್ಳಲಾಗಿದೆ. ಶಿವನೇ ಸರ್ವೋತ್ತಮನೆಂದು, ಸಾರಾಯ ಸಂಪ ಅನುಭವ ಪ್ರಕಟಪಡಿಸುವದೆ ಶಿವಾನುಭವ ಮಂಟಪ. ಇದೇ ರೀತಿ ನಡೆದು ಲಿಂಗನಾಯಕನ ಹಳ್ಳಿ ಗುರುಕುಲವು. ಪ್ರಸಾದ ಸ್ವಾಮಿಯ ಪದ್ಧತಿ, ಆಡಳಿತ

ಚರಿತನಾಯಕರಿಗೆ ಸಂತೃಪ್ತಿ. ಅದರ ಫಲ ಶಿವಕವಿಗಳಾದರು. ಅಲ್ಲಿ ಇರತಕ್ಕಂಥ ಪೂರ್ವ ಶಾಂತವೀರಾದಿ ಮಹಾಂತರಿಗೆ ವೀರಶೈವಾಚಾರ ಬೋಧ ಪದ್ಧತಿ ನಡೆಸಿಕೊಂಡು ಸಾಗಿರೆಂದು ಹೇಳಿ ತಾವು ಬಯಲಾಗುವ ಸೂಚನೆ ತಿಳಿಸಿ ಹಾಗೂ ತುಂಗಭದ್ರೆಯಲ್ಲಿ ಮಂಚ, ಪಾವುಗೆ ತೇಲಿಬರಲು ಅದುವೇ ನಮ್ಮ ಬಯಲುಗೊಂಡ ಕುರುಹು ವೆಂದು ಹೇಳಿ ಸರ್ವರಿಗೆ ಆಶೀರ್ವದಿಸಿ ಸಂಚಾರಕ್ಕೆ ಹೊರಟರು-೧೦. ಬಾಲಲೀಲಾ ಮಹಾಂತರು, ಬಸವಲಿಂಗ ಶರಣರು, ಶಿವಬಸವ ಸ್ವಾಮಿಗಳು, ಶಾಂತ ವೀರ ಶಿವಯೋಗಿಗಳು ಗುರುಕುಲದಿಂದ ಅಗಲಿ ಧರ್ಮ ಪ್ರಸಾರಕ್ಕೆಂದು ಹೊರ ಡುವ ಪ್ರಸಂಗ ಬಂದಾಗ ನವ ವಧು ತವರು ಮನೆಯ ರುಚಿ ಭಾವದಲ್ಲಿ ಪತಿಯ ಸಾನಿಧ್ಯ ಪಡೆಯುವ ಸುಖದಲ್ಲಿ ಹರ್ಷವಿರಹಗಳು ಕಂಡತೆ ತದ್ರೂಪವು ಇವರದು. (ಬ. ವ ೩೬೯-೨೩೭೦, ಚ. ವ. ೧೩೪೭, ಅಕ್ಕನ ವಚನ ೨೮೯). ಈ ಪ್ರಸಂಗ ಪ್ರಸಾದ ಸ್ವಾಮಿಗೂ ಕೂಡ ಅದೇ ವಿರಹಾನುಭವ ಗಂಗೆ ಸಾಗರ ಸೇರಿದಾಗ ಶಾಂತಿ. ಶರಣರೇ ನಿಜವಾದ ಬಂಧು ಬಳಗ. ಈ ಪ್ರಕಾರವಾಗಿ ಅವರು ಬೇರೆ ಬೇರೆ ದೆಶೆಗೆ ತತ್ವ ಪ್ರಸಾರಕ್ಕೆ ಸಾಗಲು ಚರಿತನಾಯಕನು ಶಿವಮೊಗ್ಗೆಯ ಕಡೆಗೆ ಬರತಕ್ಕಂತವ ನಾದನು. ಇಲ್ಲಿಗೆ ಆಗಮಿಸಿ ಬಡತನದಲ್ಲಿ ಬಳಲತಕ್ಕಂಥ ಗುಡಿಕೋಟೆ ಮನೆಯವರಿಗೆ ಮನೆಯಲ್ಲಿಯ ಸಿಧಿ ತೋರಿಸಿ ಅನುಗ್ರಹಿಸಿ ಮುಂದೆ ಸಂಚಾರ ಕೈಕೊಂಡನು. ಸಂಚಾರ ಮಾಡುತ್ತಾ ಮುಂದುವರೆದು ಅಲ್ಲಮನ ಪ್ರತಿರೂಪಿಯು ಉದ್ರಿ ಗ್ರಾಮಕ್ಕೆ ಬರಲು ಕೆಲ ದಿನ ಅಲ್ಲಿ ಕಳೆದು ತುಂಗಭದ್ರೆಯ ಸಂಗಮವಾದ ಬಾರಂಗಿ ಕೂಡಲಗಿಯಲ್ಲಿ ಬಂದು ಭಾವಲಿಂಗ ಪೂಜಾ ಸಂಪನ್ನರಾದರು. ಕಂಗಳ ತುಂಬಿದ ಬಳಿಕ ನೋಡಲಿಲ್ಲ ವೆಂಬ ಬಸವ ವಚನದಂತೆ ಶಿವಯೋಗಿಗಳ ಪರಪೂಜೆ ನಡೆಯಿತು. (ಕೈ. ಪ. ೪/೩೭, ೩೮). ಇವರ ಪ್ರಭಾವದಿಂದ ಆ ಭಾಗವೆಲ್ಲವೂ ಪವಿತ್ರ ಕತ್ತಲೆ ಹರಿದು ಮನ ಬತ್ತಲೆಯಾಗಿ ತತ್ವ ಮಸಿ ಆಚೆ ತಾನಾಗಿ ತಾ ಸತ್ತ ಸ್ಥಿತಿಯೇ ಈ ನಿರಂಜನಯೋಗಿಯ (ಸಿ. ವ. ೫೯೯)-೩೨. ನೋಟ ಸಮರಸ, ಕೂಟ ಸಮರಸ, ಚಿದ್ರಸನ ಸ್ಥಿತಿ, ಬಯಲೊಳಗಿನ ಬಯಲು (ಶಿ ವ-೬೧೮) ಗಾಳಿಗಂಧವನ್ನಪ್ಪಿದಂತೆ ತಾನೇ ತಾನಾಗಿ ನಿರ್ಭಯಲಾದ ಮಹಾಯೋಗಿಯು (ಸಿ. ವ. ೬೮೪). ಹೊರಜಗತ್ತಿಗೆ ಇದು ಗುರು ತಾಗದೇ ಇದ್ದರೇನು ? ಪ್ರಕೃತಿರೂಪ ಮೇಘಕ್ಕೆ ಗುರುತಾಯಿತೋ ಎಂಬಂತೆ ಲೋಕಕ್ಕೆ ಸೂಚನೆ ಪಡಿಸಲು ಧಾರಾಕಾರವಾಗಿ ಹಸಿಯು ಸುರಿಸಲು ತುಂಗಭದ್ರೆ ತುಂಬಿ ಮಂಚ ಆವಿಗೆ ತಮ್ಮ ಜೊತೆ ತೆಗೆದುಕೊಂಡು ಬರಲು ಆ ಮಿತಿಯ ನಿರೀಕ್ಷಿ ಸುತ್ತಿದ್ದ ಭಕ್ತ ಜನರು, ಶರಣರು ಲಿಂಗವನಪ್ಪುವಂತೆ ಅದನ್ನು ತೆಗೆದುಕೊಂಡು ಬಂದು ಶ್ರೀಮಠದಲ್ಲಿ ಇಟ್ಟು ಶೋಭೆಗೊಳಿಸಿದರು. ಚರಿತನಾಯಕರು ತಿಳಿಸಿದ ಬೋಧ ಸ್ಮರಣೆ ಮಾಡಿಕೊಂಡರು. ಈಗಲಾದರೂ ನೈಜ ಜಂಗಮನಿಗೆ ಅರ್ಚನಾರ್ಪಣ ಸಲ್ಲಿ ಸುತ್ತಿರುವರು. ಪ್ರತ್ಯಕ್ಷ ಚರಿತನಾಯಕರು ಕಾಣದಿದ್ದರೇನು ? ಅವನ ಪ್ರಭೆ ವಿಶ್ವ

ತುಂಬ ಪ್ರಜ್ವಲಿತವಾಯಿತು.ಬಯಲು ನೆನೆಯುವವನು ಕೂಡ ಬಯಲು ಸ್ವರೂಪನ
ತ್ತಾನೆ. ಇಂತಹಾ ಬಯಲು ಸ್ವರೂಪಿಯಲ್ಲಿ ಅರಿವು ಮರೆವು ಕೂಡ ಬಯಲೇ (
೬೮೭) ಬೆರೆತು ಹೋದವನ ಚಿಂತನೆ ಅವರ ಮಾರ್ಗದರ್ಶನ ಇರಬೇಕು ನ
ಅವನೇ ತುಂಬ ತುಂಬಿಹನು. (ಶಿ. ವ. ೬೨೧) ಇತ್ತ ಕೈಲಾಸದಲ್ಲಿ ಗೌ
ಶೋಭಿಸುವ ಈ ಶುಭ ಪ್ರಸಂಗದಲ್ಲಿ ಸತ್ವರೂಪ ಚನ್ನನ ಲೀಲೆ ಕಂಡು ಸಂಸ
ಇರುವ ಸಮಯದಲ್ಲಿ ಚನ್ನನ ಚೇತನಾಗಮನ ಕಂಡ ಗಿರಜೆ ಹರಗೆ ಇಂ
"ನಿಮ್ಮ ಮಾತು ಮುತ್ತು; ಮಾತದು ಸತ್ಯ ಸುಧೆ ಆಗಿದೆ." ಎಂದು ಮುಗು
ನುಡಿದಳು. ಹೌದು ಆ ಚರಿತ ಪುರುಷನೆ ಇವನು. ಸರ್ವರಂತರ್ಭೂತಿ ಎನ
ಸತಿಯು ಹೌದೌದು ನೋಟಕ್ಕೆ ಸೋಗಸಲ್ಲದೆ ಸಹಜಾನುಭವಕ್ಕೂ ಸೊಗಸು.
ಲೀಲಾಚಾರ, ಶಿವಚಾರವದು ಗುಹೇಶ್ವರನಂತೆ. ಇವನ ಲಿಂಗ ಲೀಲಾವಿಲಾ
ವೆನಿತಿರದ ಸುಖದ ಸೊಗಸು ಹೀಗೆನಲು ಶಿವನಿಗೆ ಸಂತೃಪ್ತಿಯಾಯಿತು. (–೫೩).

## ೧೫ನೇಯ ಸ್ಥಲ

ಲಿಂಗನಾಯಕನ ಹಳ್ಳಿಯ ಗುರು ಪರಂಪರೆ ಇಲ್ಲಿ ನಿರೂಪಿತವು.
ಸಾಹಿತ್ಯ ರಚಿಸಿದವರ ಸ್ಮರಣೆ ಮಾಡಲಾಗಿದೆ. ವಂಶವೆಂದರೆ ಬಿದಿರು, ಆದ
ವಂಶವು ಭವದಘವ ನಾಶ ಪಡಿಸುವದು. ನಿರಾಭಾರಿಗಳು ನಿರ್ವಂಶಿಕರು ಎನ್ನದ
ಶ್ವರನ ಸದ್ವಂಶಿಕರು. ಇವರಿಂದ ಸರ್ವಾಚಾರ ಸಂಪತ್ತಿ ಪ್ರಸಾರ ನಿತ್ಯ ನಡೆದಿ
ತಿಳಲು ತಿಳಿದವಗೆ ಭವಬಾಧೆ ಇವನಿಗಾಗದು. ರಾಜ ಮಹಾರಾಜರಿಗೆ ತಿ
ಸನ್ಮಾರ್ಗಕ್ಕೆ ಹಚ್ಚಿದಂತ ಸಾಧಾರಗಳು ಸಾಕಷ್ಟು. ಅವರೊಪ್ಪದಿದ್ದಾಗ ದೇ
ನವರಂತೆ ಪ್ರತಿಭಟಿಸಿ ಶರಣು ತತ್ವಾನುಭವಿಗಳಾಗಿರೆಂದು ಬೋಧ ಮಾಡುವ ಪ್ರ
ಸ್ಮರಣೀಯ.

ಇಂತಹ ನಿರಾಭಾರಿಗಳ ಸಾಲಿನಲ್ಲಿ ಶ್ರೀ ಪ್ರಸಾದ ಸ್ವಾಮಿಗಳು
ಇವರ ಬಳಿಕ ಮೂರನೆಯ ಸ್ವಾಮಿಗಳಾಗಿ ನಂಜುಂಡ ಸ್ವಾಮಿಗಳು, ನಾಲ್ಕ
ವರಾಗಿ ಗುರುಲಿಂಗ ಸ್ವಾಮಿಗಳು, ಐದನೆಯವರಾಗಿ ಬಸವಲಿಂಗ ಸ್ವಾಮಿಗ
ಹೋದರು. ಇವರ ಕಾಲದಲ್ಲಿಯೇ ಹಾನಗಲ್ಲದ ಶ್ರೀ ಕುಮಾರಸ್ವಾಮಿಗಳು
ಮಂಗನಾಯಕನ ಹಳ್ಳಿ ಎಂಬುದನ್ನು ಲಿಂಗನಾಯಕನ ಹಳ್ಳಿ ಎಂದು ಬದಲಾ
ಮಹಾಪುರುಷರು. ಶ್ರೀ ಪೀಠ ಆರನೆಯ ಸ್ವಾಮಿಗಳು ಶ್ರೀ ತಿಪ್ಪಯ್ಯ ಸ್ವಾ
ಇವರ ಕಾಲದಲ್ಲಿ ಮಠದ ಸುಧಾರಣೆಯಾಯಿತು. ಸದ್ಯದವರೇ ಏಳನೆಯವ
ನಿ. ಪ್ರ. ಚನ್ನವೀರಮಹಾ ಸ್ವಾಮಿಗಳು. (–೧೩).

ಧಾರವಾಡ ವಿಭಾಗದ ಹಾವೇರಿ ತಾಲೂಕಿನ ಗುತ್ತಲ ಗ್ರಾಮದ ಚನ್ನಬಸ
ಬಸವಲಿಂಗಮ್ಮನ ಸತ್ಪುತ್ರರು. ಬನ್ನಿಮಟ್ಟಿ ಗ್ರಾಮವು ಬಸವಲಿಂಗಮ್ಮನ
ಮನೆಯಾದ್ದರಿಂದ ಹಳ್ಳಿಯ ಪೂಜ್ಯರಲ್ಲಿ ಶ್ರದ್ಧೆಯಿಟ್ಟು. ಅವರ ಕೃಪಾಶೀರ್ವಾ

ಜನಿಸಿದವರು ಸಧ್ಯದ ಪೂಜ್ಯರು (೧೯೦೮ ಇಸ್ವಿ). ಜಡಿಯಪ್ಪ ಅಂತಾ ಪೂರ್ವನಾಮ. ಗುತ್ತಲ ಚರಂತಿ ಮಠಕ್ಕೆ ಅಧಿಪತಿ ಮಾಡುವ ಕುಂತು, ಸಂಸ್ಕೃತ ಕಲಿಯಲು ಹಾವೇರಿಗೆ ಕಳಿಸಿದರು. ಅಲ್ಲಿಂದ ಯಾದಗಿರಿ, ಹುಬ್ಬಳ್ಳಿಯಲ್ಲಿ ಇದ್ದು ಬಳಿಕ ನ್ಯಡಗಿರಿಯ ಜ. ಅನ್ನದಾನೀಶ್ವರರ ಸನ್ನಿಧಾನದಲ್ಲಿ ಮಲ್ಲನಕೇರಿ ಶ್ರೀ ನಿ. ಪ್ರ. ಗುರುಲಿಂಗ ಶಿವಯೋಗಿಗಳ ಮುಖಾಂತರ ನಿರಾಭಾರಿ ಚರ ಪಟ್ಟಾಧಿಕಾರ ಪಡೆದು ಶ್ರೀ ಚನ್ನವೀರ ಸ್ವಾಮಿಗಳೆಂದು ಪ್ರಖ್ಯಾತರಾದರು. ವಿದ್ಯಾಪ್ರಿಯರೂ, ಅಲ್ಲದೆ ಅನುಗ್ರಹ ಮೂರ್ತಿಗಳು ಹೌದು. ಶ್ರೀ ಸಧ್ಯದ ಮುಂಡರಗಿ ಶ್ರೀಗಳು, ಹೊಸರಿತ್ತಿ, ಹೊಳಲು, ಮಲ್ಲನಕೇರಿ, ಕುರುವತ್ತಿ ಹಿರೇಸಿಂಧೋಗಿ, ಇವರೆಲ್ಲರೂ ಚಿನ್ಮಯಾನುಗ್ರಹ ಅಧಿಕಾರ ಹಾಗೂಡೆಪದವರು-೨೩. ಇವರ ಸಂಪರ್ಕ ಫಲವೇ ದಾರ್ಶನಿಕ ಸಿದ್ಧಾಂತ ಕೃತಿಯು ಹಾಗೂ ಅದರ ಅಭ್ಯಾಸದ ಫಲವೇ ಶ್ರೀ ಚನ್ನವೀರ ವಿಲಾಸ ಚಿತ್‌ಕೃತಿಯು. ಈ ಕೃತಿಯ ಪ್ರಾರಂಭ ಮಾಡಿದ ಮಿತಿಯಿಂದ ಏಳನೆಯ ತಿಂಗಳ ಮಾಘ ಶುದ್ಧ ಚತುರ್ದಶಿಯಂದು ಸಂಪ್ರದಾಯದಂತೆ ಜಾನಮಟ್ಟಿಗೆ ಬಸವ ಜಾತ್ರೆಗೆ ಬಂದಾಗ ಶ್ರೀ ನಿರುಪಾಧಿಮಠದಲ್ಲಿ ದಿ. ೧-೨-೧೯೮೮ ರಂದು ಬರೆದು ಮುಗಿಸಲಾಯಿತು. ಸಧ್ಯದ ಚರಿತನಾಯಕ ಪೀಠದ ಸಪ್ತಮಾಧಿಕಾರಿ ಶ್ರೀಗಳ ಮುಂದೆ ಓದಿದ ಬಳಿಕ ಪ್ರಕಟಿತವು. ಬೋಧಕರು ತಮ್ಮ ಅನುಭವವನ್ನು ಕೂಡಿಸಿ ಬೋಧಿಸುವರೆಂದು ಆಶಿಸಿ ಅವರಿಗೆ (ನಿರಾಭಾರಿಗಳಿಗೆ) ಶರಣು. ಅವರ ಚೇತನ ಕೃಪೆ ಕೃತಿಗಿರಲಿ. ಸ್ವಾಧ್ಯಾಯ ಸಾರ್ಥದಲ್ಲಿ ಬರೆದ ಈ ಕೃತಿಯ ಆಲಿಸಿದವರಿಗೆ ಚಿರ ಸಾರಾಯ ಸಂಪತ್ತು ಲಭಿಸುವದು. ಚರಿತನಾಯಕಗೆ ಮಂಗಲವು ಹಾಗೂ ಈ ಏಳನೆಯ ಕೃತಿಯನ್ನು ಹಾನಗಲ್ಲಿನ ಶ್ರೀ ನಿ. ಪ್ರ. ಕುಮಾರಸ್ವಾಮಿಗಳ ಚರಣಕ್ಕೆ ಸಮರ್ಪಿತವು. ಬಸವಾದಿ ಪ್ರಮಥರಿಗೆ ಮಂಗಲವು. ಎಂಟುನೂರರ ಮೇಲ್ಪಟ್ಟ ಪದಗಳಿಂದ ಕೂಡಿದ ಕೃತಿಯು, ವಿದ್ಯಾಪೀಠ ಪ್ರಿಯರಿಗೆ ಪಾಠ ಸಮನಾಗಬಹುದು. ಬೆಳಗಾಂವ ಜಿಲ್ಹೆಯ ಗೋಕಾಕ ತಾಲೂಕಿನ ಅಂಕಲಗಿಯ ಅಡವಿ ಸಿದ್ಧೇಶ್ವರರ ಚರಣಾಶ್ರಯದಲ್ಲಿ ಸ್ಥಾಪಿತವಾದ ಮರೆಗುದ್ದಿ ಅಡವಿ ಸ್ವಾಮಿ ಮಠದ ಕ್ರಮಬದ್ಧ ಗುರುವಂಶದ ಗುರುಪಾದ ಮಹಾಸ್ವಾಮಿಗಳ ಶ್ರೀ ಕರ ಸಂಜಾತರಾದ ಶ್ರೀ ನಿರುಪಾಧಿ ಸ್ವಾಮಿಗಳಿಂದ ವಿರಚಿತವಾದ ಶ್ರೀ ಚನ್ನವೀರ ವಿಲಾಸ ಎಂಬ ಕೃತಿಯ ಹದಿನ್ಯೆದನೆಯ ಸ್ಥಲ ಮುಗಿದುದು (-೩೫).

ಸಮಾಪ್ತಿ

ಪೂಜ್ಯ ಶ್ರೀ ಜಗದ್ಗುರುಗಳ- ಅನುಷ್ಠಾನ ಮಂಗಲ ಸಮಯದಲ್ಲಿ



ಶ್ರೀ ಮ.ನಿ.ಪ್ರ. ಜಗದ್ಗುರು ಅನ್ನದಾನೀಶ್ವರ ಮಹಾಸ್ವಾಮಿಗಳು
ಸಂಸ್ಥಾನಮಠ, ಮುಂಡರಗಿ.
ಪೂಜ್ಯ ಶ್ರೀ ಮ.ನಿ.ಪ್ರ. ಚನ್ನವೀರ ಮಹಾಸ್ವಾಮಿಗಳು ಲಿಂಗನಾಯಕನಹಳ್ಳಿ.

ಓಂ

ಲಿಂಗನಾಯಕನ ಹಳ್ಳಿಯ

# ಶ್ರೀ ಚನ್ನವೀರ ವಿಲಾಸ

(ಭಾಮಿನಿ ಷಟ್ಪದಿ)

## ಒಂದನೆಯ ಸ್ಥಲ

ಸೂಚನೆ—

ಶ್ರೀ ಪ್ರಭಾತ ಪ್ರಭಾಂಗ ಮೀರಿ
ದಾ ಪ್ರಸಾದ ಸುಮಂಗ ಚಿನ್ನಿಧಿ
ಸುಪ್ರಸಾದಿಕ ಚನ್ನವೀರ ವಿಲಾಸ ಕಾರಣವ ॥

ಶ್ರೀ ಮಹಾಂತ ಪ್ರಶಾಂತ ಪ್ರತಿಭೆ ಸು
ಧಾಮಯದ ಸೌಹಾರ್ದ ನಿಜಸುಖ
ಧಾಮಯತಿ ಶ್ರೀಮಂತ ಶೃತಿ ವಿಜ್ಞಾನಿ ಪ್ರಜ್ಞಾನಿ ॥

ರಾಮರಂಜನ ಸತ್ವರಸಮತಿ
ಧಾಮ ಧೀಂ ಘನ ವ್ಯೋಮಪ್ರಭೆ ನಿ
ಸ್ಸೀಮ ರಸ ವಿಶ್ರಾಮ ನೈಜತೆ ಗುರುವಿಗಾಂ ನಮಿಪೆ ॥ ೧ ॥

ಆರು ಸ್ಥಲಗಳೆ ಸ್ಕಂದ ಪ್ರಣವಾ
ಕಾರ ಗಣಪನೆ ತಿಳಿಯುವೆ ನಿರಾ
ಭಾರಿಗಳು, ಪೂಜ್ಯಕನೆ ನಂದಿಯು, ಈಶ ತನುಗಳನು ॥

ಮೇರುವಷ್ಟಾವರಣ ಕ್ರಿಯೆಗಾ
ಧಾರ ಸೂತ್ರಗಳೆಂಬೆ ಪಂಚಾ
ಚಾರ ಈಶಾನ್ಯಾದಿ ಮುಖವೆಂದೆನುತೆ ಸಾಗುವೆನು ॥ ೨ ॥

ಶರಣಸಂಕುಳ ಗಣಗಳೆಂಬೆನು
ಶರಣರಂಗಣ ಭೃಂಗಿಯಾಂಗಣ
ಶರಣರನುಭವಬೋಧೆ–ಮಣಿ* ಗುರುಗೀತೆ ಪರಮಾತ್ಮ ||
ಶರಣಾರಾಚಾರವದೆ ಛದ್ರನ
ಸ್ಮರಣವದು ಪಾಲನತೆ ತಪ್ಪದ
ಶರಣ ನಡೆನುಡಿ ಹರಗೆ ಹರ್ಷಿಣಿಯೆಂದು ಸ್ತುತಿಸುವೆನು

ಶರಣಸಂಪದ ಸೌಖ್ಯಸಂಗಮ
ನಿರತಕಾಯಕ ನಿತ್ಯದನುಪಮ
ಚಿರದ ಚಿನ್ಮಯ ಚನ್ನಚೇತನ ಮೂರ್ತಿಯಡವೀಶ ||
ಸುರಿಸಿಯನುಭವ ಹೊನಲು ಸುರಿಸುತ
ಲಿರಿಸು ವರಮತಿ ಸ್ಥಿರದ ಸ್ಥಿತಿಮತಿ
ವಿರತಿ ವರದಾಸೋಹ ನೈಜದ ಮತನಿರಂತರವ

ಅರಿವನರಿತಿಹೆನೆಂಬ ಗರ್ವದ
ಬಿರುನುಡಿಯು ಬರದಂತೆ ಭಾವದಿ
ಕರಚರಣಕೃತಿ ಬೋಧದೊಳಗಾ ತೋರದಂದದಲಿ ||
ಇರುವ ಸತ್ಕಾಯಕದಿ ತೊಂದರೆ
ಬರಲು ಸಹಿಸುವದಿರಲಿ ಪ್ರಭುವರ
ಹರಿಸು ನೈಜಾನುಭವ ತತ್ಫಲ ತ್ವರಿತ ಹೊರಬರಿಸು

ಬಸವರಾಜನೆ ರಾಜನೆನ್ನುವೆ
ನೆಸೆವ ನಿಜಸದ್ಭಕ್ತಿ ಭೂತಿಯು
ಬಸವರಾಜನ ಭಕ್ತಿಪಂಥದು ಪಂಥ ಸತ್ಪಂಥ ||
ಬಸವರಾಜನ ನೈಜ ನಿರುಪಮ
ಬಸವ–ಶೂನ್ಯದ ತೀರ್ಥಸುಖದಲಿ
ಬಸವರಾಜನ ವಚನರುಚಿಯೊಳು ಸರಸ ಸಾಗುವೆನು

ಮತ್ತೆ ಹುಟ್ಟುವರೆನ್ನದಾ ಶ್ರೀ
ತತ್ವಪೂರ್ಣತೆ ಬಲ್ಲವರು ನಿಜ
ತತ್ವಮಸಿ ಲಿಂಗಾಂಗದೊಳು ಕಂಡಂಥ ಬೀಳೂರು ||
ಮತ್ತೆ ಬಿದರಿಶಿಲಾಮಠಥಣಿಯ
ದಿತ್ತ ಸಾವಳಗಿಯರಭಾವಿಯ
ಸತ್ಯ ಸಂಪದ ಸಿರಿನಿರಾಭಾರಿಗಳ ಸ್ಮರಿಸುವೆನು

* ಸಿದ್ಧಾಂತ ಶಿಖಾಮಣಿ.

ಪರಮ ಪುರವೆಡೆಯೂರ ಚೇತನ
ವರನಿರಂಜನ ತೋಂಟದಾರ್ಯನ
ಮರೆವ ಭೃಕುಟಿಯ "ಮೂಜಗಂ" ಮೇಣನ್ನದಾನೀಶ ॥
ಪರಮ ಪುರಶೇಗುಣಿಶಿ ಮುರಘನ
ಸರಣಿ ಬಬಲೇಶ್ವರದ ಭೂಷಣ
ಗುರುಪದಾರ್ಯರ ಚರಣಗಂಧವ ಧರಿಸಿ ಸಾಗುವೆನು ॥ ೮ ॥

ತ್ರಿವಿಧ ದಾಸೋಹದಲಿ ಪೂರ್ಣವು
ವಿವಿಧರಂಗದ ಕಾರ್ಯಗೊಳಿಸಿದ
ಸುವಿಧೆಯದ ಸಾಹಿತ್ಯ ಪ್ರಕಟಿಸಿದಂಥ ಧಾರ್ವಾಡ ॥
ಶಿವಪ್ರಭಾ ಮುರಘೇಂದ್ರ ಮಠದ
ತವೆ ಪ್ರಶಾಂತ ಮಹಾಂತ ಪೂಜ್ಯರ
ವಿವಿಧತೆಯ ಶಕ್ತಿಯನು ಸ್ಮರಿಸುತೆ ಸಾಗುವೆನು ನಿತ್ಯ ॥ ೯ ॥

ಪುರ ಸಸಾಲಟ್ಟಿಯೊಳು* ಮಂಟಪ
ವಿರಲಿವರ ಶುಭವಾಣಿ ಸ್ತೋತ್ರದಿ
ಹೊರಟ ನುತಿ "ಕೃಪೆಯಾಗು" ಮಧುರತೆ ಕೇಳಿ ಮತ್ತೊಮ್ಮೆ ॥
ಇರುತಿರಲು ನಮ್ಮಯಾ ಮಠಕೇ
ಬರಲು ಕೇಳಿದೆ ಮತ್ತೆ ಆಸ್ವರ
ಅರಿಯುದಕೆ ಮನಸಾಯ್ತು ಕಿಂತುರೆ-ತ್ರಿವಿಧಿ ತಿಳಿಯದಿರೆ ॥ ೧೦ ॥

ಪರಮದಂಕಲಗಿಯಡವೀಶನ
ಚರಣದಾಶ್ರಯ ಗಡ್ಡದಪ್ಪನು
ಪುರದ ಮರೆಗುದ್ದಿಯೊಳು ನೆಲಿಸಿದ ಮಠದ ಗುರುವಂಶ ॥
ವರ ವಿರಕ್ತಕ್ರಮದಿ ಶೋಭಿತ
ಗುರುವು ಗುರುಪಾದಕರ ಸಂಜಾ
ತರಿಯೆ ಗುರುನಿರುಪಾಧಿ ಕ್ರಮ ಕಾಯಕದ ನಿಷ್ಠೆಯೊಳು ॥ ೧೧ ॥

ವರಿ ಪ್ರಭವದಾ ಚೈತ್ರ ಪೌರ್ಣಿಮೆ
ಯಿರುವ ಹಿಂದಿನ ದಿವಸ ಹಂಪಿಯ
ಹಿರಿಮೆ ಕೊಟ್ಟೂರೇಶ ಮಠದೊಳು ಶರಣರೈದನೆಯ ॥
ಸರಳ ಸಮ್ಮೇಳನದಿ ಕಳೆಯುತ
ಹೊರಟು ಬರಲಾ ಮುಂಡರಗಿಪುರ
ಹಿರಿಯ ಸಂಸ್ಥಾನಾನ್ನದಾನೀಶ್ವರರ ಮಠಕಂದು ॥ ೧೨ ॥

* ೧೭–೩–೧೯೬೫ † ೨೮–೫–೧೯೭೮

ಗಂಧ ಪೀಠದ ನವಮಗುರುಗಳ
ದಂದು ಪುಣ್ಯಾರಾಧನೆಯ ದಿನ
ದಂದು ಸನ್ನಿಧಿ ಲಿಂಗನಾಯ್ಕನ ಹಳ್ಳಿ ಶ್ರೀಗಳು ಮೇಣ್ ||
ಬಂದಿರುವ ಕೇರೂರ ಪೂಜ್ಯರು
ವೃಂದದಲಿ ನಾನೋರ್ವನಲ್ಲದೆ
ಯಂದು ಶರಣಸಮೂಹ ಸಭೆಯದು ನಡೆದ ಮರುದಿವಸ ||

ಹೊರಡುತಿರೆ ಮುಂಡರಗಿ ಪೂಜ್ಯರ
ರಿರವ ಮಧುರ ವಿಚಾರತೆಯ ಪ್ರಭೆ
ಹರಿಯುತೆನ್ನಯ ಮತಿಗೆಯುವರೊಳಗಿರುವ ನೈಜತೆಯ ||
ಕರುಣಕೋಡಿಯ ಸ್ಥಿತಿಯ ಸೊಬಗದು
ಸರಳದಿಂ ಪುಟಿದೆದ್ದವನುಭವ
ಎಲಸಿಲೇಖನ ದಾರ್ಶನಿಕ ಸಿದ್ಧಾಂತ * ಸಹಕೃತಿಯ ||

ಕರುಣಿಸಿರಲಾ ಸುಪ್ರಸಾದದ
ಶರಣ-ತ್ರಿವಿಧಿಯ ಶೋಧನೆಯ ಕೃತಿ
ದೊರೆಯಲಪ್ಪಣೆ ಪಡೆದು ಹೊರಡುವ ಸಮಯ ಸದು ಹೃದಯ ||
ಚರಿತನಾಯಕ ಪೀಠದೇಳನೆ
ಸರಣಿ ಸರಳತೆ ಚನ್ನವೀರರ
ಚರಣಕೊಂದಿಸುತವರ ನಿರಹಂಭಾವವನು ಸ್ಮರಿಸಿ ||

ಬರುತ ಕೃತಿಯಭ್ಯಾಸದೊಳಗಿರೆ
ಶರಣ ಮೈಲಾರ ಬಸವಲಿಂಗನ
ಭರಿತ ಗುರುಕೃಪೆ ಕಾವ್ಯ ತ್ರಿವಿಧಿಯ ಭಾಷ್ಯದೊಳಗೀಸೆ ||
ದೊರಕಿರುವದಾಹ್ಲಾದ ಸುಖದಲಿ
ಬರೆಯಬೇಕೆಂಬಾಸೆಯಾಯ್ತಿದು
ಹರ ಗಣೇಶ ಪುರಾಣ ಕೃತಿಯದ ಸಮಯೆ ನುಡಿದಂಥ ||

ಕಾಣದಿಹ ದೇವತೆಯ ಲೀಲೆಯ
ಸಾನುರಾಗದಿ ಬರೆವಕ್ಕಿಂತ ಸು
ಮಾನನೀಯ ನಿರಂಜನರ ಚರಿತಾಂಗ ಬರೆಯೆನುವ ||
ಮಾನವಂತರ ಹೃದಯ ಮನ್ನಿಸು
ತಾನು ಪುರವರ ಲಿಂಗನಾಯಕ
ಭಾನು ಮಹಿಮೆ ಮಹಾಂತ ಕೃತಿ ಪಿಡಿದಿರಲು ಮನದೊಳಗೆ ||

* ಗುರುಕರುಣ ತ್ರಿವಿಧಿಯಲ್ಲಿ-ವೀರಶೈವ ದಾರ್ಶನಿಕ ಸಿದ್ಧಾಂತ

ಎಣಿಕೆಗಾಗದದಣುವ ಮಾಪನ
ಗುಣಗುಣತೆ ಮಾಡುತ್ತ ಕುಳಿತಂ
ತೆಣಿಕೆಯುಂಟಾಯ್ತೇನೊ ಕಾರಣ ಮಹಿಮೆ ಸೀಮಿತವ ||
ಗುಣಿಸಿ ಬರದಂತಾಗಿದೆನ್ನುತ
ಮನಕೆ ಬಂದಿರಲೇನು ಮರುಳನ
ಗಣಿತೆನುತೆ ಗ್ರಹಿಸುತ ನಿರಾಭಾರಿಗಳು ಕರುಣಿಸಲಿ || ೧೮ ||

ಸನುಮತದ ಸನ್ಮಾನ್ಯಪಂಡಿತ
ರನುವ ಕೃತಿಯಾಗದಿರೆ ಹೆಡ್ಡನ
ಹೆಣಿಕೆಯಾದರು ಒಮ್ಮೆಯುಪಯೋಗಕ್ಕೆ ಬಂದೀತು ||
ಗುಣ ಚುರುಕುವಿರದಂಥ ಛಾತ್ರನು
ಮಣಿದು ಮರೆ ಕುಳಿತಂಥವೊಲು ಮತಿ
ಮನ ಮಹಾಂತರ ಸ್ಮರಣೆ ಮಾಡಿದೆಯಣುಕು ಮರೆತೀತು || ೧೯ ||

ಸುಂದರದ ಕಾದಂಬರಿಯು ತೆರ
ಹೊಂದಿ ಬರೆಯದೆ ಪದದೊಳೇಕೆನೆ
ಛಂದ ಉಂಗುರದೊಳಗೆ ಬಂಧಿತ ವಜ್ರಶೋಭಿಸದೇ ||
ಗಂಧ ಗುಪ್ತಿರುವಂಥ ಪುಷ್ಪವ
ಸಂಧಿಸುವ ರುಚಿ ಲಕ್ಷ್ಯಪಾಠಕ
ಹೊಂದಿಸಿರೆ ಷಟ್ಪದಿಯ ಕುಂಭ ಪ್ರಸಾದ ಸಿಗದಿಹದೇ || ೨೦ ||

ಕೃತಿಯು ಕರದಲ್ಲಿಡಿದು ಬುಧಗಣ
ಮತಿಗೆ ಹೊಳೆದಿಹ ದೋಷ ತಿದ್ದದೆ
ಕೃತಿಗಳೀ ತೆರ ಬರೆವ ಭೂಪರು ಬಹಳರಿಹರೆಂದು ||
ಮತಿ ಹೃದಯ ಭಾವನೆಯನವರಾ
ಜೊತೆಗೆ ತೋರಿಸಲೇನು ಚಕಿತದು
ಮತಿಗೆ ತೋರದು ಮತ ಮಹಾಂತರ ಮಹಿಮೆ ಸ್ವರಸೇವೆ || ೨೧ ||

ಸ್ವಾಂತ ಸುಖಪದ ಮಧು ವಿಲಾಸ ಸು
ಶಾಂತ ಭಾವಿಗಳೋದಿ ಕೃಪೆಯಿಡಿ
ಶಾಂತರಾ ಕೃತಿ ಭಾವದೊಳಗಿರಿಸುತಲಿ ಶಿವಯೋಗಿ ||
ಕಾಂತಿ ಕೊಂಡಾಡುವದೆ ಮತಿ ವಿ
ಶ್ರಾಂತಿಯಿಲ್ಲದೆ ನಡೆಯಲ್ಲೈ ನಿಜ
ಶಾಂತಿ ಮಾಡವದನ್ನದಾಸೋಹಾದಿ ಕಾಯಕದಿ || ೨೨ ||

ಬೇರೆಯವರಿಂ ಕೃತಿಯ ಬರೆಯಿಸಿ
ಚಾರು ನಾಮವ ಪಡೆವದಾಶೆಯು
ಧೀರ ಭಾವನೆ ರಹಿತ ಕೃತಿಯಿದು ಪರಮ ಗುರುವಾಣಿ ||
ಹಾರ ಹರುಷದಿ ಪಡೆದನುಗ್ರಹ
ಧಾರೆ ಹೊರಟಿರುವಂಥ ನೈಜ ವಿ
ಚಾರ ಶ್ರೀ ಕೃತಿ ಸಹಿತ ಪೂರ್ವದ ವೃಂದ ತಿಳಿಯುವದು ||

ಹಿಂದಿಯೊಳು ರಸಗೀತ ನಂತರ
ಹೊಂದಿಹುದ ಕಥೆ ಸಪ್ತ ತೀರ್ಥಂ
ಮುಂದೆ ಮಡಿವಾಳೇಶ ಚರಿತೆಯು ಬಳಿಕ ಚಿನ್ಮೂರ್ತಿ ||
ಚಂದ ತ್ರಿವಿಧಿಯೊಳಂದು ಷಟ್ಪದಿ
ಮುಂದೆ ಗಣಪ ಪುರಾಣ ಜೊತೆಗಾ
ನಂದ ವಚನಾಂಕುರದ ನಂತರ-ಹಳ್ಳಿ ಪೂಜ್ಯರದು ||

ಬಾಲನಿಗೆ ಸಿದ್ಧಾಂತ ಕೌಮುದಿ
ಮಾಲೆ ಪಾಠವು ಕಠಿಣವದು ಸಮ
ಶೀಲ ಜಂಗಮಲೀಲೆ ಸ್ವರಕೃತಿಯಜ್ಞ ಸರಳೇನದು ||
ಮಾಲೆಯೊಳು ದಾರಡಗಿದಂತಿರು
ವೋಲು ನಿಜ ನಿರ್ಭಾವಿಗಳ ನಿಧಿ
ಕಾಲ ಗರ್ಭದ ಮಹಿಮೆ ಕೃತಿಮತಿಗವನೆ ಸೂತ್ರಹನು ||

ಹಿರಿಯರನುಭವ ತಿಳಿಸಲಾರದೆ
ದೊರೆಯುದೈ ನಿಜದಿರವು ವಿದ್ಯೆಗೆ
ಸರಸದನುಭವ ಮುಂದೆ ಪುಸ್ತಕ ಪಾಠ ಸರಿಯೆನದು ||
ಬರುತಿರುವ ದೋಷಗಳ ತಿಳಿಸುತ
ಲಿರಿಸಿರ್ಪ ಸ್ವರಸೂಕ್ತಿ ಬುಧಗಣ
ವಿರಿಸಿರುವ ದರ್ಪಣಕೆ ಧೂಳಿಯದಾಳಿ ಹೊಸತಲ್ಲ ||

ಕಾವ್ಯಸುಂದರಿ ಕಾಣಲಾರದ
ಸೇವ್ಯಸುಂದರಿ ತತ್ವಬಂಧುರ
ಭವ್ಯ ಕಾಣ್ಬುದು ಸೂಕ್ತಿವಚನ ವಿಚಾರ ಪ್ರಭುತತ್ವ ||
ನವ್ಯ ಚಿತ್ರದ ವಿವಿಧ ಭಾವದ
ಕಾವ್ಯ ಡಿಂಡಿಮವಿಲ್ಲಿ ಸಲ್ಲುವ
ಮೌಲ್ಯ ಹೂವಿನ ಗಂಧ ಗರ್ಭಿತ ಉಂಟು ಹುಲ್ಲಲ್ಲ ||

ಸತ್ವ ಶೂನ್ಯರದಲ್ಲ ಗತಿಯು
ನ್ಮೃತ್ತ ಕೃತಿ ಡಾಂಭಿಕರ ಜೀವನ
ಗತ್ತು ಗಮಕದ ಗಾನಗುರಿ ಎನಿತಲ್ಲ ವೈಭವದಿ ॥
ಹೊತ್ತು ಕಳೆಯದ ರಾಜರಾಜರ
ಮತ್ತಿತರ ದುರ್ಮಾರ್ಗ ತಾಂತ್ರಿಕ
ವೃತ್ತಿ ವಾಮಾಚಾರಿಗಳ ವೀರಾಟ ವಿಧಿಯಿಲ್ಲ ॥ ೨೮ ॥

ವೀರಶೈವದ ನಿಜದ ನಿರುಪಮ
ಸಾರತರ ಸಿದ್ಧಾಂತ ಮಹದಾ
ಚಾರದಂತಾಚರಿಸಿ ತೋರಿಸಿದಂಥ ನಡೆಚನ್ನ ॥
ಮೇರು ಮಹಿಮ ನಿರಂಜನತೆಯಾ
ವೀರ ಜಂಗಮ ಚನ್ನನುಡಿರಸ
ಧಾರೆ ಶರಣ ವಿಲಾಸ ತಿಳಿವುದು ಸತ್ಯಶರಣರು ॥ ೨೯ ॥

ಒಪ್ಪ ಶ್ರೇಯ ವಿಲಾಸ ಕ್ಷೀರಕೆ
ಯೊಪ್ಪ ಬೋಧಕ ಬೋಧಮಧುರಸ
ಹೆಪ್ಪ ಹಾಕಿದೆಯೊಪ್ಪ ಸಮಯುವ ತಿಳಿಯುತವಮನದಿ ॥
ತಪ್ಪದಾಲಿಸುವವರ ಹೃದಯದಿ
ಯೊಪ್ಪಿರುವ ನವನೀತ ಹೊರಟಿರ
ಲೊಪ್ಪ ಸ್ವ ಚಿಂತನೆಯದಾಗ್ನಿಯೆ ಕರಗಿ ಕೊನೆಗೆ ಘೃತ ॥ ೩೦ ॥

ಅಲ್ಲಮ ಪ್ರಭುವಿನ ಪಂಥ ಪರಿಮಳ
ಬಲ್ಲಿದಾ ಬಸವಣ್ಣ ತತ್ವಮ
ಬಲ್ಲವಗೆಯೊಪ್ಪವದು ಬಿಜ್ಜಳನಂತೆ ಭಾವಿಕಗೆ ॥
ಸಲ್ಲದಿದು ಕಿರಿ ಸತ್ವಮಾಗಮ
ಯಲ್ಲರಿಗೆ ಬೆಲ್ಲಂತೆ ಸರಳದಿ
ಮೆಲ್ಲುದಕೆ ಶರಣಾಗಿ ಬನ್ನಿ ವಿಲಾಸ ವಿರಮಿಸಲು ॥ ೩೧ ॥

ಶುದ್ಧಕಾಯಕ ತತ್ಪರತೆ ಕಟಿ
ಬದ್ಧ ಲಿಂಗಾಂಗ ಸಮರಸ ರುಚಿ
ಒದ್ದನಿರೆಯಧಿಕಾರಿ ಎಂಟೈದಾರು ವಿಷಯವದು ॥
ಶುದ್ಧ ಬೋಧಕ ಬೋಧ ಪದ್ಧತಿ
ಬದ್ಧ ಸಂಬಂಧವದು ಸಾಧಿಸು
ತೆದ್ದ ಕೊನೆಫಲ ಶೂನ್ಯ ಸಂಪಾದನೆ ಪ್ರಯೋಜನವು ॥ ॥ ೩೨ ॥

ಕಾಲ ಹತ್ತೊಂಬತ್ತು ನೂರಾ
ಮೇಲೆ ಒಂಬತು ಶಕೆಯ ಪ್ರಭವದ
ಮಾಲೆ ಮಾಸಾಷಾಢ ಶುದ್ಧದ ದ್ವಾದಶಿಯ ತಿಥಿಯ ॥
ಮೇಲಿದು ಬುಧಾಮೃತದಿ ಶುಭದ ವಿ
ಶಾಲ ಜಂಗಮವರನ ಕೃತಿ ಕ್ರಮ
ಸಾಲ ನಾಲ್ವತ್ತಾರು ವರುಷೆನಗೀಗ ಪದಯೋಗ

ಬರೆದೆನೆಂಬಭಿಮಾನ ಬರದಂ
ತಿರಿಸು ಬರೆಯುತಲಿರುವ ವಿಷಯದಿ
ಯಿರಿಸು ಸತ್ಪದ ಸಂಸ್ಕೃತಿಯ ನಿಜದಿಂದಿರಸು ನಿತ್ಯ ॥
ಶರಣರೊಳಿರಿಸು ಮರೆವ ಮರೆಯಾ
ಗಿರಿಸು ಕಾವ್ಯದಿ ಗುರುಪ್ರಸಾದಕೆ
ಹರಿಸುತಾತಿಥ್ಯದೊಳು ಕಡೆಹಾಯ್ಸೆನುತ ಸ್ಮರಿಸುವೆನು

ಶುದ್ಧವಹುದಂಕಲಗಿಯಡವೀ
ಸಿದ್ಧ ಚರಣಾಶ್ರಯದಿ ಸ್ಥಾಪಿಸ
ಲೆದ್ದ ಪುರ ಮರೆಗುದ್ದಿ ಮಠವಿದುವಡವಿಸಿದ್ಧೇಶ ॥
ಬದ್ಧಿದಕೆ ಗುರುವಂಶವಿದು ಕ್ರಮ
ಬದ್ಧ ಗುರು ಗುರುಪಾದ ಕೃಪೆಯಿಂ
ದೆದ್ದ ಗುರು ನಿರುಪಾಧಿ ಕೃತಿಯೋಳ್ ಒಂದನೆಯ ಸ್ಥಲವು ॥

ಅಂತೂ ಸ್ಥಲ ೧ ಕ್ಕಂ ಪದ ೩೫ ಕ್ಕಂ
ಮಂಗಳ.

ಓಂ

## ಎರಡನೆಯ ಸ್ಥಲ

**ಸೂಚನೆ—**

ಪರಮ ಜಂಗಮ ಚನ್ನವೀರನ
ಹಿರಿಮೆ ಗಿರಿಜೆಗೆ ಹರನು ತಿಳಿಸಿದ
ಸ್ವರಗಳನು ತಿಳಿಯುವದು ಪ್ರಭುವಿನ ಪಾದ ಭೂಷಿತರು ॥

ಮನದ ಮೈಲಿಗೆ ತೊಳೆವ ಮಧುವರ
ತನುವ ತಾಪವ ಕಳೆವ ಮಧುಕರ
ಧನದ ಬಾಧೆಯ ಪರಮಶಾಸ್ತ್ರದಿ ಕಳೆವ ಸೂತ್ರಧರ ॥
ಘನ ವಿಚಾರದ ಶರಣ ಸ್ನೇಹಿತ
ನಿನಗುಚಿತವಾಗಿರಲುಯಾಲಿಸು
ಎಣಿಕೆ ತಪ್ಪಿರೆ ಸುಮ್ಮನೀನಿರೆ ಸುಮ್ಮನಾನಿರೆನು ॥ ೧ ॥

ನಿರುಪಮದ ನಿರ್ಲೇಪ ನಿತ್ಯದ
ನಿರಘನೆ ನಿರಾಕಾರಮಯನಾ
ಪರಮ ಪರತರ ಲೀಲೆಗೋಸ್ಕರ ಜಂಗಮದ ರೂಪ ॥
ಧರಿಸುತಾ ಸಹಜದಲಿ ಭೂಷಿತ
ವರನು ಸ್ವರಸಾಕಾರ ಪರಶಿವ
ಗಿರಿಜೆ ಸಹಿತ ವಿರಾಜಮಾನನು ಮಹತೆಗಾಮಹನು ॥ ೨ ॥

ಜಂಗಮ ಸ್ವರೂಪದೊಳು ಕಂಟಕ
ಭಂಗಗೊಳಿಸುದಕಾಗಿ ಲೀಲೆಯ
ರಂಗದೊಳು ಸಾಕಾರನಾಗಿಹ ಪರಮ ಪರಮಾತ್ಮ ॥
ಸಂಗಮನ ಶರಣಾಳಿ ಭೂಷಿತ
ರಂಗದೊಳು ವಿವಿಧಾಂಗ ಶೋಭಿತ
ಕಂಗಳಕೆ ಶೋಭಾಯಮಾನರು ಸಾಧು ಸಹಿತಾತ್ಮ ॥ ೩ ॥

ಓ ಕರುಣಿ ಕಾಮಾರಿ ಸಂಗದೊ
ಳೀ ಕಮಲ ಕಮಲಜನು ಶೋಭಿತ
ರೀ ಕಮಲೆಯರ ನೇಹ ಮಂಗಳಗಂಧ ಸಹಿತಿರುವ ॥
ಲೋಕನಾಯಕಗಿರುವ ಶಿವಪುರ
ಏಕಹುದು ಸಮರಸದ ಸಂತಸ
ಸಾಕೆನದ ಸಾಕಾರಮಣಿ ಗಣಪೂರ್ಣ ಹಿಮಗಿರಿಯು
ಆಗಮದ ಘೋಷಣದು ವೇದದ
ರಾಗರಂಜಿತ ವಾದ್ಯ ಮೇಳದ
ಯೋಗ ರಸಿಕನುರಾಗ ಶಾಂತಿಯು ರಸದ ಕೊನೆಭಾಗ ||
ನಾಗ ಕುಂಡಲಧರನ ನಿರುಪಮ
ಭಾಗಿಸದ ನಿರ್ಭೇದ ಪ್ರಮಥರ
ಸಾಗರದ ಸ್ಥಿತಿಯಂತೆ ಚಿಂತನ ಕಣ್ಗೆ ಮಂಗಳವು
ನಿರಘ ನಿರ್ಗುಣ ನಿತ್ಯ ನಿರ್ಲಯ
ಹರನು ಶೋಭಿತನಿರಲು ಪೀಠದಿ
ಗಿರಿಜೆ ಗುಹಗಂ ಸನಿಹ ಗಣಕುಲ ಭೂತಶೃಂಗಾರ ||
ಹಿರಿಮೆ ಮುನಿಮಹ ಸಂಗ ಸಜ್ಜಿತ
ಸಿರಿಯು ಸಂತಸ ಗಾನ ಗುಂಜಿತ
ಗುರಿಯು ಗಂಗಾ ಸಾಗರಂತೆಯು ರಂಗ ಚಿರಸಂಗ
ಹೊಂದಿರುವ ಚರಣಾಂಗ ಪ್ರೀಯರು
ಹೊಂದಿ ಚಿದ್ರುಸ ದೃಷ್ಟಿ-ಲಿಂಗದ
ಗಂಥ ಅನುಭವಗೋಷ್ಠಿ ಸಂತಸ ಸಂಧಿನಡೆದಿರಲು ||
ಇಂದುಧರ ಮಹರುದ್ರ ವೃಂದ ರ
ಸೇಂದ್ರ ಯಕ್ಷರ ಜೊತೆಗೆ ಸಹಜಾ
ನಂದ ಚರ್ಚೆಯು ನಿತ್ಯಮುಕ್ತರು ಪ್ರಮಥರಿವರೆಂಬ
ಆಗ ಉಮೆ ಪ್ರಮಥರೆಡೆ ದೃಷ್ಟಿಯ
ಳಾಗ ಇಡುತಲಿ ಯೋಚಿಸುತಳಾ
ವಾಗ ಪರಶಿವ ಕೇಳಿದನು ನಿನದಾವಯೋಚನೆಯು ||
ಈಗ ತಿಳಿಸೆನಲಾಗ ಕಮಲೆಯು
ಆಗಮಿಸಿದ ಗಣಂಗಳಿಗೆ ಈ
ಯೋಗ ತೃಪ್ತಿಯು ದೇಹಿಯಾಗಿರುವಾಗ ಪಡೆದವರೆ

ಅನುವದಿಂದೆ ವಿದೇಹಿಯಾಗುತ
ಘನತೆ ಪಡೆದವರೇನು ಎರಡೊಳು
ಘನತೆಯಾವುದುದೆನುವ ಪ್ರಶ್ನಕೆ ಪರಶಿವನ ನುಡಿಯು ॥
ಇನಿತು ನಿನ್ನಯ ಪ್ರಶ್ನಗಳು ನಿಜ
ವಿನಯದಿಂ ಬಂದಿಹವು ಸಂತಸ
ವೆನಗೆ ಭಾಮಿನಿ ಕೇಳು ಪ್ರಮಥರು ನಿತ್ಯಮುಕ್ತರರು ॥ ೯ ॥

ಮೇಳವಿಸಿ ಶಿವನುಡಿದನೀ ಶಿರ
ಲೋಲೆ ತಿಳಿ ಜಂಗಮರು ಶಾಂತತೆ
ಶೀಲ ಸಂಪದ ದೇಹಿಯಾಗಿರುವಾಗ್ಗೆ ಸಮರಸರು ॥
ಕಾಲಗತಿ ಕಾಯಳಿದ ಬಳಿಕದು
ಲೋಲನಿಗೆ ಅನುಭವಕೆ ಬರವದು
ಮೇಲೆನಿಪ ನಿಜಮುಕ್ತನಾಪೆನು ಭಾವಯೆಂಬುದದು ॥ ೧೦ ॥

ಮಧುರೆ ತಿಳಿ ಪದ ಶ್ರೇಷ್ಠ ಪ್ರಥಮದು
ಸದರ ನಿಜದನುಭವಕೆ ಗೋಚರ
ಪದ ವಿದೇಹದ ಗತಿಯು ತನ್ನನುಭವಕೆ ತೋರದದು ॥
ಚದುರೆ ನುಡಿಯಾಲಿಸಿದಳಾ ಕ್ಷಣ
ಸದಯರಂಥವರಿಹರೆ ಯೆನಲಾ
ಚದುರನಲ್ಲನು ಲೀಲೆ ಮರೆತೆಯೊ ಸಿದ್ಧಲಿಂಗಾದಿ ॥ ೧೧ ॥

ಚನ್ನಬಸವಂ ಬಸವ-ಶಂಕರ
ಅನ್ನದಾನೀಶಂಥವರ ನೀ
ಮುನ್ನ ಕಂಡಿಹ ಗುರುಪರಂಪರೆ ಪೂರ್ಣರಂ ಸ್ಮರಿಸು ॥
ಸನ್ನಿಧಿಯೆ ಶೋಭಿಸುವ ಪ್ರಮಥರ
ರನ್ನೆ ನೋಡುತೆ ನುಡಿದಳಾ ನಿಜ
ದಿನ್ನು ಇಹರೇ ಭೂದೊಳಗೆ ಎನಲಾವಾಗ ಪರಶಿವನು ॥ ೧೨ ॥

ಮೂರ್ತಿ ಶೋಭಿಸುತಿಹನು ನನ್ನಂಶ
ಕೀರ್ತಿವಂತಿ ಸಂಪನ್ನ ಜಂಗಮ
ಸ್ಫೂರ್ತಿ ನಿಜದಾಚಾರ ಶರಣ ವಿಚಾರ ಸಂಪೂರ್ಣ ॥
ತೀರ್ಥ ಜಂಗಮಲೀಲೆ ಗೈಯ್ಯುತ
ಸಾರ್ಥ ಸಿದ್ಧಾಂತೆನ್ನ ಚೇತನ*
ಮೂರ್ತಿ ಶ್ರುತಿಪತಿಯುವನೆ ತಿಳಿ ಸುವಿಲಾಸಿ ಚನ್ನವರ ॥ ೧೩ ॥

* ಶಿ. ದರ್ಪಣ-ಪದ ೭೪/೨,೫

ನಿತ್ಯ ನಡೆನುಡಿ ಚನ್ನವೀರನು
ಸತ್ಯ ಸಾಂಪ್ರತ ಗುರು ಪರಂಪರೆ
ಸ್ತುತ್ಯಗತಿ ಸಾನಂದ ಸ್ವಯ ಸತ್ಕಾರ್ಯ ಶ್ರೀಮಂತ ||
ಸ್ತುತ್ಯವೆನಿಪ ಪಿಪೀಲಿಕಾ ಕ್ರಮ
ಸತ್ಯರಿಗೆ ಬೋಧಿಸುವ ಬಂಧುರ
ತಥ್ಯಪೂರ್ಣನು ತತ್ವಕದು ಬೆಲೆಕೊಡುವ ಪುಂಗವನು ||

ಮರೆಯದದು ಅಲ್ಲಮ ಪರೀಕ್ಷೆಯ
ಸ್ಮರಿಸುತದನಾ ಕೃತಿಗೆ ತರದದು
ತರುತದನು ಕೊನೆಸೋತು ಮರುಗದು ಮರಗಿ ಕೊರಗದದು ||
ಹರ ಗಣಂಗಳ ಘನತೆ ಹರ್ಷದ
ಬರಿಯ ಸ್ತ್ರವನಕೆ ತಿಳಿಯದಾ ಗುಣ
ಸರಳದಿಂ ಸೇವಿಸಿದ ಸೌಮ್ಯಗೆ ಮಹಿಮೆ ತಿಳಿಯುವದು ||

ಪರಮ ಪ್ರಭುವಿನ ಶೂನ್ಯನಿಲವಿನ
ಹಿರಿಮೆನಿಸುವಾ ಶರಣ ಸ್ವರಸಿರಿ
ಸುರಿಸಿ ಸಂಪಿಗೆ ಸೊಂಪು ಜಗಕೆಲ್ಲಕ್ಕೆ ಪಸರಿಸುತ ||
ಹಿರಿಮೆ ಹೆಚ್ಚಿಸಿ ಸಂಘಟಿಸಿ ನಿಜ
ಸರಣಿ ಸಂಕುಳ ಮಂಗಳಾತ್ಮಕ
ಶರಣರೆಲ್ಲರಿಗರಿಸಿ ಸಾಗಿಹನಿಂತು ಚಿತ್ಕಿರಣ ||

ಭೂತಳದಿ ಸುಜ್ಞಾನ ಪೂರ್ಣ ಪ್ರ
ದಾತ ಪ್ರಭು ನಿರ್ಭೀತ ಜಲಚರ
ಪ್ರೀತ ಸಂತತಿನಾಥ ಸಾಧಕಸಂಘ ರಸಪಾತ ||
ಖ್ಯಾತ ಕುಲಕೆ ವಿಭೂತಿಯಾಶ್ರಯ
ದೋತು ದೃಷ್ಟಿಯ ಪಾತದಿಂ ರಸ
ಗೀತ ಬೋಧ ಸಮೇತ ನಿಶ್ಚಲ ಸುಪ್ರಭಾತಮತ ||

*ನಾಮರೂಪಿಗನಲ್ಲ ಕಥನದ
ಸೀಮ ಹಂಗಿಗನಲ್ಲ ಚಂಚಲ
ಹೇಮದಾಸಿಗನಲ್ಲ ಕಾಮುಕ ಸೋಮನಂತಲ್ಲ ||
ಸ್ವಾಮಿವರ ಚರಮೂರ್ತಿ ಜಂಗಮ
ತಾಮಸಿಗನೆನಿಸಲ್ಲ ಜಂಜಡ
ನೇಮವಿಡಿದವನಲ್ಲ ವೀರ ಮಹೇಶ ಸಹಜಾತ್ಮ ||

* ಶಿ. ದರ್ಪಣ ೨೧/೧

†ಓತು ಷಣ್ಮಾತನಲ್ಲ ಭಾಷಿತ
ಭೂತಭಾವಿಯ:ನಲ್ಲ ಪರಿಯುವ–
ಧೂತ ಮಾರ್ಗಿಗನಲ್ಲ ಕರ್ಕಶನಲ್ಲ ಡಾಂಭಿಕರ ||
ಗೀತ ರೂಪಕನಲ್ಲ ಕಲಹಕೆ
ಖ್ಯಾತ ವಿಶ್ವಾಮಿತ್ರನಲ್ಲನ–
ಜಾತ ಶತೃವು ಸುಲಭ ಜಂಗಮದೇವ ಮಹಭಾವ || ೧೯ ||

ಮುಗಿಲೊಳಿದ್ದವನಲ್ಲ ಸೊಗಸಿನ
ತೊಗಲು ಹೊದ್ದವನಲ್ಲ ಜಗದೊಳು
ಬಗೆ ಬಗೆಯ ಗಾರುಡಿಗ ಮಾಲಿಗ ಹಗರಣಿಗನಲ್ಲ ||
ಮಿಗಿಲು ಗಂಡರ ಗಂಡ ಜಂಗಮ
ಸೊಗಸು ಶರಣರ ಸೌಖ್ಯ ಸಂಗಮ
ಜಗದೊಡೆಯರಿಗೆ ತತ್ವೊಡೆಯ ತಿಳಿ ನೀರೆ ನೀಯೆಂದ || ೨೦ ||

ಕಾಮಕಾಂಚನ ಹುರಿದ ಸಿರಿ ಸ
ತ್ಕ್ಯಾಮಿ ನಿರುಪಮ ನಿರಘ ಸುಖದಿ ವಿ
ರಾಮಿ ಅಜ್ಞಾನ ತಿಮಿರಕೆ ಪೌರ್ಣಿಮೆಯ ಶುಭಸೋಮ ||
ನೇಮ ನೀರಜಗಾಮಿ ಫಲ ನಿ
ಷ್ಕಾಮಿ ಶುಕ್ರ ಪ್ರಭಾಂಗ ಪೂರ್ಣ
ಸ್ವಾಮಿ ಸಂಪದ ಚನ್ನವೀರಂ ಕಮಲೆ ತಿಳಿಯೆಂದ || ೨೧ ||

ಚರಣದೊಳು ಪಾವುಗೆಯನಾ ಎಡ
ಕರದೊಳಿಷ್ಟ ಬ್ರಹ್ಮ ಪಿಡಿದಿಹ
ವರ ಭಸಿತ ರುದ್ರಾಕ್ಷಿಯ:ನಲಂಕರಿಸಿದಾ ಮಹಿಮ ||
ಶರಣರಿಗೆ ತಾನೊಲಿದು ಸಲಹುವ
ಹಿರಿಯ ಮದ್ಗುರುವರನು ಸುಲಭನು
ನಿರತನಿಹ ನೂರೊಂದು ಸ್ಥಲದ ವಿಚಾರ ಸಂಬಂಧಿ* || ೨೨ ||

ತಾನೆ ತತ್ವಪ್ರಧಾನಿ ವಿದ್ಯಾ
ದಾನಿ ಶರಣೋದ್ಧಾರಿ ಚನ್ನಂ
ಕಾಣದಿಹ ಬಹುದುರ್ವಿಕಾರ ವಿದೂರ ಮಧುವಾಣಿ ||
ಸ್ವಾನುಭಾವಾಚಾರ್ಯ ಶ್ರೇಷ್ಠ ನಿ
ಧಾನಿ ತಿಳಿಯವಧಾನಿ ವಚನ ಪ್ರ
ಮಾಣಿ ಸತ್ಯಾರೂಢಿಯವಿರಳ ಪೂರ್ಣ ರಸಶ್ರೇಣಿ || || ೨೩ ||

† ಶಿ. ದರ್ಪಣ ೨೫/೨. ೬. ೭., * ಶಿ. ದರ್ಪಣ ೧೪/೧೩, ೩೦/೩.

ಚನ್ನ ಪದ ಸ್ಪರ್ಶದಲಿ ಸುಜಲಾಂ
ಚನ್ನಕರ ಸ್ಪರ್ಶದಲಿ ಸುಫಲಾಂ
ಚನ್ನ ಕಾಯದ ಸ್ಪರ್ಶದಿಂ ಪವನಹುದು ಶೀತಲತೆ ||
ಚನ್ನನ ಪ್ರಭಾ ವಲಯದೊಳು ಸಂ
ಪನ್ನವಹುದೈ ಸಸ್ಯ ಶಾಮಲ
ಚನ್ನಸ್ಪರ್ಶದಿ ಭೂ ಜಡವು ಪಾವನತೆ ಗುಹಮಾತೆ || ||

ಕಾಮ ಕ್ರೋಧಗಳೆನಿತಿರದ ಸುವಿ
ರಾಮ ನಿರ್ಗುಣ ಚನ್ನ ಚೇತನ
ವ್ಯೋಮ ಸ್ಥಿತಿಯ ಸುನಾಮ ಜಂಗಮನವನು ಕಲ್ಯಾಣಿ ||
ಶ್ರೀ ಮಹತೆ ಕರಿಗೊಂಡು ಬೆಳಗುತ
ತಾಮಸರ ಕಳೆಯುತ್ತ ಸಲೆ ಸ
ತ್ಕಾಮದಾ ಅರವತ್ತಮೂರರ ಶೀಲ ಸನ್ಮಾನಿ || ||

ಭರಿತವರ ಹೃಷಿಕೇಶ ಕಾಶಿಯೊ
ಳಿರುತ ಭೂರಿಸುಕ್ಷೇತ್ರಗೊಳಿಸುತ
ದುರುಳರಾ ದುರಿತವನು ಕಳೆದು ತ್ರಿವೇಣಿಯಿಂದಿಡಿದು ||
ಬರುತನರ್ಮದೆ ದಾಟಿ ಕೃಷ್ಣೆಯ
ಹರಸುತೆಲ್ಲಕೆ ತುಂಗಭದ್ರೆಯ
ಭರಿತತಾಪವ ಕಳೆದು ಮಧುರನು ಹಂಪಿ ತಂಪಿರಿಸಿ ||

ಎನ್ನ ಚೇತನ ಪೂರ್ಣ ಪ್ರಜ್ಞನು
ಚನ್ನ ತತ್ವ ಸ್ವರೂಪಿಯಾದವ
ನನ್ನ ಸ್ಮರಿಸಿರೆ ಸಾಧ್ಯವಾವುದಿದೆಲ್ಲ ನಿಜದಿಂದೆ ||
ಚನ್ನ ಸಾಧ್ಯದು ಸಾಧಿಸಿದವನು
ಚನ್ನನವನೇ ಒಪ್ಪುತಿಹ ಸಂ
ಪನ್ನ ಜಂಗಮದೇವ ತಾನೇ ನಂಬು ಕಾಮಾಕ್ಷಿ || ||

ತಿಳಿಸಿಯುಳಿಸುತ ಬೆಳೆಸಿ ಕಲೆಗಳ
ಗಲಿಸಿ ಗುರುಕುಲನೆಲಿಸಿ ವಿದ್ಯೆಯ
ಫಲಿಸಿ ಚರಪರ ಜಂಗಮರ ತತ್ವಾರ್ಥ ಸ್ಥಿರಗೊಳಿಸಿ ||
ಕಳೆಯು ಕಂಗಳಯೋಗ ಸಾಧಕ
ರೊಳಗೆ ನೆಲಿಸುವ ಧ್ಯೇಯ ಮೂರ್ತಿಯ
ನಲುಮೆ ಚನ್ನಗೆಯುಪಮೆ ಚನ್ನನೆ ನಂಬು ಜಗಮಾತೆ || ||

ಹರಸುತನುವಿರಲೇನು ಲೋಕದಿ
ಗುರುಸುತನು ತಾನಾಗದಿರೆ ನಿಜ
ದಿರವ ತಿಳಿಮೆಗೆ ಸರಳವಾಗದುದೆಂಬ ತತ್ವದಲಿ ||
ಸರಿಯೆ ತತ್ವವ ಬೋಧಿಸುವ ವರ
ಸಿರಿ ನಿಜದನುಷ್ಠಾನದಿಂ ಗುರು
ಚರನು ಜನಕಲ್ಯಾಣಕೆಂದೇ ಹಾಲವರ್ತಿಯಲಿ * || ೨೯ ||

ಮಧುರನಲ್ಲಮ ಗುರುಪರಂಪರೆ
ಸದರ ಸಲ್ಲೀಲೆಯೊಳು ಪೂರ್ಣನು
ವಿಧಿಯ ಕರ್ಮಗಳಾಚೆ ಬೆಳಗುವ ಸ್ಥಿತಿಯನುಷ್ಠಾನ ||
ಸದರದೋತು ಶಿವಾನುಭವದೀ
ಸುಧೆಯ ಸ್ವಶ್ರುತಿ ಸಾಕ್ಷಿಭೂತನ
ನಿಧಿ ನಿರಂಜನ ಸುಖದಿ ಸೌಖ್ಯನು ನಂಬು ರುದ್ರಾಣಿ || ೩೦ ||

ಮರವೆಯಿರದ ಮಹದರುವೆ ಚಿರ
ಮೆರಗು ಕಾಷಾಯಾಂಬರ ಧರನು
ಪರಮಸುಖಿ ತಾ ಚನ್ನವೀರ–ವಿಲಾಸದೊಳು ನಲಿವ ||
ವರ ವಿಭೂಷಿತ ಸ್ವರ ಸುಭಾಷಿತ
ಚರಿತ ವಿದ್ಯಾಭರಿತ ಚಿದ್ರತ
ನಿರತ ನಿಶ್ಚಲ ಚಿತ್ಕಲಾಸಾಧನ ನಿರಂಜನತೆ || ೩೧ ||

ನೀತಿ ನಿರುಪಮ ನಿಯತಿ ಸಂಯಮ
ಜ್ಯೋತಿ ಚಿನ್ಮಯಭರಿತ ಚತುರ ವಿ
ಭೂತಿ ವಿವರಣ ಜಾಣ ಸ್ಥಲ ಸತ್ಪಂಥ ಸಚ್ಚರಿತ ||
ರೀತಿ ಹಾರ್ದಿಕ ಹರ್ಷ ಸಹಜತೆ
ಮಾತು ಕರುಣಾರಣ್ಯ ಗುಣಭರಿ
ತಾತ ಗಹನ ನಿರಂಜನಾಗಸ ತರಣಿ ಚಿತ್ರಮಥ || ೩೨ ||

ಇಂತು ನುಡಿಯಾಲಿಸಿದ ಭೈರವಿ
ಸನಿಹ ಶೋಭಿಸುತಿರುವ ಗಣರೆಡೆ
ಘನತೆ ಭಾವದಿ ನೋಡುತಿಹಳೈ ಧನ್ಯರಿವರೆಂದು ||
ತನಗೆ ತಾಂ ಯೋಚಿಸುತೆ ಮೌನದಿ
ಘನ ಪರಂಪರೆ ಚನ್ನವೀರನ
ವಿನಯ ವೈಭವ ಪೂರ್ಣ ಪ್ರಭೆಯಂ ತಿಳಿಯುವಾಶೆಯಲಿ || ೩೩ ||

* ಶಿ. ದರ್ಪಣ ಪದ–೧/೩

ಶುದ್ಧವಹುದಂಕಲಗಿಯಡವೀ
ಸಿದ್ಧ ಚರಣಾಶ್ರಯದಿ ಸ್ಥಾಪಿಸ
ಲೆದ್ದ ಪುರವುರಗುದ್ದಿ ಮಠವಿದುವಡವಿಸಿದ್ಧೇಶ ||
ಬದ್ದಿದಕೆ ಗುರುವಂಶದೊಳು ಕ್ರಮ
ಬದ್ದ ಗುರು ಗುರುಪಾದ ಕೃಪೆಯಿಂ
ದೆದ್ದ ಗುರು ನಿರುಪಾಧಿ ಕೃತಿಯೋಳ್ ಎರಡನೆಯಸ್ಥಲವು ||

**ಅಂತೂ ಸ್ಥಲ ೨ ಕ್ಕಂ ಪದ ೩೪ ಕ್ಕಂ ಒಟ್ಟು ಪದ ೬೯ ಕ್ಕಂ**

**ಮಂಗಲಂ.**

ಓಂ

## ಮೂರನೆಯ ಸ್ಥಲ

ಸೂಚನೆ—
*ಹರಪುರದ ನಾಯಕನ ವಂಶದಿ
ಬರುವ ಪಾಳೆಯಗಾರನಾಗಿಹ
ಪರಮ ನೀತಿಯ ಸೋಮಶೇಖರ ಲಿಂಗ ಧರಿಸಿದನು ||

ಶ್ರೀ ಶಿಖಾಮಣಿ ಶ್ರೇಣಿ ತತ್ವಾ
ಕಾಶ ಪ್ರಭು ಶಿವಯೋಗಿ ಸಂಥ ಪ್ರ
ಕಾಶ ಪೂರ್ಣ ವಿಚಾರ ವಿವರಣ ಸಂಗ ಸಂಕಿರಣ ||
ಭೂಷಣತೆಗೊಂಡಿರುತ ಮನಕೆ ವಿ
ಭೂಷಣತೆ ತಂದಿಡುವ ಷಟ್‌ಸ್ಥಲ
ಘೋಷಿಸುವ ಸದ್ಬೋಧ- ಸಂಗಮಕೆನ್ನ ಶರಣಾರ್ಥಿ || ೧ ||

ತತ್ವತೇಜ ಪ್ರಸಾದ ಪೂರ್ಣರ
ತತ್ವದುಪದೇಶವನು ನೀಡುತ
ಸತ್ವದಾಚಾರೊಳಗೆ ಮಿರಿಸಲು ಶರಣ ಶರಣರನು ||
ಸತ್ವ ಮೂರುತಿ ಬಗೆ ಬಗೆಯ ಪ್ರ
ಭುತ್ವದನುಭವ ಬೀರಿ ಸಾಧನ
ತತ್ವ ಚಿಜ್ಜ್ಯೋತಿಯಲಿ ಚಿರವಿಟ್ಟಂಥ ಶಿವಯೋಗಿ || ೨ ||

ಸೊಂಪು ಸಂಸ್ಕೃತಿ ಪೂರ್ಣ ಸಂಪದ
ಹಂಪಿ ತಂಪನುಗೂಡಿ ಚನ್ನನ
ಕಂಪು ಹರಡುತ ಭೂವಲಯ ಜಡಚೇತನೆಲ್ಲದಕೆ ||
ತಂಪು ಮಧುರತೆ ಸಾರಿ ಮುಂದೆ ಚಿ
ದಂಪು ಹರಪನಹಳ್ಳಿ ಸನಿಹದೊ
ಳಿಂಪು ಸ್ಥಾನದು ಹಾಲವರ್ತಿಯಲಿರ್ದು ಗೌಪ್ಯದಲಿ || ೩ ||

* ಶಿ. ದರ್ಪಣ – ೭೩/೩ ೨

ತಿಳಿಯ ನೀರಿನ ಹೊಂಡವಿಲ್ಲಿರೆ
ಸೆಲೆಯು ಹಾಲಿನ ರುಚಿಯು ಹರ್ಷದ
ನೆಲೆಯು ಕಾರಣ ಹಾಲವರ್ತಿಯು ಸಾರ್ಥಕದ ನಾಮ ||
ಬಲದು ಸ್ವಾಮಿಯು ಸ್ಪರ್ಶ ಸುಖದಲಿ
ಸೆಳೆದು ಜನಮನ ಚಕಿತದಂದದಿ
ಸುಳಿದು ಹೃದಯದಿ ಹೊಳೆದು ಬೆಳಗುತೆ ಗುಡ್ಡ ಭೂಪುರವು

ಒಳಗೆ ನೋಡಿರಲಲ್ಲಿ ತಪಘನ
ಕಳೆವು ಬೆಳಗಿರಲಲ್ಲಿ ಹೊರಗಣ
ಚಲ ಮೃಗಾಂಗಣ ವೈರ ಭಾವನೆಯಿರದ ಪರಿಸರಣ ||
ತಿಳಿಸುತಿದುವು ಪತಂಜಲಿಯ ನಿಜ
ದೊಲಿವೆ †ಸೂತ್ರದು ಚಿತ್ರ ಸಾಕ್ಷಿಯು
ಫಲವಹಿಂಸಾ ಪ್ರಭೆಯ ಸನ್ನಿಧಿ ವೈರರಹಿತವದು

ಆತ್ಮ ಸರಸ ವಿಭೂತಿಮಯನಿಗೆ
ಯಾತ್ಮರಸಿಕನಿಗೆತ್ತರಾಗ ದು
ರಾತ್ಮರಂತಿಹ ಕ್ರೋಧವೆತ್ತದು ದ್ವಂದ್ವಪರಿಹರದ ॥
ಆತ್ಮ ಸಾಕ್ಷಾತ್ಕಾರ ಯೋಗಿಯ
ಸ್ವಾತ್ಮಾದನು ನಿರ್ವೈರಭಾವ ಜ
ಡಾತ್ಮ ಹಿಂಸಕ ಪ್ರಾಣಿಯೊಳು ಸಹ ಪ್ರತಿಭೆ ಪಸರಿಸುತ

ಮಿತ್ರಭಾವವೆ ಬೆಳಗುತಿರೆ ಸುಪ
ವಿತ್ರ ತೋರ್ಪುದು ಜಗಕೆ ಸೂಕ್ಷ್ಮದ
ಸೂತ್ರ ತಿಳಿಯದೆ ಹಾಳು ಮಾಡುತ ಬಾಳ್ವೆಗೋಳಿನಲಿ ||
ಖಾತ್ರಿ ಸತ್ಯ ಪ್ರತಿಷ್ಠೆ-ಪೂರ್ಣರ
ಪಾತ್ರ ತಿಳಿಯರು ಇವರ ಕೃಪೆ ಫಲ
ಮಾತ್ರ ಸಿದ್ಧಿಸಿ ಸಫಲ ದೊರೆಯಲಿದೇ ಪ್ರಯೋಜನವು

ತಾನು ತಾನಿರಲಿತ್ತ ಹೊರಗಡೆ
ಕಾಣುತ ದುರಾಚಾರಿಗಳ ಮತಿ
ಸಾಣೆ ಹಿಡಿದಂತಂತೆಯಣಕಿನ ತಂಡ ಪಾಷಂಡಿ ॥
ಮೇಣು ಲಿಂಗಾಚಾರ ಸಂಗಕೆ
ಹಾನಿ ಮಾಡುತ ಧರ್ಮತೆಯ ಪರಿ
ಕೋಣ ಕಾದಾಟಂತೆ ಪರಮತವಾದಿಗಳ ತಂಡ

† ಪಾ. ಸೂ. ೨/೩೫

ವೀರಶೈವಾಚಾರವಿರದಾ
ಚಾರ ಗೊರವರ ವೇಷ ವಿಸ್ಮಯ
ಕಾರಿ ಘಟನೆಗಳೆಲ್ಲ ರಚ್ಚರಿಗೊಳಿಸುವಂತಿಹುದು ॥
ಸಾರವಲ್ಲದ ಕಂಡು ಲಿಂಗಾ
ಚಾರ ಜಂಗಮಭಕ್ತಿ ಮರೆತು ವಿ
ಚಾರ ಹೀನರ ಹಿಂದೆ ಹತ್ತುತ ಹಂದಿಗಳ ಹಿಂಡು ॥ ೯ ॥

ಸಂಗ ಸಂಸ್ಕೃತಿ ರಹಿತರಾಗಿ ಕು
ಸಂಗದೊಳು ತಮ್ಮತನವನೆ ಮರೆ
ತಂಗಣದಿ ಉರುಳಾಡುತಿಹರೈ ಡಾಂಭಿಕತೆಯ ನುಡಿ ॥
ರಂಗದೊಳು ಮೆಚ್ಚುತ್ತೆ ಕೃತಿ ಕಪ
ಟಾಂಗಣದಿ ಮೆರೆಯುತ್ತೆ ತಾಂತ್ರಿಕ
ಸಂಗ ಪಿಡಿದಿಹ ಚಿತ್ರ ನಿಜಸರ್ವತ್ರ ವಿಷಗತ್ರ ॥ ೧೦ ॥

ಎಲ್ಲಿ ನೋಡಿರಲಲ್ಲಿ ಆಂಗ್ಲರ
ರಲ್ಲಿ ಮುಸ್ಲೀಮರೊಳು ಸಹಿತಿರ
ಲಲ್ಲಿ ಸಂಸ್ಥಾನಿಕರ ವೃಂದದಿ ಭಿನ್ನ ಭಿನ್ನತೆಯು ॥
ಎಲ್ಲೆಡೆಗೆ ತುಂಬಿರಲು ಧಾರ್ಮಿಕ
ಸೊಲ್ಲು ಕರಗಿರೆ ವೀರಶೈವರ
ಬಲ್ಲತನ ಬರಿದಾಗಿ ಬಡಕಲು ಶರಣಸಿದ್ಧಾಂತ ॥ ೧೧ ॥

ಇಂತು ಹದಿನೇಳನೆಯ ಶತದೊಳ
ಗಂತು ಹಠ ವೇದಾಂತಿ ಸಿದ್ಧರ
ಕ್ರಾಂತಿ ಸಮಯದು ಕಾಯದಂಡನ ಬಾಯಬ್ರಹ್ಮನುಡಿ ॥
ಶಾಂತಿ ತರದಾಗಿತ್ತು ಕರ್ಮಠ
ರಂತು ಮಾರ್ಗದಿ ಬಂಧನಳಿಯದ
ಭ್ರಾಂತಿ ಸಮಯದಿ ಶರಣರನ್ನ ಶಿವಚೆನ್ನವೀರೇಶ ॥ ೧೨ ॥

ಕಾರಣಿಕ ಜಂಗಮನು ಕಾಣದ
ಕಾರಣದಿ ಚಲ್ಲಾಟವಿರಲು ವಿ
ಕಾರಗೊಳ್ಳುತಲಿರುವ ತತ್ವಾಚಾರ ಸುವಿಚಾರ ॥
ಕ್ರೂರವಿಡನಳಿಸುದಕೆ ಲೀಲಾ
ಚಾರ ಜಂಗಮನಿರಘ ಸ್ಥಿತಿಯಾ
ಕಾರ ಪ್ರಕಟಿತನಾದ ಬೋಧಾಕಾರ ದೇಶಿಕನು ॥ ೧೩ ॥

ಬಂದರ್ಕೈ ಗವಿಯಿಂದೆ ತಪದಿಂ
ಹೊಂದಿ ಹರ್ಷತೆಯಿಂದೆ ಜನಮನ
ಸಂದಿಗೆಲ್ಲವ ಶರಣಸತ್ಕೃಯೆ ಶೀಲಸುಜ್ಞಾನ ||
ಹೊಂದಿಸಲು ಮನವುಟ್ಟುವಂತೆ ಸು
ಬಂಧು ತಾತ್ವಿಕ ತುಂಬುವದೆ ಶುಚಿ
ಯಿಂದೆ ಕೃತಿಯೆಂಬಂತೆಯಿವನಿಂ ತೀರ್ಥ ಕ್ಷೇತ್ರಾಯ್ತು ||

ತುಂಗ ಜಂಗಮ ಚನ್ನವೀರನು
ಭಂಗಿರದ ಲಿಂಗಾಂಗ ಸಮರಸ
ಸಂಗ ಸಮ್ಮತನಾಗಿ ಮಾಡುವ ಸುಪ್ರಸಾದತೆಯ
ರಂಗ ಮಹಕಾಯಕವ ಸ್ವಯ-ಚರ
ಜಂಗಮನೆ ತಾನಾಗಿ ಮಾರ್ಮಿಕ
ದಿಂಗಿತವ ತಿಳಿಸಲ್ಕೆ ಹೆಣಗಾಡುದಕೆ ಶೀಲಾತ್ಮಾ ||

ವೀರಶೈವದ ಸಂಸ್ಕೃತಿಯ ಸುವಿ
ಚಾರದಿಂ ತಿಳಿಸಲ್ಕೆ ಕ್ಷೇತ್ರದಿ
ಪಾರಮಾರ್ಥ ಶಿವಾನುಭವ ಕೇಂದ್ರವನು ಪದ್ಧತಿಯೆ ||
ಚಾರುತನದಿಂ ತೆರೆದರಲ್ಲಿಯೆ
ಸಾರದಷ್ಟಾವರಣ ಪಂಚಾ
ಚಾರ ಷಟ್‌ಸ್ಥಲದಂಗ ಪ್ರಾಣಸದಾತ್ಮ ಪ್ರಕ್ರಿಯತೆ ||

ಧಾರೆ ಸ್ಥಲ ನೂರೊಂದು ಗಂಧ ವಿ
ಚಾರ ಚಿದ್ರಸ ಪುಂಗವನ ಸ್ವರ
ಸಾರ ಸರಳದಿ ಸಲಹುತೆಲ್ಲರ ರುಚಿಧರಿಸಿದವರ ||
ನೇರ ಕರುಣೆಯ ಭಾರಮತಿ ಸಾ
ಕಾರಗೊಳ್ಳಲಿಯೆಂದು ಭಕುತರ
ಭಾರಿ ಮೇಳದು ಹಬ್ಬಿಕೊಂಡಿತು ಸುತ್ತಮುತ್ತೆಲ್ಲ ||

ನಡೆದು ನುಡಿಯುವ ಚನ್ನವೀರನು
ಬಿಡಗು ಭಕ್ತರ ಬಂಧುವಾದನು
ಒಡೆಯನೆನಿಸಿದ ಹಾಲವರತಿಯ ಸ್ಥಾನಪರಿಸರಕೆ ||
ದೃಢ ಶಿವಾನುಭವ ಸುಧೆಯಿಂ ಕರ
ಪಿಡಿದು ಮಹಯೋಗಿಯುರೆ ಕುಡಿಸಿದ
ಬೆಡಗು ಹರಪುರದ ಕೃಪೆಗದು-ಸಾರ್ಥಕತೆ ಸರಳಾಯ್ತು ||

ನೇಮದಿಂದಿರುತಿರಲು ಹರಪುರ
ಪ್ರೇಮಿನಾಯಕ ವಂಶದಲ್ಲಿಯು
ಸೋಮಶೇಖರನೆಂಬ ಪಾಳೆಯಗಾರ ಬೇಡರವ ।
ಭಾಮೆ ಬಸವವ್ಮಾಜಿ ಪತಿವ್ರತೆ
ನೇಮದಿಂದಿರುತಿರೆ ನರೇಂದ್ರನು
ಪ್ರೇಮದಿಂ ಕುಲದಂತೆ ಬೇಟೆಯನಾಡುತಿರಲೊಮ್ಮೆ ॥ ೧೯ ॥

ಈತನಾ ಮೃಗಯಾ ವಿಹಾರಕ್ಕೆ
ರೀತಿ ತನ್ನರಸಿಯು ಜೊತೆಗೆ ಬರ
ಲಾತ ಪುಣ್ಯೋದಯದ ಬಲದಿಂದಾತನೆಡೆ ದೃಷ್ಟಿ ।
ಪಾತವಾಯ್ತದು ಚನ್ನವೀರನ
ಜ್ಯೋತಿ ಶ್ರೀ ವ್ಯಕ್ತಿತ್ವ ಪ್ರಭೆಯೊಳು
ಮಾತು ಬರದಂತಾಯ್ತು ನಾಯಕಗಂತು ನಿಜವಿಂತು ॥ ೨೦ ॥

ಸ್ವಾಂತ ಸುಖದ ನರೇಂದ್ರ ಗುರುಚರ
ಕಾಂತನಡಿ ಸತಿಸಹಿತ ನಮಿಸಿ ಪ್ರ
ಶಾಂತದಿಂದಿರೆ ಯೋಗಕ್ಷೇಮ ವಿಚಾರಿಸುತ ಯೋಗಿ ॥
ಅಂತರಿಕ ಹಳೆಕರ್ಮ ತ್ಯಾಗದ
ನಂತ ಕೃತಿ ಕಲ್ಯಾಣಕಾರಕ
ಸ್ವಾಂತದನುಭವ ತತ್ವಹಿತನುಡಿ ಬೋಧಿಸಿದನಿಂತು ॥ ೨೧ ॥

ತಾಮಸಿಕ ತಾನಾಗದಾ ಸು
ಪ್ರೇಮ ಜೀವರೊಳಿರಿಸಲಾ ಸ
ಪ್ರೇಮವಿದೆಯಾನಂದ ಮಧುರಾನಂದವೇ ಪ್ರೇಮ॥
ನೇಮ ಧರಿಸಿರಲವಗೆ ಸೊಂಪು ವಿ
ರಾಮ ಹೃದಯ ಪಿಯೂಷ ವರ್ಷ ಸ
ದಾಮಯತೆ ತಿಳಿಯಯ್ಯಾ ತಥ್ಯವನಿದನು ತಿಳಿ ಸೋಮ ॥ ೨೨ ॥

ವ್ಯಕ್ತಿಯಿಂ ಪತಿತಾಗಬಹುದು ಸು
ತತ್ವದಿಂ ಪತಿತಾಗಲಾರ ಚಿ
ರತ್ವದಾ ಸುವಿಚಾರ ಜೊತೆಗಾಚಾರವದು ಜೋಡಿ ॥
ಮತ್ತೆ ಜ್ಞಾನಾಶ್ರಯುವ ಪಡೆಯದ
ಭಕ್ತಿಯದು ಸದ್ಭಕ್ತಿಯಲ್ಲವು
ತತ್ವಕೆರಡಿರಲೊಂದು ಮತ್ತೊಂದಕ್ಕೆ ಯಾಶ್ರಯವು ॥ ೨೩ ॥

ಹೊಟ್ಟೆ ಹಸಿವಿಗೆ ಹಿಂಸೆ ಮಾಡುವ
ಬಟ್ಟೆ ದೇವಗೆಯೊಪ್ಪದದು ಮೃಗ
ಬೆಟ್ಟದೊಳು ಜೀವಿಸಲು ಬಿಟ್ಟಿರುವಾಶ್ರಮೆಲ್ಲವಿದು ॥
ದಿಟ್ಟ ಬೇಟೆಯ ಬಟ್ಟೆ ಸಲ್ಲದು
ತೊಟ್ಟ ಬಂದ ಪ್ರಸಾದ ಕಾಯಿದು
ದಿಟ್ಟತನದಿಂದೊಲಿಸಿ ಕೃಪೆಯಂ ಪಡೆಯ ಬೇಕೆಂದ ॥

ಪುರದ ನಾಯಕ ನೈಜ ನಿಲವನೆ
ಮರೆತು ಗತಿಸಿರೆ ಪುರದ ಪ್ರಜರಿಗೆ
ಯಿರವ ಹೇಳುವರಾರು ಜನಪತಿಗಂತು ಮತ್ತಾರು ॥
ಕಿರಿಯ ಕಿಡಿಯೊಳು ಕರವನಿಟ್ಟರೆ
ಕರೆದುಕೊಳ್ಳುವರುಂಟು ಕಿಂತುರೆ
ಹಿರಿಯನಿಟ್ಟರೆ ಕರೆವರಾರುಪಚಾರ ದೂರೆಂದ ॥

ಸಹನ ಶೀಲತೆ ಸತ್ವ ತಿಳದಿರ
ಲಹಮು ಮಂಜದು ಹರಿಯುತೆಚ್ಚರ
ವಹುದು ಅರಿವಿನ ಝುರಿಯು ಪಸರಿಸಿ ಹೃದಯುಹದವಾಗಿ ॥
ಗಹನ ಗಂಭೀರತೆಯ ಗಂಗಾ
ಲಹರಿ ಲಯಗತಿ ಶರಣ ಚಿರಮತಿ
ಮಹತೆ ಮಂಜುಳಗಾನ ಗುಂಜದಿ ಲೀನ ಕೊನೆಮೌನ ॥

ಬರಿಯ ನಾಯಕನಾಗಿರುವದೇ
ಹಿರಿಮೆನದು ಜೀವಾತ್ಮಗೋರ್ವನು
ಹಿರಿಯ ನಾಯಕನಿರುವ ನೈಜತೆ ಲಿಂಗ ತತ್ವಾರ್ಥ ॥
ಸರಸ ಸುಖದಿರೆ ನಿಜ ವಿನಾಯಕ
ಧರಮರಿಯದಿರೆ ಕುರುಡುಪಾಲಕ
ಪರಿಯ ನಿನಗೇನುಚಿತವೋ ಅದನನ್ನೇ ಅನುಕರಿಸು ॥

ಚರಿತೆ ಬೇಡರ ಕಣ್ಣಪಯ್ಯನ
ಗುರಿಯು ನೆನಪಾಯ್ತೆನೋ ಅಲ್ಲವೆ
ಸರಳತನ ನಿಜವಂತು ನೀನಿಹುದಿಂತು ಸಮವೆಂತು ॥
ಸರಿ ಕಿರಾತನ ಭಾವವರಿಯದ
ಬರಿಯೆ ಪೂಜಿಸುತ್ತಿರುವ ಬ್ರಾಹ್ಮಣ
ಸಿರಿಯರಿಯಲಾ ಲಾಭ ನೈಷ್ಠಿಕ ಭಕ್ತಿ ಬಂಧುರತೆ ॥

ಆ ಪದವು ಸರಳಲ್ಲ ವನದೊಳ
ಗೀ ಪರಿಯ ಬಿಲ್ಲಾಟ ಕೃತಿಯು ನಿ
ಜಾಪರಾಧವು ಹಿಂಸೆಯಾರಿಗು ಯೆನಿತು ತರವಲ್ಲ
ತಾಪತ್ರಯ ವೇದನೆಯು ಇರುವೊಲು
ದೀ ಪಶುಗಳಿಗೆ ಬಾಧೆಯಿರುತಿರ
ಲಾ ಪರಮನುಡಿ ದಯವೆ ಧರ್ಮದ ಮೂಲವೆನೆ ತಿಳಿ || ೨೯ ||

ನೋವು ಕಣ್ಣಿಗೆ ತೋರದಾದರೂ
ಜೀವಿಯನುಭವಿಸಿರುವದನುಭವ
ನೀವನುಭವಿಸುದಕಿದು ಬಾಣವ ಚುಚ್ಚಿಕೋ ಸಾಕು ||
ಜೀವಿ ನನಗಾಗಿರುವ ವೇದನೆ
ಯಾವನರಿಯನು ಕಾಣದಿಹ ನಿಜ
ನೋವು ಶಬ್ದದಿ ಪ್ರಕಟವಾಗಿರುವಾಗ ಗೋಚರವು || ೩೦ ||

ದೇವ ದೇವತೆ ಹೆಸರಿನೊಳು ದು
ರ್ಭಾವಿಗಳು ಹಸು ಮೇಷ ಬಲಿಯನ
ದಾವ ಸಂಕಲ್ಪದೊಳು ಕೊಡುವರೋ ಹಾಗೆ ಸತಿಸುತರು ||
ಆವ ನಿಜದರ್ಪಿಸುವ ನಿರ್ಬಲ
ಜೀವಿಗಳ ಹಿಂಸಕರು ವ್ಯಾಘ್ರವ
ನಾವ ಪಿಡಿದರ್ಪಿಸುವನ್ಯ ದುರ್ವಿಷಯ ಬಲಿಕೊಡರು || ೩೧ ||

ತನ್ನದೆನ್ನುವ ವಸ್ತುವಿಗೆ ಬಲ
ಖಿನ್ನತೆಯು ಪರಿಚಿಂತೆ ಮೂಡಿರ
ಲನ್ಯ ಪ್ರಾಣಿಗಳಿಂಗೆ ಕೊಡುತಿಹ ಕೃತಿವಿವೇಕತೆಯು ||
ಚನ್ನ ಯೋಚಿಸಬೇಕು ಜಗದೊಳು
ತನ್ನ ತನವನ್ಯರೊಳು ಕಂಡೊಡೆ
ಚನ್ನ ಚನ್ನಿಗ ಚನ್ನವೀರನೆಯಾಗಬೇಕೆಂದ || ೩೨ ||

ಮುಡಿವ ಮನಹರ ಕುಸುಮಪರಿಹರ
ಹುಡಿಯು ಕೂಡಿರಬೇಕು ನೋಟಕೆ
ಬೆಡಗು ತಂದಿರಲೇನು ರಂಗದ ಫಲಕೆ ರುಚಿಯೇನು ||
ಘುಡಿ ಘುಡಿಸುವಾ ಹುಲಿಯ ವೇಷದಿ
ತುಡುಗು ಇಲಿಗಳ ಸ್ವರದ ಸಮವಿದು
ಬಿಡುತ ಮೃಡಲಿಂಗವನು ಧರಿಸುತ ಶರಣನಾಗೆಂದ || ೩೩ ||

ಶರಣರಾ ಸದುಹೃದಯ ನಳಿನದಿ
ಹರನು ಶೋಭಿಸುತಿಹನು ಕಾರಣ
ದುರಿತಕರ್ಮವು ನಡೆಯುದಿಲ್ಲವು ಪೂರ್ಣ ಸಂಪೂರ್ಣ ||

ಕರುಣವಿರಲೀ ಜೀವರೊಳು ಶಾಂ
ತರೊಡನಾಡಿರೆ ಯಂಥ ಕರ್ಮವು
ಹರಿದು ಹೋಗುತ ಕೊನೆಗೆ ಪರಿಭವ ಹುರಿದು ಸಾನಿಧ್ಯ ||

ಕರುಣದಿಂದತಿಶಯದ ಧರ್ಮದು
ವಿರದು ನುಡಿ ನಿಜಗುಣಿಯ ನೀತಿಯ
ನೆರೆ ವಿಚಾರಿಸು ಧರಿಸು ಕೃತಿಯೊಳಳವಡಿಸಿರೆ ಲೇಸು ||

ಇರವಿನೊಳು ನಿಜದೆದ್ದು ತೋರುವ
ಕರುಳು ಕಿರಚಿರದೆಂತುವಿರ್ಪುದು
ಕರುಳಿಗದು ಕಂಗಳಿವುವಿರದಿಲೆ ಪ್ರಭೆಯು ಪಸರಿಸದು ||

ನೋಡು ಹರಿಣೆಯ ಹೊಡೆದು ತಂದಿಹ
ಕೇಡು ಕಂಡಿಹುದದು ಬಳಗದು
ಬಾಡಿದಾ ಮುಖದಿಂದೆ ನೋಟದು ನಾಟದೇ ಮನಕೆ ||

ನಾಡೆ ನೀರಜ ಪರಿಮಳದ ಸುಮು
ನೋಡಿ ಹರಿಯದೆ ಬಿಡಲು ಸೂಸುತ
ಕೋಡಿ ಗಂಧವ ಕೊಡದೆ ತನ್ನಿರವಿನೊಳು ಕಡೆತನಕ ||

ಕರುಣ ವಿನಯ ವಿವೇಕ ವಿರತಿ ವಿ
ತರಣ ನಿರ್ಧಾರಣತೆ ಧೈರ್ಯ
ನಿರಭಿಮಾನತೆ ಸತ್ಯ ವಿದ್ಯಾಭರಿತ ಸಾತ್ವಿಕದ ||

ಹಿರಿಮೆ ಗುಣಧರಿಸಲು ಮುಕ್ತಿಗೆ
ಸರಳವದು ಮಿಕ್ಕಿರಡು ಬಂಧನ
ಸರಳ ಶರಣರ ಸೂಕ್ತಿ ತಿಳಿಯದೆ ಸಾಗಬಾರದದು ||

ಹರಸಮಯದೊಳು ನಿಜದ ನಿಷ್ಠೆಯ
ಪರಹಿತದ ಸದ್ಧರ್ಮ ರತಿಯದು
ಪರಮಗತಿಗದು ನಡೆದು ನುಡಿಯಾಚಾರ ಒಪ್ಪುವದು ||

ಸರಿಯು ದುರ್ವಿಕೃತಿಯು ತೋರೆಯದೆ
ಅರಿಯದಿರೆ ಹಿತವಿದಹಿತವೆಂಬುದ
ಹಿರಿಮೆ ಗುಣಕೃತಿ ತಿಳಿಯದಿರೆ ಯಾವಾಗ ತಿಳಿಯುವದು ? ||

ಸಾನುರಾಗದ ವೇಧ ವೀಧಿಗೆ
ಸಾಣಿ ಹಿಡಿಯುವ ಸಪ್ತ ಸೂತ್ರವ
ತಾನೆಯಾಚಾರದೊಳು ತಂದಿರಿ ಸೂಕ್ಷ್ಮತಂತಾನೆ ॥
ಮಾನನೀಯತೆಯಿಹುದು ನಿಜದನು
ಮಾನವಿಲ್ಲದು ಹೊಂದಿ ನಡೆದಿರೆ
ಜಾಣನವನ್ನೈ ಕೇಳು ಕಳಬೇಡಾದಿ* ತಿಳಿದಿರಲು || ೩೯ ||

ಜೀವನೊಂದು ಪ್ರಯೋಗ ಶಾಲೆಯು
ದಾವರಣದೊಳಗಿರ್ದು ಸಮುಚಿತ
ಯಾವದಾದರು ಪಡೆಯಬಹುದೈ ತನುವುುಖಾಂತರವೇ
ಜೀವಿ ನಿಜಲಾಭವನು ಪಡೆಯದೆ
ಯಾವ ಪಥದಿಂ ಪಡೆವನ್ನೈ ಕೊನೆ
ಗಾವುದಾದರು ಮೌಲಿಕತೆ ಸರಿಯಾಗಿ ತಿಳಿದಿರಲಿ || ೪೦ ||

ಕರ್ಮನಿನ್ನದು ತಾಮಸಿಕತೆ ಸು
ಕರ್ಮಿ ನೀನಾಗುತ ವಿಚಾರಿಸು
ಮರ್ಮ ತಿಳಿಯಲಿದು ಸಹಕಾರಿಯ ಧರ್ಮಕೂ ಸಹಿತ ||
ಮಾರ್ಮಿಕಂತಭೂತನೋರ್ವ ನಿ
ಗರ್ವಿಯಿರುತಿಹ ಪುಣ್ಯ ಪಾಪಕೆ
ಕರ್ಮವೇ ಸೈ ಕುಂಭವೆತ್ತಲು ಬಿಡಲು ಕರಸೂತ್ರ || ೪೧ ||

ಗಾಳಿ ಬಿಟ್ಟದೆಯುದರ ಪ್ರತಿಗತಿ
ದಾಳಿ ಮಾಡಲುಬಹುದೆ ಚಂಚಲ
ಸೂಳಿಕೃತಿಗಾರಾರು ನುಡಿಯರು! ಸಾಧ್ವಿತಪ್ಪಿರಲು ||
ಮೇಳವಿಸಿ ಕೂಗಾಟ ಬಿಡದೈ
ಆಳುತಪ್ಪಿರೆ ಮುಂದೆ ಬರದದು
ತಾಳ ನೀ ತಪ್ಪಿರಲು ನಗೆಯಾಟವದು ಹುಡುಗಾಟ || ೪೨ ||

ನೂರನೋದುತ ನೂರಕೇಳಿರೆ
ನೇರವರಿಯದೆ ದಾರಿ ತೋರದು
ಧೀರನಿಗೆ ನುಡಿನಡೆಯೆ ಧರ್ಮದ ಸೂತ್ರವಿಹುದಯ್ಯಾ ||
ತೋರುವಾಚಾರಕ್ಕೆವೊಳಗಾ
ಚಾರದರಿವಿನ ಬೇರಿಗನುಭವ
ನೀರೆರೆದರೇ ಮೇಲೆ ಪಲ್ಲವಿಸಿತ್ತು ನೋಡಯ್ಯಾ || ೪೩ ||

---

* ಬ. ವ. ೨೩೫

ನಿನ್ನ ಕೃತಿಪಥ ನೀನೆ ಯೋಚಿಸು
ತಾನೆ ಚಿಂತಿಸಲೇನು ಸಲ್ಲದು
ತಾನೆಯುದಯಿಸಿ ಮಾತ್ರಹೀನತೆ ತ್ಯಾಗ ತಂತಾನೆ ॥
ಕಾಣು ಭೂಮಿಯುವೊಂದೆಯಂತಿರ
ಲೇನು ಶಿಲೆ ಜಲ ಬಳ್ಳಿ ಸುಮಫಲ
ಗಾಣುತಿರೆ ಬಹುಭಿನ್ನತೆರ ಜನರುಂಟು ಮದವೆಂಟು

ಮಾನನೀಯತೆ ಮೌಲ್ಯಮಾಪನ
ತಾನೆ ಶೋಧಿಸಿಗಳಿಸಿದರೆ ಸ
ನ್ಮಾನ ಸಖ್ಯತೆಯುಂಟು ನಿಜದಿಂದಿಲ್ಲಿ ಸಲ್ಲುವವ ॥
ಮಾನದಿಂ ನಿಜದಲ್ಲಿ ಸಲ್ಲುವ
ಹಾನಿಯೇನಿರದೆಂದು ತಿಳಿಯೆ ಸು
ಧಾನುರಾಗದಿ ತ್ರಿವಿಧದಾಸೋಹದಲಿ ಪಾಲ್ಗೊಳ್ಳು

ಹುತ್ತ ಬಡಿದರೆ ಹಾವು ಸಾಯದು
ಕತ್ತೆ ಹತ್ತಿರೆ ಮುತ್ತು ಪ್ರಾಪ್ತವೆ
ನೆತ್ತಿಗುಣಿಸಿರೆ ಸಾಧ್ಯವಾಗದು ತತ್ವಸಾಮ್ರಾಜ್ಯ ॥
ತತ್ವಬದ್ಧಾಗಿರಲು ತೃಪ್ತಿಯು
ತತ್ವಳಿಯುತಾ ಹೊರಟಿರುವದು
ನ್ಮತ್ತ ಸ್ಥಿತಿಶುಭವೆನದು ಪಡೆಯೈ ಚಿತ್ತಶುದ್ಧಿಯನು

ತನುವೆ ರಥ ಇಂದ್ರಿಯಗಳೆ ಹಯವು*
ಮನ ಲಗಾಮುವು ಬುದ್ಧಿ ಸಾರಥಿ
ಯಿನಿತಿಡಿದು ಜೀವಾತ್ಮನಂ ಸ್ವಾಮಿಯನು ಮಾಡುತಲಿ ॥
ಘನತೆಯಡಿಗೆ ನಿಜದೊಯ್ವಸಾಧನ
ಗಣಿತವದು ಏರಲೆಂಬ ಕಥನದ
ಘನತೆ ತಿಳಿವುದು ಸರಿಯೆ ನೀನೇರಿಹುದ ರಥನಳಿದು

ಬರಿಯ ತಲೆ ತೋಳಕೊಂಡರಾಗದು
ಸಿರಿಯೆದೆಯ ತೊಳಕೊಂಡಿರಲು ಚಿರ
ತರದ ಸುಖಸೌಭಾಗ್ಯವಪ್ಪುದು ನಂದಿಶಮಿವೃಕ್ಷ ॥
ಪರಮ ಸಂಗತಿಯಳಿದಿರಲು ಕುರಿ
ಕುರುಬನಿಂ ಕೊಡಲೇಟು ಕಾರಣ
ಪರಮ ಪಂಥವ ಹೊಂದಲದು ಭಯವೆತ್ತ ಶೇಖರನೆ

*ಕಠ– ೧/೩/೩-೪

ತನು ಮನ ಮತಿ ವಿಕಾರ ಕಳೆಯುವ
ಘನತೆ ಗುರುಪಥವಿರಲು ಸಂಶಯ
ಕುಣಿತ ಮತ್ತೇಕಯ್ಯಾ ಕುಳೆ ಮರುಚಿಗುರದೆಂತಯ್ಯಾ ||
ಘನತೆ ಜಂಗಮಲಿಂಗದೊಳು ನಿಜ
ದನುವಗತಿ ತಪ್ಪಿದರೆ ಲೋಹದ
ಕಣಕೆ ಹತ್ತಿದ ಜಂಗು ಲೋಹದನಾಶ ತಿಳಿಯಯ್ಯಾ || ೪೯ ||

ಜಡದ ಬೇಟೆಯ ಕಲೆಗೆ ನುಡಿದಿಹ
ಪಿಡಿದ ನಿನ್ನಯ ನಡೆಯ ಕಾಣುತ
ನುಡಿಯು ಜಡವೆನದಯ್ಯ ಪರಿ ಸತ್ಪಂಥ ತಿಳಿಸಿರಲು ||
ಕಡೆತನಕ ಬಿಡದಂತೆ ನಿತ್ಯದಿ
ನುಡಿಯ ಸ್ಮರಿಸುತ ಸುಖದಿ ಸಾಗಿರೆ
ಕಡಲು ಕಲ್ಪನೆ ತೋರದೆಂದಿಗು ಶಾಂತಿ ನಿನಗೆನಲು || ೫೦ ||

*ಗಂಡ ತಾ ಶಿವಲಿಂಗುಪಾಸಕ
ಹೆಂಡತಿಯು ಮಸಣಿಯಳುಪಾಸಕಿ
ಗಂಡ ಪಾದೋದಕ ಪ್ರಸಾದವ ನಿತ್ಯ ಕೊಂಬುವದು ||
ಹೆಂಡತಿಯು ಸುರೆಮಾಂಸ ಪ್ರಿಯಳಿರೆ
ಭಾಂಡಭಾಜನವಿಲ್ಲಿ ಚಿತ್ರಣ
ಕಂಡು ಕೊಂಡಂತಾಗಬಾರದು ತಿಳಿದುಸಾಗೆಂದಾ || ೫೧ ||

ಇನಿತು ತತ್ವಾಮೃತವನಾಲಿಸು
ತನಿಯ ಭಾವದಿ ನಿಲುಮೆಯಾತ್ಮಕ
ಘನತೆಯಂತದು ಸೂಜಿಗಲ್ಲನು ಕಂಡು ಸೂಜಿಯದು ||
ಒಲುಮೆಯಿಂದೆದ್ದಂತೆ ಮೇಣದು
ಫಲಿತ ಫಲ ಬಿದ್ದಂತೆ ಗಗನದಿ
ಜಲದ ನರ ಬಂದಂತೆ ಬಾಗಿದ ಮೌನ ಮಧುರದಲಿ || ೫೨ ||

ತತ್ವಸುಖದೊಳಗಿರ್ದ ಪದದಡಿ
ಸುಪ್ತನಾಯಕ ಸ್ಥಿತಿಯ ಮೌನತೆ
ಗಾಪ್ತನುಡಿ ಹಿತಮತ್ತೆ ನಾಯಕಗೆಚ್ಚರಿಸುತಿಹನು ||
ಗುಪ್ತವಿರದ ವಿಚಾರವರದಾ
ಲಿಪ್ತವಾಯ್ತೆನಬೇಡವಿದರೊಳು
ತೃಪ್ತಿ ನಿನಗೇತರೊಳು ಇಹುದೋ ಗ್ರಹಿಸು ನಿನ್ನಿಷ್ಟಾ || ೫೩ ||

*ಬ ವ. ೧೦೪

ಸೃಷ್ಟಿಯೊಳಗುದಿಸಿದ ಶರಣರಿ
ಗಿಷ್ಟ ಸಿದ್ಧಿಯನಿತ್ತು ಪಾಲಿಪ
ಸ್ಪಷ್ಟ ಶರಣ ಸ್ವರೂಪ ಚನ್ನೇಶ್ವರನ ಬೋಧದಲಿ ||
ಸ್ಪಷ್ಟ ದುಷ್ಕೃತಿ ಭಾವವದು ಸಂ
ತುಷ್ಟಿ ಗೊಳ್ಳುತೆ ಪದಕೆರಗಿ ಚಿರ
ತುಷ್ಟಿ ಶ್ರೇಷ್ಠಪದತ್ತ ತತ್ವನ ಸತ್ವದಾಶ್ರಮುಗೆ ||

ಗಂಧದಿಂ ಬರಲಿತ್ತ ಸತಿಸಹಿ
ತಂದು ಸಂಗದ ಬೇಡ ಪಡೆಯಾ
ನಂದದಿಂ ಗೋಸಾವಿಗುಡ್ಡದ ಹಾಲವರ್ತಿಗದು ||
ಬಂದು ಶಾಂತಾಶ್ರಮವ ಕಾಣುತ
ರಂದು ಸಂತಸ ಮುಂದೆ ವೃಂದನು
ವಿಂದ ಹೊಂದಲು ಲಿಂಗ ದೀಕ್ಷೆಯ ಭಾವದಿಂದವರು ||

ಚಲುವ ಜಂಗಮ ಚರಣ ಸನ್ನಿಧಿ
ಲಲಿತ ಸತಿ ಪತಿಯವರ ಬೇಡಿಕೆ
ಲಲಿತ ಶಿವ ಸಂಸ್ಕಾರದಾಶೆಯನಿಡಲು ಗುರುವರನು ||
ನಲುಮೆಯಿಂ ತನು ಮನಕೆ ಭಾವಕೆ
ಒಲದ ಸಂಸ್ಕಾರವನು ಕೊಡುತಲಿ
ಮಲತ್ರಯವ ಪರಿಹರಿಸಿ ಮನಕುಪದೇಶ-ಮಂತ್ರಸಹ ||

ಕರಕೆ ಲಿಂಗವ ಕರುಣಿಸುತೆ ಶ್ರೀ
ಕರವ ಶಿರಮೇಲಿಡುತೆ ಹರಸಲು
ಗುರುಸುತನ ಪದವಿಯದು ದೊರೆಯಲು ಹೃದಯಹರುಷಾಗಿ ||
ಕರುಳು ಕಂಪನುಗೂಡಿ ಮೆದುಳಿಗೆ
ಚಿರದ ಚಿದ್ರಸರಾಡಿ ನಯನದಿ
ಹಿರಿಮೆ ತೇಜನುಗೂಡಿ ಯೋಗಾಯೋಗವದು ಜೋಡಿ ||

ಅಂಗ ಗುಣಗಳ ಕಳೆದು ಗುರುಶರ
ಲಿಂಗಗುಣಗಳ ತಿಳಿಸಿ ಹಳೆಯುದ
ರಂಗ ಕಳೆದಿಹ ತುಂಗಜಂಗಮನೊಳಗೆ ಬೆರೆದಂಗ ||
ತುಂಗ ಶ್ರೀಕರ ನೈಜ ಕೃಪೆಯಿಂ
ದಂಗದೊಳು ಕ್ರಮಧರಿಸುತೋತ್ತಮ
ಸಂಗ ತನಗಾಯ್ತೆನುತ ದಣಿದನು ಬೋಧ ತೀರ್ಥದಲಿ ||

ಲಿಂಗವೇ ಜಂಗಮನು * ಜಂಗವು
ಲಿಂಗವೆಂಬೇ ತಿಳಿಯಬೇಕದು
ಜಂಗಮದಿ ಗೌಣತೆಯ ಕಾಣದು ನಿಜದಿ ಬಲ್ಲಾತ ||
ಜಂಗಮನನುವನರಿತವನು ನಿಜ
ಸಂಗಮನು ಬಂದಿರಲವರ ಹೃದ
ಯಾಂಗ ನಿಲುಕಡೆ ನೋಡು ನಿಜಭಾವಕನೆ ತಾನಾಗಿ † || ೫೯ ||

ಅರಿಯಲು ಕುರುಹ ಕೊಟ್ಟರೆಯರುಹ
ಮರೆತು ಕುರುಹನೆ ಪೂಜಿಸುವ ಪರಿ
ಯಿರವ ನಿನಗದು ಮುಂದೆ ಬರಬಾರದದು ತಿಳಿಯಪ್ಪ ||
ಪರಗುರುವಿನೊಳು ನಿಷ್ಠೆಯುಳ್ಳವ
ಗಿರದು ಸಂಶಯ ಭಿನ್ನಭಾವನೆ
ಸರಣಿ ಸಮತನಿಗಾವ ಭ್ರಮೆಯೂ ಬರದು ನಿಜದಪ್ಪ || ೬೦ ||

ನಿಲವನರಿಯದೆ ನುಡಿಯಲಾಗದು
ಬೆಳೆಯ ನೋಡದೆ ಬೆಲೆಯ ಕಟ್ಟದು
ಕಲೆ ನಿಲವ ನೋಡಾಂಗ ಚಿನ್ಮಯ ಸೂಕ್ಷ್ಮನರಿಯದಲೆ ||
ಉಲುವ ಮಾಡದು ಮಾಡಿ ಮರಗದು
ನಲುಮೆಗುರುನುಡಿ ಸುಧೆಯ ಸೂತ್ರದ
ಕಲೆಯ ತ್ಯಾಗಾಂಗಾದಿ ಶುಭಸಂಸ್ಕಾರ ಕಿರಿದೆನದು || ೬೧ ||

ಭವದ ನೋವನು ಕಳೆದು ಲಿಂಗದ
ಸವೆಯದಾ ರುಚಿಗಲಸಿ ಬಿಡದಂ
ತವನಿಯೊಳು ಸಾಗೆನುವ ಬೋಧದು ದಂಪತಿಗೆಯಾಯ್ತು ||
ಸವಿಯ ಮಾಮರವೆತ್ತ ಕೋಗಿಲೆ
ಸವಿಯ ಮಧುರಸವೆತ್ತ ಸಂಗತಿ
ಸವೆಯದಾ ಪ್ರಭು ವಚನವಾಂಗ್ಮಯ ಸೂಸುವಂತಾಯ್ತು || ೬೨ ||

ಹಾಲು ಎಡ ಕೈಯೊಳಗೆ ಬಲಕೈ ‡
ಕೋಲಿನಿಂ ಬಡಿದೊಮ್ಮೆ ತತ್ವದ
ಹಾಲುಕುಡಿಸುವ ಪರಮ ಜಂಗಮರಾದ ಪೂಜ್ಯರರು ||
ಮೇಲು ಪಾದೋದಕ ಪ್ರಸಾದ ವಿ
ಶಾಲರಿಗೆಯನುಗ್ರಹಿಸಿ ಮುಂದದು
ಶೀಲನಡೆಯ ಗ್ರಹಸ್ಥ ಧರ್ಮಂ ತಿಳಿಸತೊಡಗಿದನು || ೬೩ ||

* ಚ. ಬ. ವ. ೨೬೧ † ಅದೇ ೧೨೦೪ ‡ ಗು. ಕ. ತ್ರಿ. ೨೫೩

ಸುರರು ಋಷಿಕುಲ ಶಕ್ರಿಯರು ವರ
ಪರಮ ಲಿಂಗವ ಧರಸಿಹರು ತಾಂ
ಧರಿಸಿರುವ ಕೃಪೆಯುಂಗ ತೊರೆದನ್ಯದೆಡೆ ಭಾವಿಸದೆ ॥
ಗುರುವು ಜಂಗಮಲಿಂಗ ಭಕ್ತಿಯ
ಧರಿಸುತಲಿದು ಗ್ರಹಸ್ಥ ಧರ್ಮವ
ತೊರೆಯದಲೆ ಸಾಗೆಂದ ಸತಿಪತಿ ಭಕ್ತಿ ಪರಶಿವಗೆ

ಹಿತವೆನುವ ವಚನಾಂಗ ತಿಳಿಸುತ
ಜೊತೆಗೆ ಮೋಳಿಗೆಯ ಮಹದೇವಿಯು
ಮತಿಯು ಜೀವನದೊಳಗೆ ಧರಿಸಿರಿ ಭಕ್ತಿಸದುವಿನಯ ॥
ಸತತವಿರಲೆಂದೆನುತ ಭಾಗ್ಯವು
ಸತತವಿರೆ ಶಿವಸೂತ್ರವೆನ್ನುತ
ಕೃತಿ ಸದಾವೃತವಿರಲಿ ದೈನಿಕ ಕಾರ್ಯ ಕಗಣದಲಿ

ದ್ವಿದಳ ಧಾನ್ಯದು ಭಿನ್ನವಾದರೆ
ಮಧುರ ಮೊಳಕೆಯ ರೂಪತೋರದು
ಸುದಳ ಪುಷ್ಪದ ಫಲದ ಮಾತೇ ದೂರ ತಿಳಿರಯ್ಯಾ ॥
ಇದು ಗೃಹಸ್ಥರ ಮನೆಯ ಮಾಧುರಿ
ನದಿಯು ಗಂಗಾ ಸಾಗರಂತಿರ
ಲಿದುವೆಯಾಶ್ರಯ ಜಲಚರಕೆ ಜಗಕೆಲ್ಲ ಕುಲಕೆಲ್ಲ

ಅತಿಥಿ ಗುರುಪೂಜನವು ಶರಣರ
ಜೊತೆಗೆ ಶಿವಚಿಂತನವು ಕಾಯಕ
ಜೊತೆಗೆಯನುಭವಗೋಷ್ಠಿ ನಡೆಸುವಾ ಸ್ಥಾನ ॥
ಶ್ರುತಿ ಪರಂಪರೆ ಮತರ ನುಡಿಯಿದು
ಋತ ಗೃಹಸ್ಥಾಶ್ರಮವುವೆಂಬುದ
ಜೊತೆಗೆ ಮೂರಾಶ್ರಮಕೆಯಾಶ್ರಯವೆಂದ ಗುರುವರನು

ಸತಿಪತಿಗಳೊಂದಾದ ಸಮರಸ
ಹಿತವು ಪುರ ಪ್ರಜೆಗೆಲ್ಲ ಕಾರಣ
ಜತೆ ಸತಿತ್ವ-ಪತಿತ್ವ ಜೀವನ ನಾಣ್ಯದೆರಡುಮುಖ ॥
ಜೊತೆಗರಳಿತರನು ನಿಜದರಳಿಸಿ
ಪಥ ಬೆಳಗಿಸೈ ನಗಿಸಿ ನಾಡಿನ
ಲತೆಯ ರಕ್ಷಣೆ ತಪ್ಪಿದರೆ ಫಲವೆತ್ತೊ ನೀನೆತ್ತೋ ॥

ಕ್ರಾಂತಿ ಸಮಯದಿ ಬಸವರಸಿ ಗುಣ
ವಂತಿ ಗಂಗಾಂಬಿಕೆಯ ತೆರದಿಂ
ದಂತು ನೀನಿರು ಧರ್ಮಪಾಲನಕಾಗಿ ಜೀವನದಿ ॥
ಶಾಂತಮತಿ ಜೊತೆಯಾಗಿಯನುದಿನ
ಸಂತಸದಿ ಪಾಲನದಿ ಮಾತೆಯೊ
ಳಿಂತು ನೀನಿರಲಾಗ ಸುಖವೆನೆಯಾಗ ಬಸವಮ್ಮ || ೬೯ ||

ಸಲ್ಲು ಮಾತೃತ್ವದಲಿ ನುಡಿದಳು
ಸಲ್ಲುವಂತೆ ಶಿವಾನುಭವಕೆ
ಬಲ್ಲ ಬೋಧನೆಗನುವ ಮಠವನು ಕಟ್ಟಿಸುವೆನೆನಲು
ಬಲ್ಲ ಗುರುವರ ನೊಪ್ಪಲಂತೆಯ ॥
ಎಲ್ಲ ಸಿದ್ಧತೆಯಾಗಿ ಸಲ್ಲಿಸು
ತಲ್ಲಿ ಭಕ್ತಿಯನಿಟ್ಟ ಸ್ಮರಣೀಯ ಕೃತಿಕುಂಜ || ೭೦ ||

ನಡೆಗೆ ದೀಕ್ಷೆಯ ನುಡಿಗೆ ಶಿಕ್ಷೆಯು
ಕಡೆಗೆ ಮೋಕ್ಷವನೀವ ಪರಶಿವ
ಬೆಡಗು ಜಂಗಮ ಪುಂಗವನ ಪಥ ಸ್ಮರಿಸುತಲಿಯುವರು ॥
ನಡೆದರಾ ಶರಣಾಳಿ ಹರಪುರ
ದೆಡೆಗೆ ಗುರುವರನಿತ್ತ ಬೋಧದ
ಬೆಡಗುನುಡಿ ಮುತ್ತುಗಳ ಧರಿಸಿದ ಸುಖದಿ ನಾಯಕನು || ೭೧ ||

ಜ್ಞಾನವಾಹಿನಿ ಶ್ರೀ ಗಳೆರಡರ
ಮಾನವೀಯತೆ ಪಡೆದುಬಾ ದು
ಮ್ಮಾನ ವಳಿದಿಹ ಸ್ಥಿತಿಯೆ ತಾ ಬೇಡರವನೆಂದೆಂಬ ॥
ಮಾನಿಸದ ಸುಖದಲ್ಲಿ ತೃಪ್ತರು
ಆನು ಹಾರುವನೆಂದೊಡೆ ನಗುವ
ತಾನೆ ಕೂಡಲಸಂಗಮೆನ್ನುವ ನುಡಿಯ ಸ್ಮರಣದೊಳು || ೭೨ ||

ಭಕ್ತ ಹಿತಕೋಸ್ಕರ ನಿರಂಜನ
ಯುಕ್ತ ಸಂಚಾರವನು ಪಿಡಿದುಪ
ಯುಕ್ತ ಒಂದೆಡೆ ನಿಲ್ಲಲಾರದುದೆಂಬ ನುಡಿಯೋಲು ||
ಉಕ್ತಿಯಂತೆ ಚರಿತ್ರ ನಾಯಕ
ಯುಕ್ತವಹ ಹಾಲವರತಿಯ ಸ
ದ್ಭಕ್ತರಿಂಗೆ ಶಿವಾನುಭವ ನೀಡಲ್ಕೆ ಕೈಕೊಂಡು || ೭೩ ||

ಬಂದ ಹರಪನಹಳ್ಳಿ ಸನಿಹದ
ಹೊಂದಿದಾ ಕಲ್ಲಳ್ಳಿಗದು ಬದಿ
ಹೊಂದಿರುವ ಪತ್ರೀವನವು ಕೈಮಾಡಿ ಕರೆಯಲದು ||
ಹೊಂದಿ ಯೋಗಾನಂದದೊಳು ಸಾ
ನಂದ ಬಹುದಿನಗಳೆದ ಲಿಂಗದಿ
ಮುಂದಿನಾಗತಿಯೊಳಗೆ ವಿವರವ ನಂದದಿಂಕೇಳಿ ||

ಶುದ್ಧವಹುದಂಕಲಗಿಯಡವೀ
ಸಿದ್ಧ ಚರಣಾಶ್ರಯದಿ ಸ್ಥಾಪಿಸ
ಲೆದ್ದ ಪುರ ಮರೆಗುದ್ದಿ ಮಠವಿದುವಡವಿ ಸಿದ್ದೇಶ ||
ಬದ್ದಿದಕೆ ಗುರುವಂಶದೊಳು ಕ್ರಮ
ಬದ್ದ ಗುರು ಗುರುಪಾದ ಕೃಪೆಯಿಂ
ದೆದ್ದ ಗುರು ನಿರುಪಾಧಿ ಕೃತಿಯೋಳ್ ಮೂರನೆಯ ಸ್ಥಲವು ||

ಅಂತೂ ಸ್ಥಲ ೩ಕ್ಕಂ ಪದ ೭೫ಕ್ಕಂ ಒಟ್ಟು ಪದ ೧೪೪ಕ್ಕಂ
ಮಂಗಲಂ

ಓಂ

## ಮೂರನೆಯ ಸ್ಥಲ

ಸೂಚನೆ—

*ಹರಪುರದ ನಾಯಕನ ವಂಶದಿ
ಬರುವ ಪಾಳೆಯಗಾರನಾಗಿಹ
ಪರಮ ನೀತಿಯ ಸೋಮಶೇಖರ ಲಿಂಗ ಧರಿಸಿದನು ||

ಶ್ರೀ ಶಿಖಾಮಣಿ ಶ್ರೇಣಿ ತತ್ವಾ
ಕಾಶ ಪ್ರಭು ಶಿವಯೋಗಿ ಪಂಥ ಪ್ರ
ಕಾಶ ಪೂರ್ಣ ವಿಚಾರ ವಿವರಣ ಸಂಗ ಸಂಕಿರಣ ||
ಭೂಷಣತೆಗೊಂಡಿರುತ ಮನಕೆ ವಿ
ಭೂಷಣತೆ ತಂದಿಡುವ ಷಟ್‌ಸ್ಥಲ
ಘೋಷಿಸುವ ಸದ್ಬೋಧ- ಸಂಗಮಕೆನ್ನ ಶರಣಾರ್ಥಿ || ೧ ||

ತತ್ವತೇಜ ಪ್ರಸಾದ ಪೂರ್ಣರ
ತತ್ವದುಪದೇಶವನು ನೀಡುತ
ಸತ್ವದಾಚಾರೊಳಗೆ ಮಿರಿಸಲು ಶರಣ ಶರಣರನು ||
ಸತ್ವ ಮೂರುತಿ ಬಗೆ ಬಗೆಯ ಪ್ರ
ಭುತ್ವದನುಭವ ಬೀರಿ ಸಾಧನ
ತತ್ವ ಚಿಜ್ಜ್ಯೋತಿಯಲಿ ಚಿರವಿಟ್ಟಂಥ ಶಿವಯೋಗಿ || ೨ ||

ಸೊಂಪು ಸಂಸ್ಕೃತಿ ಪೂರ್ಣ ಸಂಪದ
ಹಂಪಿ ತಂಪನುಗೂಡಿ ಚನ್ನನ
ಕಂಪು ಹರಡುತ ಭೂವಲಯ ಜಡಚೇತನೆಲ್ಲದಕೆ ||
ತಂಪು ಮಧುರತೆ ಸಾರಿ ಮುಂದೆ ಚಿ
ದಂಪು ಹರಪನಹಳ್ಳಿ ಸನಿಹದೊ
ಳಿಂಪು ಸ್ಥಾನದು ಹಾಲವರ್ತಿಯಲಿರ್ದು ಗೌಪ್ಯದಲಿ || ೩ ||

---

* ಶಿ. ದರ್ಪಣ – ೭೩/೩ ೨

ತಿಳಿಯ ನೀರಿನ ಹೊಂಡವಿಲ್ಲಿರೆ
ಸೆಳೆಯು ಹಾಲಿನ ರುಚಿಯು ಹರ್ಷದ
ನೆಲೆಯು ಕಾರಣ ಹಾಲವರ್ತಿಯು ಸಾರ್ಥಕದ ನಾಮು ||
ಬಲದು ಸ್ವಾಮಿಯ ಸ್ಪರ್ಶ ಸುಖದಲಿ
ಸೆಳೆದು ಜನಮನ ಚಕಿತದಂದದಿ
ಸುಳಿದು ಹೃದಯದಿ ಹೊಳೆದು ಬೆಳಗುತೆ ಗುಡ್ಡ ಭೂಪುರವು

ಒಳಗೆ ನೋಡಿರಲಲ್ಲಿ ತಪಘನ
ಕಳೆವು ಬೆಳಗಿರಲಲ್ಲಿ ಹೊರಗಣ
ಚಲ ಮೃಗಾಂಗಣ ವೈರ ಭಾವನೆಯಿರದ ಪರಿಸರಣ ||
ತಿಳಿಸುತಿದುವು ಪತಂಜಲಿಯ ನಿಜ
ದೊಲಿವು †ಸೂತ್ರದು ಚಿತ್ರ ಸಾಕ್ಷಿಯು
ಫಲವಹಿಂಸಾ ಪ್ರಭೆಯ ಸನ್ನಿಧಿ ವೈರರಹಿತವದು

ಆತ್ಮ ಸರಸ ವಿಭೂತಿಮಯನಿಗೆ
ಯಾತ್ಮರಸಿಕನಿಗೆತ್ತರಾಗ ದು
ರಾತ್ಮರಂತಿಹ ಕ್ರೋಧವೆತ್ತದು ದ್ವಂದ್ವಪರಿಹರದ ||
ಆತ್ಮ ಸಾಕ್ಷಾತ್ಕಾರ ಯೋಗಿಯ
ಸ್ವಾತ್ಮದನು ನಿರ್ವೈರಭಾವ ಜ
ಡಾತ್ಮ ಹಿಂಸಕ ಪ್ರಾಣಿಯೊಳು ಸಹ ಪ್ರತಿಭೆ ಪಸರಿಸುತ

ಮಿತ್ರಭಾವವೆ ಬೆಳಗುತಿರೆ ಸುಪ
ವಿತ್ರ ತೋರ್ವುದು ಜಗಕೆ ಸೂಕ್ಷ್ಮದ
ಸೂತ್ರ ತಿಳಿಯದೆ ಹಾಳು ಮಾಡುತ ಬಾಳ್ವೆಗೋಳಿನಲಿ ||
ಖಾತ್ರಿ ಸತ್ಯ ಪ್ರತಿಷ್ಠೆ-ಪೂರ್ಣರ
ಪಾತ್ರ ತಿಳಿಯರು ಇವರ ಕೃಪೆ ಫಲ
ಮಾತ್ರ ಸಿದ್ಧಿಸಿ ಸಫಲ ದೊರೆಯಲಿದೇ ಪ್ರಯೋಜನವು

ತಾನು ತಾನಿರಲಿತ್ತ ಹೊರಗಡೆ
ಕಾಣುತ ದುರಾಚಾರಿಗಳ ಮತಿ
ಸಾಣೆ ಹಿಡಿದಂತಂತೆಯಣಕಿನ ತಂಡ ಪಾಷಂಡಿ ||
ಮೇಣು ಲಿಂಗಾಚಾರ ಸಂಗಕೆ
ಹಾನಿ ಮಾಡುತ ಧರ್ಮತೆಯ ಪರಿ
ಕೋಣ ಕಾದಾಟಂತೆ ಪರಮತವಾದಿಗಳ ತಂಡ

† ಪಾ. ಸೂ. ೨/೩೫

ವೀರಶೈವಾಚಾರವಿರದಾ
ಚಾರ ಗೊರವರ ವೇಷ ವಿಸ್ಮಯ
ಕಾರಿ ಘಟನೆಗಳೆಲ್ಲ ರಚ್ಚರಿಗೊಳಿಸುವಂತಿಹುದು ॥
ಸಾರವಲ್ಲದ ಕಂಡು ಲಿಂಗಾ
ಚಾರ ಜಂಗಮಭಕ್ತಿ ಮರೆತು ವಿ
ಚಾರ ಹೀನರ ಹಿಂದೆ ಹತ್ತುತ ಹಂದಿಗಳ ಹಿಂಡು ॥ ೯ ॥

ಸಂಗ ಸಂಸ್ಕೃತಿ ರಹಿತರಾಗಿ ಕು
ಸಂಗದೊಳು ತಮ್ಮತನವನೆ ಮರೆ
ತಂಗಣದಿ ಉರುಳಾಡುತಿಹರೈ ಡಾಂಭಿಕತೆಯ ನುಡಿ ॥
ರಂಗದೊಳು ಮೆಚ್ಚುತ್ತೆ ಕೃತಿ ಕಪ
ಟಾಂಗಣದಿ ಮೆರೆಯುತ್ತೆ ತಾಂತ್ರಿಕ
ಸಂಗ ಪಿಡಿದಿಹ ಚಿತ್ರ ನಿಜಸರ್ವತ್ರ ವಿಷಗತ್ರ ॥ ೧೦ ॥

ಎಲ್ಲಿ ನೋಡಿರಲಲ್ಲಿ ಆಂಗ್ಲರ
ರಲ್ಲಿ ಮುಸ್ಲೀಮರೊಳು ಸಹಿತಿರ
ಲಲ್ಲಿ ಸಂಸ್ಥಾನಿಕರ ವೃಂದದಿ ಭಿನ್ನ ಭಿನ್ನತೆಯ ॥
ಎಲ್ಲೆಡೆಗೆ ತುಂಬಿರಲು ಧಾರ್ಮಿಕ
ಸೊಲ್ಲು ಕರಗಿರೆ ವೀರಶೈವರ
ಬಲ್ಗತನ ಬರಿದಾಗಿ ಬಡಕಲು ಶರಣಸಿದ್ಧಾಂತ ॥ ೧೧ ॥

ಇಂತು ಹದಿನೇಳನೆಯ ಶತದೊಳ
ಗಂತು ಹಠ ವೇದಾಂತಿ ಸಿದ್ಧರ
ಕ್ರಾಂತಿ ಸಮಯದು ಕಾಯದಂಡನ ಬಾಯಬ್ರಹ್ಮನುಡಿ ॥
ಶಾಂತಿ ತರದಾಗಿತ್ತು ಕರ್ಮಠ
ರಂತು ಮಾರ್ಗದಿ ಬಂಧನಳಿಯದ
ಭ್ರಾಂತಿ ಸಮಯದಿ ಶರಣರನ್ನ ಶಿವಚೆನ್ನವೀರೇಶ ॥ ೧೨ ॥

ಕಾರಣಿಕ ಜಂಗಮನು ಕಾಣದ
ಕಾರಣದಿ ಚಲ್ಲಾಟವಿರಲು ವಿ
ಕಾರಗೊಳ್ಳುತಲಿರುವ ತತ್ವಾಚಾರ ಸುವಿಚಾರ ॥
ಕ್ರೂರವಿಡನಳಿಸುದಕೆ ಲೀಲಾ
ಚಾರ ಜಂಗಮನಿರಘ ಸ್ಥಿತಿಯಾ
ಕಾರ ಪ್ರಕಟಿತನಾದ ಬೋಧಾಕಾರ ದೇಶಿಕನು ॥ ೧೩ ॥

ಬಂದರೈ ಗವಿಯಿಂದೆ ತಪದಿಂ
ಹೊಂದಿ ಹರ್ಷತೆಯಿಂದೆ ಜನಮನ
ಸಂದಿಗೆಲ್ಲವ ಶರಣಸತ್ಕೃಯೆ ಶೀಲಸುಜ್ಞಾನ ||
ಹೊಂದಿಸಲು ಮನಮುಟ್ಟುವಂತೆ ಸು
ಬಂಧು ತಾತ್ವಿಕ ತುಂಬುವದೆ ಶುಚಿ
ಯಿಂದೆ ಕೃತಿಯೆಂಬಂತೆಯಿವನಿಂ ತೀರ್ಥ ಕ್ಷೇತ್ರಾಯ್ತು ||

ತುಂಗ ಜಂಗಮ ಚನ್ನವೀರನು
ಭಂಗಿರದ ಲಿಂಗಾಂಗ ಸಮರಸ
ಸಂಗ ಸಮ್ಮತನಾಗಿ ಮಾಡುವ ಸುಪ್ರಸಾದತೆಯ
ರಂಗ ಮಹಕಾಯಕವ ಸ್ವಯ-ಚರ
ಜಂಗಮನೆ ತಾನಾಗಿ ಮಾರ್ಮಿಕ
ದಿಂಗಿತವ ತಿಳಿಸಲ್ಕೆ ಹೆಣಗಾಡುದಕೆ ಶೀಲಾತ್ಮಾ ||

ವೀರಶೈವದ ಸಂಸ್ಕೃತಿಯ ಸುವಿ
ಚಾರದಿಂ ತಿಳಿಸಲ್ಕೆ ಕ್ಷೇತ್ರದಿ
ಪಾರಮಾರ್ಥ ಶಿವಾನುಭವ ಕೇಂದ್ರವನು ಪದ್ಧತಿಯೆ ||
ಚಾರುತನದಿಂ ತೆರೆದರಲ್ಲಿಯೆ
ಸಾರದಷ್ಟಾವರಣ ಪಂಚಾ
ಚಾರ ಷಟ್‌ಸ್ಥಲದಂಗ ಪ್ರಾಣಸದಾತ್ಮ ಪ್ರಕ್ರಿಯತೆ ||

ಧಾರೆ ಸ್ಥಲ ನೂರೊಂದು ಗಂಧ ವಿ
ಚಾರ ಚಿದ್ರಸ ಪುಂಗವನ ಸ್ವರ
ಸಾರ ಸರಳದಿ ಸಲಹುತೆಲ್ಲರ ರುಚಿಧರಿಸಿದವರ ||
ನೇರ ಕರುಣೆಯ ಭಾರವಮತಿ ಸಾ
ಕಾರಗೊಳ್ಳಲಿಯೆಂದು ಭಕುತರ
ಭಾರಿ ಮೇಳದು ಹಬ್ಬಿಕೊಂಡಿತು ಸುತ್ತಮುತ್ತೆಲ್ಲ ||

ನಡೆದು ನುಡಿಯುವ ಚನ್ನವೀರನು
ಬೆಡಗು ಭಕ್ತರ ಬಂಧುವಾದನು
ಒಡೆಯನೆನಿಸಿದ ಹಾಲವರತಿಯ ಸ್ಥಾನಪರಿಸರಕೆ ||
ದೃಢ ಶಿವಾನುಭವ ಸುಧೆಯಂ ಕರ
ಪಿಡಿದು ಮಹಯೋಗಿಯುರೆ ಕುಡಿಸಿದ
ಬೆಡಗು ಹರಪುರದ ಕೃಪೆಗದು-ಸಾರ್ಥಕತೆ ಸರಳಾಯ್ತು ||

ನೇಮದಿಂದಿರುತಿರಲು ಹರಪುರ
ಪ್ರೇಮಿನಾಯಕ ವಂಶದಲ್ಲಿಯ
ಸೋಮಶೇಖರನೆಂಬ ಪಾಳೆಯಗಾರ ಬೇಡರವ |
ಭಾಮೆ ಬಸವಮ್ಮಾಜಿ ಪತಿವ್ರತೆ
ನೇಮದಿಂದಿರುತಿರೆ ನರೇಂದ್ರನು
ಪ್ರೇಮದಿಂ ಕುಲದಂತೆ ಬೇಟೆಯನಾಡುತಿರಲೊಮ್ಮೆ || ೧೯ ||

ಈತನಾ ಮೃಗಯಾ ವಿಹಾರಕ್ಕೆ
ರೀತಿ ತನ್ನರಸಿಯು ಜೊತೆಗೆ ಬರ
ಲಾತ ಪುಣ್ಯೋದಯದ ಬಲದಿಂದಾತನೆಡೆ ದೃಷ್ಟಿ |
ಪಾತವಾಯ್ತದು ಚನ್ನವೀರನ
ಜ್ಯೋತಿ ಶ್ರೀ ವ್ಯಕ್ತಿತ್ವ ಪ್ರಭೆಯೊಳು
ಮಾತು ಬರದಂತಾಯ್ತು ನಾಯಕಗಂತು ನಿಜವಿಂತು || ೨೦ ||

ಸ್ವಾಂತ ಸುಖದ ನರೇಂದ್ರ ಗುರುಚರ
ಕಾಂತನಡಿ ಸತಿಸಹಿತ ನಮಿಸಿ ಪ್ರ
ಶಾಂತದಿಂದಿರೆ ಯೋಗಕ್ಷೇಮ ವಿಚಾರಿಸುತ ಯೋಗಿ ||
ಆಂತರಿಕ ಹಳೆಕರ್ಮ ತ್ಯಾಗದ
ನಂತ ಕೃತಿ ಕಲ್ಯಾಣಕಾರಕ
ಸ್ವಾಂತದನುಭವ ತತ್ವಹಿತನುಡಿ ಬೋಧಿಸಿದನಿಂತು || ೨೧ ||

ತಾಮಸಿಕ ತಾನಾಗದಾ ಸು
ಪ್ರೇಮ ಜೀವರೊಳಿರಿಸಲಾ ಸ
ಪ್ರೇಮವಿದೆಯಾನಂದ ಮಧುರಾನಂದವೇ ಪ್ರೇಮ॥
ನೇಮ ಧರಿಸಿರಲವಗೆ ಸೊಂಪು ವಿ
ರಾಮ ಹೃದಯ ಪಿಯೂಷ ವರ್ಷ ಸ
ದಾಮಯತೆ ತಿಳಿಯಯ್ಯಾ ತಥ್ಯವನಿದನು ತಿಳಿ ಸೋಮ || ೨೨ ||

ವ್ಯಕ್ತಿಯಿಂ ಪತಿತಾಗಬಹುದು ಸು
ತತ್ವದಿಂ ಪತಿತಾಗಲಾರ ಚಿ
ರತ್ವದಾ ಸುವಿಚಾರ ಜೊತೆಗಾಚಾರವದು ಜೋಡಿ ||
ಮತ್ತೆ ಜ್ಞಾನಾಶ್ರಯವ ಪಡೆಯದ
ಭಕ್ತಿಯದು ಸದ್ಭಕ್ತಿಯಲ್ಲವು
ತತ್ವಕೆರಡಿರಲೊಂದು ಮತ್ತೊಂದಕ್ಕೆ ಯಾಶ್ರಯವು || ೨೩ ||

ಹೊಟ್ಟೆ ಹಸಿವಿಗೆ ಹಿಂಸೆ ಮಾಡುವ
ಬಟ್ಟೆ ದೇವಗೆಯೊಪ್ಪದದು ಮೃಗ
ಬೆಟ್ಟದೊಳು ಜೀವಿಸಲು ಬಿಟ್ಟಿರುವಾಶ್ರಮವೆಲ್ಲವಿದು ।।
ದಿಟ್ಟ ಬೇಟೆಯ ಬಟ್ಟೆ ಸಲ್ಲದು
ತೊಟ್ಟ ಬಂದ ಪ್ರಸಾದ ಕಾಯಿದು
ದಿಟ್ಟತನದಿಂದೊಲಿಸಿ ಕೃಪೆಯಂ ಪಡೆಯ ಬೇಕೆಂದ ।। ೨೪ ।।

ಪುರದ ನಾಯಕ ನೈಜ ನಿಲವನೆ
ಮರೆತು ಗತಿಸಿರೆ ಪುರದ ಪ್ರಜರಿಗೆ
ಯಿರವ ಹೇಳುವರಾರು ಜನಪತಿಗಂತು ಮತ್ತಾರು ।।
ಕಿರಿಯ ಕಿಡಿಯೊಳು ಕರವನಿಟ್ಟರೆ
ಕರೆದುಕೊಳ್ಳುವರುಂಟು ಕಿಂತುರೆ
ಹಿರಿಯನಿಟ್ಟರೆ ಕರೆವರಾರುಪಚಾರ ದೂರೆಂದ ।। ೨೫ ।।

ಸಹನ ಶೀಲತೆ ಸತ್ವ ತಿಳದಿರ
ಲಹಮು ಮಂಜದು ಹರಿಯುತೆಚ್ಚರ
ವಹುದು ಅರಿವಿನ ಝುರಿಯು ಪಸರಿಸಿ ಹೃದಯಹದವಾಗಿ ।।
ಗಹನ ಗಂಭೀರತೆಯು ಗಂಗಾ
ಲಹರೆ ಲಯಗತಿ ಶರಣ ಚಿರಮತಿ
ಮಹತೆ ಮಂಜುಳಗಾನ ಗುಂಜದಿ ಲೀನ ಕೊನೆಮೌನ ।। ೨೬ ।।

ಬರಿಯ ನಾಯಕನಾಗಿರುವದೇ
ಹಿರಿಮೆನದು ಜೀವಾತ್ಮಗೋರ್ವನು
ಹಿರಿಯ ನಾಯಕನಿರುವ ನೈಜತೆ ಲಿಂಗ ತತ್ವಾರ್ಥ ।।
ಸರಸ ಸುಖದಿರೆ ನಿಜ ವಿನಾಯಕ
ಧರಮರಿಯದಿರೆ ಕುರುಡುಪಾಲಕ
ಪರಿಯ ನಿನಗೇನುಚಿತವೋ ಅದನನ್ನೇ ಅನುಕರಿಸು ।। ೨೭ ।।

ಚರಿತೆ ಬೇಡರ ಕಣ್ಣಪಯ್ಯನ
ಗುರಿಯು ನೆನಪಾಯ್ತೆನೋ ಅಲ್ಲನೆ
ಸರಳತನ ನಿಜವಂತು ನೀನಿಹುದಿಂತು ಸಮವೆಂತು ।।
ಸರಿ ಕಿರಾತನ ಭಾವವರಿಯುದ
ಬರಿಯೆ ಪೂಜಿಸುತ್ತಿರುವ ಬ್ರಾಹ್ಮಣ
ಸಿರಿಯರಿಯಲಾ ಲಾಭ ನೈಷ್ಠಿಕ ಭಕ್ತಿ ಬಂಧುರತೆ ।। ೨೮ ।।

ಆ ಪದವು ಸರಳಲ್ಲ ವನದೊಳ
ಗೀ ಪರಿಯ ಬಿಲ್ಲಾಟ ಕೃತಿಯು ನಿ
ಜಾಪರಾಧವು ಹಿಂಸೆಯಾರಿಗು ಯೆನಿತು ತರವಲ್ಲ
ತಾಪತ್ರಯ ವೇದನೆಯು ಇರುವೊಲು
ದೀ ಪಶುಗಳಿಗೆ ಬಾಧೆಯಿರುತಿರ
ಲಾ ಪರಮನುಡಿ ದಯವೆ ಧರ್ಮದ ಮೂಲವೆನೆ ತಿಳಿ || ೨೯ ||

ನೋವು ಕಣ್ಣಿಗೆ ತೋರದಾದರೂ
ತೀವಿಯನುಭವಿಸಿರುವದನುಭವ
ನೀವನುಭವಿಸುದಕಿದು ಬಾಣವ ಚುಚ್ಚಿಕೋ ಸಾಕು ||
ತೀವಿ ನನಗಾಗಿರುವ ವೇದನೆ
ಯಾವನರಿಯನು ಕಾಣದಿಹ ನಿಜ
ನೋವು ಶಬ್ದದಿ ಪ್ರಕಟವಾಗಿರುವಾಗ ಗೋಚರವು || ೩೦ ||

ದೇವ ದೇವತೆ ಹೆಸರಿನೊಳು ದು
ರ್ಭಾವಿಗಳು ಹಸು ಮೇಷ ಬಲಿಯನ
ದಾವ ಸಂಕಲ್ಪದೊಳು ಕೊಡುವರೋ ಹಾಗೆ ಸತಿಸುತರು ||
ಆವ ನಿಜದರ್ಪಿಸುವ ನಿರ್ಬಲ
ಜೀವಿಗಳ ಹಿಂಸಕರು ವ್ಯಾಘ್ರವ
ನಾವ ಪಿಡಿದರ್ಪಿಸುವನ್ಯೈ ದುರ್ವಿಷಯ ಬಲಿಕೊಡರು || ೩೧ ||

ತನ್ನದೆನ್ನುವ ವಸ್ತುವಿಗೆ ಬಲ
ಖಿನ್ನತೆಯ ಪರಿಚಿಂತೆ ಮೂಡಿರ
ಲನ್ಯ ಪ್ರಾಣಿಗಳಿಂಗೆ ಕೊಡುತಿಹ ಕೃತಿವಿವೇಕತೆಯ ||
ಚನ್ನ ಯೋಚಿಸಬೇಕು ಜಗದೊಳು
ತನ್ನ ತನವನ್ಯರೊಳು ಕಂಡೊಡೆ
ಚನ್ನ ಚನ್ನಿಗ ಚನ್ನವೀರನೆಯಾಗಬೇಕೆಂದ || ೩೨ ||

ಮುಡಿವ ಮನಹರ ಕುಸುಮಪರಿಹರ
ಹುಡಿಯು ಕೂಡಿರಬೇಕು ನೋಟಕೆ
ಬೆಡಗು ತಂದಿರಲೇನು ರಂಗದ ಫಲಕೆ ರುಚಿಯೇನು ||
ಘುಡಿ ಘುಡಿಸುವಾ ಹುಲಿಯ ವೇಷದಿ
ತುಡುಗು ಇಲಿಗಳ ಸ್ವರದ ಸಮವಿದು
ಬಿಡುತ ವೃಢಲಿಂಗವನು ಧರಿಸುತ ಶರಣನಾಗೆಂದ || ೩೩ ||

ಶರಣರಾ ಸದುಹೃದಯ ನಳಿನದಿ
ಹರನು ಶೋಭಿಸುತಿಹನು ಕಾರಣ
ದುರಿತಕರ್ಮವು ನಡೆಯುದಿಲ್ಲವು ಪೂರ್ಣ ಸಂಪೂರ್ಣ ॥
ಕರುಣವಿರಲೀ ಜೀವರೊಳು ಶಾಂ
ತರೊಡನಾಡಿರೆ ಯಂಥ ಕರ್ಮವು
ಹರಿದು ಹೋಗುತ ಕೊನೆಗೆ ಪರಿಭವ ಹುರಿದು ಸಾನಿಧ್ಯ ॥ ೩೪ ॥

ಕರುಣದಿಂದತಿಶಯದ ಧರ್ಮದು
ವಿರದು ನುಡಿ ನಿಜಗುಣೆಯು ನೀತಿಯು
ನೆರೆ ವಿಚಾರಿಸು ಧರಿಸು ಕೃತಿಯೊಳಳವಡಿಸಿರೆ ಲೇಸು ॥
ಇರವಿನೊಳು ನಿಜದೆದ್ದು ತೋರುವ
ಕರುಳು ಕಿರಚಿರದೆಂತುವಿರ್ಪುದು
ಕರುಳಿಗದು ಕಂಗಳಿವುವಿರದಿಲೆ ಪ್ರಭೆಯು ಪಸರಿಸದು ॥ ೩೫ ॥

ನೋಡು ಹರಿಣಿಯು ಹೊಡೆದು ತಂದಿಹ
ಕೇಡು ಕಂಡಿಹುದದು ಬಳಗದು
ಬಾಡಿದಾ ಮುಖದಿಂದೆ ನೋಟದು ನಾಟದೇ ಮನಕೆ ॥
ನಾಡೆ ನೀರಜ ಪರಿಮಳದ ಸುಮ
ನೋಡಿ ಹರಿಯದೆ ಬಿಡಲು ಸೂಸುತ
ಕೋಡಿ ಗಂಧವ ಕೊಡದೆ ತನ್ನಿರವಿನೊಳು ಕಡೆತನಕ ॥ ೩೬ ॥

ಕರುಣ ವಿನಯ ವಿವೇಕ ವಿರತಿ ವಿ
ತರಣ ನಿರ್ಧಾರಣತೆ ಧೈರ್ಯ
ನಿರಭಿಮಾನತೆ ಸತ್ಯ ವಿದ್ಯಾಭರಿತ ಸಾತ್ವಿಕದ ॥
ಹಿರಿಮೆ ಗುಣಧರಿಸಲು ಮುಕ್ತಿಗೆ
ಸರಳವದು ಮಿಕ್ಕೆರಡು ಬಂಧನ
ಸರಳ ಶರಣರ ಸೂಕ್ತಿ ತಿಳಿಯದೆ ಸಾಗಬಾರದದು ॥ ೩೭ ॥

ಹರಸಮಯದೊಳು ನಿಜದ ನಿಷ್ಠೆಯು
ಪರಹಿತದ ಸದ್ಧರ್ಮ ರತಿಯದು
ಪರಮಗತಿಗದು ನಡೆದು ನುಡಿಯಾಚಾರ ಒಪ್ಪುವದು ॥
ಸರಿಯು ದುರ್ವಿಕಕೃತಿಯು ತೋರೆಯದೆ
ಅರಿಯದಿರೆ ಹಿತವಿದಹಿತವೆಂಬುದ
ಹಿರಿಮೆ ಗುಣಕೃತಿ ತಿಳಿಯದಿರೆ ಯಾವಾಗ ತಿಳಿಯುವದು ? ॥ ೩೮ ॥

ನಾದಕಲೆ ತುಂಬುವದೆ ಜಂಗಮ
ನಾದವನ ಕರ್ತ್ರವ್ಯವಾಯ್ತಿದು
ಸಾದರದ ಶಿವಯೋಗಿ ಸತ್ಕೃಪೆ ಮಧುರವಾಗಿತ್ತು ॥
ಭೇದಿಸಲು ಬರದಂಥ ಬೆಸುಗೆಯು
ಬಾಧೆ ಹೊಂದದೆ ಹರ್ಷಹೆಚ್ಚಳ
ಪಾದದಿಂ ಪಡೆದಾಯ್ತು ಗಂಧಕೆ ತುಂಬಿಯಂತಾಯ್ತು ॥ ೪೦ ॥

ಅಂಬರದೆಡೆೀ ಹೋದ ಗಂಧದು
ಕುಂಭಿನಿಗೆ ಮರು ಮರಳದಂತೆಯೆ
ಶಂಭು ಜಂಗಮಪಾದವನದಿಂ ಮುಂದೆಗತಿಯೆಂತು ॥
ನಂಬಿರುವ ಕಲ್ಲಳ್ಳಿ ವನವಂ
ತುಂಬ ನಂದನವನವ ಮಾಡಿದ
ಶಂಭು ಪಯಣದ ದಿಸೆಯ ತಿಳಿವುದು ಬರುವ ಗತಿಯೊಳಗೆ ॥ ೪೧ ॥

ಶುದ್ಧವಹುದಂಕಲಗಿಯಡವೀ
ಸಿದ್ಧ ಚರಣಾಶ್ರಯದಿ ಸ್ಥಾಪಿಸ
ಶೆದ್ದ ಪುರಮರೆಗುದ್ದಿ ಮಠವಿದು ಅಡವಿಸಿದ್ಧೇಶ ॥
ಬದ್ದಿದಕೆ ಗುರುವಂಶದೊಳು ಕ್ರಮ
ಬದ್ಧ ಗುರು ಗುರುಪಾದ ಕೃಪೆಯಿಂ
ಪೆದ್ದ ಗುರುನಿರುಪಾದಿ ಕೃತಿಯೋಳ್ ನಾಲ್ಕನೆಯ ಸ್ಥಲವು ॥೪೨॥

ಅಂತೂ ಸ್ಥಲ ೪ ಕ್ಕಂ ಪದ ೪೨ಕ್ಕಂ ಒಟ್ಟು ಪದ ೧೮೬ ಕ್ಕಂ
ಮಂಗಳಂ

ಓಂ

# ಐದನೆಯ ಸ್ಥಲ

ಸೂಚನೆ–

*ಪತ್ರಿವನದಿಂ ಹೊರಟು ಬರುತಲಿ
ಸೂತ್ರ ಪುರುಷನು ಲೀಲೆಯೆಸಗುತ
ಕ್ಷೇತ್ರ ಮಾಡಿದ ಲಿಂಗ ನಾಯ್ಕನಹಳ್ಳಿ ನಿಜದಿಂದೆ ॥

ಶ್ರೀ ನಿರಂಜನ ಜಂಗಮವೆ ಶಿಶು
ತಾನೆ ರೂಪವ ತಾಳ್ದು ಮಣಿ ಭ
ಸ್ಮಾನುಭೂತಿಯ ಲಿಂಗಧಾರಣ ಸಹಿತಗೋಸಲದ
ಸ್ಥಾನ ಭೂಷಿತ ಚನ್ನಬಸವನ
ಕಾಣುತಲಿ ತವೆ ಸನ್ನಿಧಾನದಿ
ತಾನು ಪಡೆಯುತನಂತ ಲೀಲಾ ಲೋಲುಪಗೆ ನಮನ ॥ ೧ ॥

ಅರಿಯೆ ಪುರಕಲ್ಲಳ್ಳಿಯಿಂ ಗುರು
ಹೊರಟ ವರ್ಣನ ಕೇಳಿ ಮೈಲಾರ್
ಶರಣ ನುಡಿಯು ಶಿವಾನುಭವ ದರ್ಪಣದಿ * ಸ್ವರಗಂಧ ॥
ದುರುಳ ಮಮ–ಹಂಕಾರ ಪಾವುಗೆ
ಧರಿಸಿ ಶಮೆ ಚಿತ್ ವಸ್ತ್ರ ಜೋಳಿಗೆ
ಕರದಿ ಕ್ರಮದಂಡಾಗ್ರವಿಡಿದಾ ಬೋಳುಮಸ್ತಕನು ॥ ೨ ॥

ಬೋಳುದೊಡೆ ಕಟಿಸೂತ್ರ ಜಪಸರ
ತೋಳಿಗಾಧಾರವದು ಭಸ್ಮದು
ಭಾಲದೊಳಗದು ಶಾಂತಿಕಾವಿಯ ಧರಿಸಿ ಶ್ರೀ ಲಿಂಗ ॥
ಮೇಳವದು ಎಡಕರದಿ ಮಂತ್ರದು
ಮೇಲು ಜಪಪಂ ತಾಮಸಾದಿಯ
ಜಾಲ್ಹರಿದು ಭೂಪಾವನಾತ್ಮಕವಾದ–ಪರದೇಶಿ ॥ ೩ ॥

* ಶಿ ದರ್ಪಣ ೨೪/೧೬

ಹಾಳುಗುಡಿ ಮಂಟಪದಿ ಒರಗು
ಕೇಳುತಿರೆ ದೇಶಾಂತರೆಡೆಗಾ
ಹೇಳದಾ ಸಂಚಾರ ನಿರತಂ ಜ್ಞಾನ-ಕ್ರೀರತನು ||
ಬಾಳಲೋಚನ ರೂಪದಿಂ ಪರಿ
ತಾಳಿ ಮೇದಿನಿಯೊಳವತರಿಸಿದ
ಶೀಲ ಷಡುಸ್ಥಲ ಧ್ಯಾನ ಮೌನದ ವೀರ ಮಾಹೇಶ || ೪ ||

ಹಾಡುತಲಿ ಜಂಗಮರ ಮನ ಪ್ರಭು
ಕೋಡಿ ವಚನ ಪ್ರಸಾದ ಮಾಧುರಿ
ನೀಡಿ ಶಿವಭಕ್ತರಿಗೆ ಪಾದೋದಕ ಪ್ರಕಾರವನು ||
ಕೂಡಿ ಯಾಡಿ ಶಿವಾನುಭವ ರಸ
ಗೂಡಿ ಸಿಂಪಡಿಸುತ್ತೆ ಮೆದುಳಿಗೆ
ರೂಢಿ ಮಾಡುತ ನಡೆದ ಶರಣರಶೃಂಗ ಶೃಂಗಾರ || ೫ ||

ಶ್ರೀ ಸದಾ ಸುಧೆ ಜ್ಞಾನ ಸದ್ಗತಿ
ಕೋಶ ಭಕ್ತಿಪ್ರಕಾಶ ಸುಖರತಿ
ಘೋಷ ನಿರ್ಮಲ ಮುಕ್ತಿ ಮಂಗಳ ತೋರಿ ಪ್ರಖ್ಯಾತ ||
ತೋಷ ಕೃತಿ ಸಂಪ್ರೀತ ವಿರತ ಪ್ರ
ಕಾಶ ಚರವರ ದೋಷರಹಿತ ಸು
ಭಾಷ ಮಂಗಳಶಕ್ತಿಗಾಸ್ಪದ ಸಹಜಸದಮಲನು || ೬ ||

*ಸದುಭಕುತಿಯಿಂ ಬಂದದಂಬಲಿ
ಸದಯಗ್ರಹಿಸುತ ಶುಭ್ರಕಂಬಳಿ
ಪದುಳದಿಂ ಉಂಬುಡುವ ಸ್ವಾಯ ಚರ ಪರಮ ಜಂಗಮನು ||
ಅದುವೆ ಭೂತೇಂದ್ರಿಗುಣ ವಿಷಮತೆ
ಬಿದುವೆ ಷಟ್ ಭಾವಾದಿ ಕರಣಕೆ
ಯದುವೆ ತ್ರೈ ಜೀವಾತ್ಮದಕೆ ಸಂಜೀವ ಸಂಗಮನು || ೭ ||

ಇಂತು ಕ್ರೀ ಸುಜ್ಞಾನದನುಭವಿ
ಯಂತು ಗಹನದ ತಿಳಿವೆಯೇ ಜ್ಞಾ
ನಂತು ಲಕ್ಷಿಸುತಲ್ಲಿಡದೆ ನಿಜದಾಚರಣದೊಳಗೆ ||
ಸಂತತಂ ತಾನಾದ ಸಹಜತೆ
ಸಂತತಂ ಸ್ವರೂಪಾನುಸಂದಾ
ನಂತರ ಒಳಹೊರ ದೃಷ್ಟಿರದ ಚಿಜ್ಯೋತಿ ತಾನಂತು || ೮ ||

* ಗು. ಕ. ಶ್ರೀ ... ೨೫೦, ೨೫೧, ೨೫೨.

ವೀರ ಜಂಗಮದೇವ ನರರು
ದ್ಧಾರ ಮಾಡುತೆ ನಡೆದ ಪಟ್ಟಣ
ತೀರ ಪಳ್ಳಿಗಳಲ್ಲಿ ಸಂಚರಿಸುತ್ತೆ ಕಥಿಸುತ್ತೆ ||
ಚಾರು ಶುಭ ಸೌಂದರ್ಯ ಪ್ರಕೃತಿಯ
ಭಾರ ಸೊಬಗಿನ ಮದ್ಯ ನದಿಝುರಿ
ತೀರ ಫಲಪ್ರದವಾದ ಲಿಂಗಾರ್ಚನೆಯ ಮಾಡುತ್ತ || ೯ ||

ಅಂಕುರದ ಸಂಕಲ್ಪ ಸಂಶಯ
ಶಂಕೆಯಳಿದಿಹ ತನ್ನ ಗುರುವಿನ
ಪಂಕಜದ ಮಕರಂದದೊಳು ಝೇಂಕರಿಸುವಾ ಹೃದಯ
ಶಂಕಿಸದ ಬರಿಯಿರವದೊಳು ತಾಂ
ಪಂಕಜತೆ ಕರಿಗೊಂಡ ಮೌನದ
ಬಂಕೆಯಿದು ತದ್ಧ್ಯಾನ ಲಿಂಗಾರ್ಚನೆಯ ಸಂಧಾನ || ೧೦ ||

ನಯನ ನಂದಾದೀಪ ಮಂದಪ್ರ
ಭೆಯ ಬ್ರುಕುಟಿ ಚೌಪೀಠ ಮಂಚದಿ
ನಯನ ಮೂರುತಿ ಬೆಳಗಿ ಬಾಹ್ಯಾಂತರದಿ ಮೂಡುತಿಹ ||
ತ್ರಯ ಸುಲಿಂಗಾರ್ಚನೆಯು ಭಾವಾ
ಶ್ರಯದಿ ಪಾದ್ಯಾಚಮನವಕ್ಷತೆ
ಪಯದು ಪಂಚಾಮೃತ ವಿಲಕ್ಷಣ ಮಜ್ಜನದ ಸೌಖ್ಯ || ೧೧ ||

ಭರಿತಫಲ ಮೂಲಾದಿ ಲಿಂಗಕೆ
ಯಿರಿಸುತಲಿ ಸ್ವೀಕರಿಸಿ ನೇಮಿಯು
ಧರಿಸಿ ದಕ್ಷಿಣಕಾಶಿಸಮ ಕುರುಕ್ಷೇತ್ರದಲಿ ಮೆರೆದ ||
ಪರಮ ಗುರುನಂಜೇಶನಾತ್ಮಜ*
ಶರಣರಿಗೆ ದರ್ಶನವ ನೀಡುತ
ನಿರುಪಮದ ಸುಖದಲ್ಲಿ ಗಿರಿದಾಟುತ್ತ ತುಂಗೆಯಡಿ || ೧೨ ||

ಬಂದನಂದು ಚಿದಂಗ ಕಂಗಳ
ಹೊಂದಿ ಭದ್ರೆ ಸುಭದ್ರೆಯಾಗಿಹ
ಳಿಂದು ಸಹಗುರುಪಾದ ಸ್ಪರ್ಶದ ತೃಪ್ತಿಸುಖದಲ್ಲಿ ||
ನಂದದಿಂ ಸಾಗಿಹಳು ಹಗುರದಿ
ಚಂದದಿಂ ಸ್ತೋತ್ರವನು ಮಾಡುತ
ಮಂದ ಜುಳುಜುಳುನಾದ ಹೃದಯನಿನಾದ ರಸಮೋದ || ೧೩ ||

* ಶಿ. ದರ್ಪಣ-ಪದ ೭೧/೫

ತುಂಗೆ ತಿಳಿಯಗ್ಗವಣಿ ಬೆಳೆದು
ತ್ತುಂಗ ಬಿಲ್ವಲತಾಂಗ ಪುಷ್ಪ ಪ್ರ
ದಾಂಗ ಹವೆ ಶೀತಾಂಗ ನೆಳಲಾಂಗಣದು ಶಾಂತಾಂಗ ॥
ಕಂಗಳಿಗೆ ಸೌಂದರ್ಯ ಪರಿಸರ
ರಂಗ ಚೆಲ್ಲಿತು ಹೃದಯದೊಳು ಮಹಿ
ಮಾಂಗದಂಗೈದೊಳಗಿನಾ ಲಿಂಗದೊಳು ಸುಖಸಂಗ ॥ ॥ ೧೪ ॥

ಕಳೆದನೆಷ್ಟೋ ದಿನವಕಾನನ
ಬೆಳಗಿ ಪಾವನ ತಪಕೆ ಶ್ರೀವನ
ಹೊಳೆದು ಪ್ರಭೆ ಹೊಂಬಣ್ಣದಿಂ ಸಕ್ರಮತೆ ತಿಳಿಬೆಳಗಿ ॥
ಇಳಿದು ಮುಳುಗಿರೆ ಚಿರದಸುಪ್ರಭ
ವಲಯ ಪ್ರಮಥನ ರಸ್ಮಿ ಪಸರಿಸಿ
ಸುಳಿದು ಮೃಗಗಳು ಜನ್ಮವೈರವ ಮರೆತು ಮಧುರದಲಿ ॥ ೧೫ ॥

ಅಳಿವುದೆಂಬುದ ತಿಳಿದ ತೀರ್ಥಗೆ
ಯುಳಿಸಬೇಕೆಂಬಾಸೆ ಸುಳಿಯದು
ತಿಳಿದ ತಿಳಲೊಳು ಮನ ವಿಕಾರತೆ ಬೂದಿಯಾಗಿರುವ ॥
ಉಳಿದ ಉಳಿಮೆಯು ಬೆಳಗಿನೊಳಗಣ
ಕಲೆ ಕಲಾಮಯದೊಳಗೆ ಮುಳುಗಿದ
ಚಲುವನಂ ಛೇಡಿಸುವದಾವುದು ನಿರ್ವಿಕಾರನಿರೆ ॥ ೧೬ ॥

ಉಪನಿಷದ ಬೋಧಿಸಿದ ಮುನಿಗಳ
ತಪ ಪ್ರಶಾಂತಾಶ್ರಮದ ಸ್ಮರಣೆಗೆ
ಸಫಲ ತರುವಂತಾಯ್ತು ಪರಿಭವಲಿಂಗ ನೇಮಾಂಗ ॥
ವಿಫುಲ ಮೌನಧ್ಯಾನ ನಿತ್ಯದಿ
ಸುಫಲ ನಿರುಪಮ ಜಂಗಮತ್ವದ
ತಪದಿ ಸುಖ ತಲ್ಲೀನ ಯತಿ ಯಡೆಯೂರ ಸಿದ್ಧನೊಲು ॥ ೧೭ ॥

ಭೇದತೋರದ ಭಕ್ತಿಪ್ರದ ನಿರು
ಪಾಧಿ ಮುಕ್ತಿಯನೀಡುವ ವಿಮಲ ಪ್ರ
ಸಾದ ತೃಪ್ತಿಯೊಳಿರ್ಪನಾದಿ ವಿರಕ್ತ ಶರಣನನು ॥
ಬಾಧೆ ತೋರದ ನಿರಘ ಪರತರ
ಸಾಧು ನಿರ್ಗುಣ ಚಿರ ನಿರಂಜನ
ಮೋದ ತಾಪಸ ಚರಿತನಾಯಕಲೀನವಿರಲಂತು ॥ ೧೮ ॥

ಸಿದ್ಧಲಿಂಗನು ಕಗ್ಗೆರೆಯೊಳಾ
ಮುದ್ದು ಮಾವಿನ ವನದ ಮಧ್ಯದಿ
ಶುದ್ಧ ತಪದಿರೆ ಸೆಟ್ಟಿನಂಬಿಯ ಮನೆಯೊಳಿರುವಂಥ ||
ಒದ್ದ ಕಪಿಲೆಂಬ ಹಸು ಪ್ರತಿದಿನ
ಶುದ್ಧನಿರುತಿಹ ಹುತ್ತದೆಡೆ ಪಯ
ಸದ್ದಿರದೆ ಕೊಟ್ಟಂತೆ "ಹರವ್ವಿ" ಪುರಾಣದಯ್ಯನನ || ೧೯ ||

ಗೋವು ಹಿಂಡನು ತೊರೆದು ಜಂಗಮ
ದೇವನಿರುವೆಡೆ ಬರುತ ನಿತ್ಯದ
ಸೇವೆ ಹರಿವಾಣದೊಳು ಹಾಲನು ಕರೆಯುತೊಡಗಿದಳು ||
ದೇವ ಪೂಜೆಗೆ ನಿತ್ಯ ಕಪಿಲೆಯು
ತಾವೆ ಹಿಂಡಿ ಪುರಾಣದಯ್ಯನು
ಭಾವದಿಂದಿರೆ ಹಾಲುಕೊಡದಿರಲಾಗ ಯೋಚಿಸುತೆ || ೨೦ ||

ಸರಿ ವಿಚಾರಿಸಲೇನು ತಿಳಿಯದೆ
ತೊರೆ ಬಿಡುವ ತಪ್ಪಲನು ತಿನ್ನಿಸು
ತಿರಲು ಮಂತ್ರಿಸಿ ಯಂತ್ರಕಟ್ಟಲು ಧೂಪ ಬೆಳಗಿಸಲು ||
ಕರೆಯದಾಗಲು ನೈಜಸಂಗತಿ
ಸರಿ ಪರೀಕ್ಷಿಸುವಾಸೆಯಿಂ ತಾಂ
ಹೊರಟ ಹಸು ದನಗಾಯಿಗಳ ಹಿಂದಿಂದೆ ಬಂದಾಗ || ೨೧ ||

ಎಲ್ಲ ಹಸುಗಳು ಮೇದು ಮರಳಿರ
ಲಲ್ಲಿ ಆ ಮಠದಯ್ಯನಾ ಗೋ
ಎಲ್ಲ ದನ ತಾ ಬಿಟ್ಟು ಮರಗಳ ಮಧ್ಯ ಗತಿಸುತ್ತೆ ||
ಸಲ್ಲಲಿತ ಸನ್ನಿಧಿಯ ಹಾಲನು
ನಲ್ಮೆಯಿಂ ಕರೆಯುತಿರಲು ಕಂ
ಡಲ್ಲಿ ಬೆರಗಾಗುತ್ತೆ, ಧನ್ಯತೆ ಸ್ಮರಿಸಿ ಸಾಷ್ಟಾಂಗ || ೨೨ ||

ಸರಿ ಪುರಾಣಿಕನನ್ನು ಬಾಲರು
ಅರಿಯುತಲ್ಲಿಗೆ ಬಂದು ಗದ್ದಲ
ವಿರಿಸಲಾ ಶಿವಯೋಗಿವರ ಬಹಿರ್ಮುಖಿಯು ತಾನಾಗಿ ||
ಹಿರಿಮೆ ಸಂತಸದೊಳು ಮುಗುಳ್ನಗೆ
ಭರಿಸಿ ಕರುಣೆಯ ಹರಿಸಲಾ ಹಸು
ಹರಿಸಿ ಹರಿವಾಣದೊಳು ತುಂಬುತ ಹಾಲು ಕರೆದಿರಲು || ೨೩ ||

'ಹರವಿ, ಪುರ ನಿಜವೆನಿಸುವ್ರದಿದುವ್ವೈ
ಹರುಷದಿಂ ಶಿವಯೋಗಿ ನುಡಿದಿರೆ
'ಹರವಿ, ನಾಮದ ಖ್ಯಾತ ಪುರಮೇಣ್ ಮಂಗನಾಯಕನ ||
ಪುರದಿ ಭದ್ರಾ ತಟದಿ ಹೀಗೆಯೆ
ಸರದಿಯಂತೆಯೆ ಮಠವ ಕಟ್ಟಿಸಿ
ಚರನಲಿಂಗಾರ್ಚನಕೆ ಪದ್ಧತಿಯಂತೆ ಮಾಡಿಸಿದ* || ೨೪ ||

ಚಂದಗೊಳಿಸಿದ ವನವ ಜಂಗಮ
ವೃಂದ ಗಣಪದಪೂಜೆ ತೃಪ್ತಿಯ
ನಂದು ಮಾಡಿಸಿದಯ್ಯನ ಹೆಸರು ಖ್ಯಾತಸಹಿತಾಗಿ ||
ಗಂಧವರ ಶಿವಯೋಗಿ ವರನಾ
ನಂದ ತಪ ಘನ ಕೀರ್ತಿ ವಾರ್ತೆಯು
ಮುಂದೆ ಪಸರಿಸಿ ಶರಣಸಾಧಕ ಜಂಗಮರ ವಟುಗಳ್ || ೨೫ ||

ತಂಡ ತಂಡದಿ ಬಂದರಾ ಗಳ-
ಖಂಡನಡಿ ಸಂದರ್ಶನಕೆ ಮನ
ಗಂಡು ಮಧುರಕೆ ಸತ್ಕ್ರಿಯಾ ಸುಜ್ಞಾನ ಸಂಸ್ಕೃತಿಯ ||
ಮುಂಡಧರನ ಶಿವಾನುಭವರಸ
ಉಂಡು ಲಿಂಗ ಸಕೀಲ ತಿಳಿಯಲು
ಕಂಡರಾ ಗಣ ಚರಣವನು ಜಗಭಂಡರಂ ತೊರೆದು || ೨೬ ||

ನಾಂದಿಯಾಯಿತು ಸತ್ಯ ಶರಣಾ
ನಂದ ಸಹಜಾಚರಣ ಸಾಧನ
ಕಂದು ಸಿದ್ದದು ಮಂಗನಾಯ್ಕನ ಹಳ್ಳಿಪ್ರಖ್ಯಾತ ||
ಅಂದು ಕಪಿಗಳ ವಾಸಕಾರಣೋ
ಭಂದಗೆಡಿಸುವ ಹಾವಳಿಯೊ ಇರ
ಲೆಂದೆ ಇಂತಹ ನಾಮ ಬಂದಿತೊ ಏನೆ ಮೇಣುಕಥೆ† || ೨೭ ||
ಓರ್ವ ನಾಯಕನನುಚರರೊಡನೆ

ಗರ್ವದಿಂದಾಶ್ರಮದ ಸುತ್ತಲು
ಸರ್ವವನುಚಿತವೆಸಗಿ ಕಪಿಚೇಷ್ಟೆಯನು ಮಾಡಿರಲು ||
ಉರ್ವಿಯೊಳು ಶ್ರೀ ಕೃತಿಯದಿಂದಲೊ
ಸರ್ವರೆಲ್ಲರು ಕರೆದರೇನೋ
ಶರ್ವಯತಿವರ ಬರಲು ಪೆಸರದು 'ಲಿಂಗ,-ವೆಂದಾಯ್ತು || ೨೮ ||

* ಶಿ. ದರ್ಪಣ-ಪುಟ [illegible] † ಚ. ವಿ. ಶಿ.-ಪುಟ-೨೩

ಲಿಂಗನಾಯ್ಕನ ಹಳ್ಳಿ ಪೂಜ್ಯರ
ತುಂಗ ಶರಣರಿಗೆಲ್ಲದುಚಿತದ
ಭಂಗವಿಲ್ಲದ ಪೂರ್ಣದಾಶ್ರಯ ತತ್ವದಾಶ್ರಮವು
ರಂಗಬವುಕರವಿತ ಸಂಪಿಗೆ
ಸಂಗ ಸೇವಂತಿಗೆಯ ಕೆಲಭಕು
ಲಾಂಗಳದಿ ಹುಲಿಹುಲ್ಲೆ ಸ್ನೇಹದಿ ಬಾಳ್ವಪಂಚವಟಿ ‖ ೨೯ ‖

ಆ ವನಾಂತರ ವಿಸ್ತರದ ಪರಿ
ಭೂವನದಿ ದಾಳಿಂಬ ಲಿಂಬೆಯ
ಮಾವು ವೃಕ್ಷದಿ ಬೆಕ್ಕು ಇಲಿ ಗಿಳಿ ಗಿಡಗ ಗೆಳೆತನದಿ ‖
ಧೇವ ನೆಲಿಸಿದ ಕಾರಣದಿ ವೃದು
ಭಾವ ಧರಿಸಿರಲಾತುರದಿ ಯನು
ಭಾವಿ ಸಂಗನ ಸ್ಪರ್ಶದಿಂ ಬದ್ರೆಗದು ಸಹಜ ಸುಖ ‖ ೩೦ ‖

ನದಿ ಪವನಲತೆ ವೃಕ್ಷ ತಂಪದ
ಬದಿ ಭ್ರಮರ ಝೇಂಕಾರ ಇಂಪದ
ಪದ ಪ್ರದಾನ ನಿದಾನ ತತ್ವನುದಾನ ಸಂಪದತೆ ‖
ಪದ ಮರಂದ ವಸಂತ ಕಂಪದ
ಸಭೆ ಪ್ರಸಾದಾಗಮದ 'ಓಂ' ಪದ
ಮುದ ವಿರಾಗಿ ವಿಚಾರತತ್ವದದರ್ಥ ಸಾಂಪ್ರದತೆ ‖ ೩೧ ‖

ಜಂಗಮಾಂಘ್ರಿಗಳನ್ನು ಪೂಜಿಸಿ
ರಂಗಭೂಷಿತ ಮಾಡಿ ಪಡೆದರು
ಭಂಗಿರದ ಪಾದೋದಕ ಪ್ರಸಾದ ಸಹ ವಚನಾರ್ಥ
ಜಂಗಮತ್ವದ ನೈಜತೆಯ ಮಹ
ಲಿಂಗ ತಾನಾಚರಿಸಿ ಪರಿಕ್ರೀ
ಕಂಗಳಕೆ ಸಾರಾಮೃತವನನುವಾದ ದಾಸೋಹ ‖ ೩೨ ‖

ನೇಮ ಧರ್ಮಾಚಾರ ಸರ್ವಗೆ
ಕಾಮಹರನಾಚರಿಸಿ ಸಕಲಗೆ
ಪ್ರೇಮದಿಂ ಸತ್ನಾಯಕಂ ತಾ ಮಾಡಿ ಮಾಡಿಸಿದ ‖
ವ್ಯೋಮಕೃತಿ ಕಲ್ಯಾಣದನುಭವ
ಧಾಮ ಮಂಟಪ ಸ್ಮೃತಿಗೆ ತರಿಸಿತು
ವ್ಯೋಮನಲ್ಲಮ್ಮ ಶೂನ್ಯಪೀಠದ ಪಂಥ ಸಮತೆಯಲಿ ‖ ೩೩ ‖

ಸುಗುಣಿಯೆಂತೆನೆ ಸುಗುಣಿಗಳ ಕಥೆ
ಸೊಗಸುವೆಂತೆನೆ ಸೊಗಸಿಗರ ಕಥೆ
ಬಗೆಯು ಬರಿಸುವ ಸರಸದುಃಖಮಾನಗಳು ಬಹಳುಂಟು ||
ಗಗನವೇನೆನೆ ಪ್ರತಿಯು ತೋರದ
ಗಗನ ಗಗನಾಕಾರವೆಂಬುದೆ
ಸೊಗಸು ನಮ ಶಿವಯೋಗಿ ಹೇಗೆನೆ ಹಾಗೆಯೇ ನುಡಿಯು || ೩೪ ||

ಹಗಲಿರುಳು ನಡೆವಂಥ ಶರಣರ
ಸೊಗಸು ಶ್ರೀ ಗೋಷ್ಠಿಗಳು ಜನಮನ
ಬಗೆಯು ಬದಲಾಗುತ್ತ ಆಕರ್ಷಿಸುತ ಛಾತ್ರಗಳ ||
ನಗುತಲಭ್ಯಾಸಿಸುತ ಗತಿಸಿದ
ಮಿಗಿಲೆನಿಪ ಮೂರ್ತಿಗಳ ಸಂಗಮ
ನಿಗಮವಾಗಮ ತಿಳಿದ ಬಳಗವ ಮುಂದೆ ತಾಂ ಕೇಳಿ || ೩೫ ||

ಶುದ್ಧವಹುದಂಕಲಗಿಯಡವೀ
ಸಿದ್ಧ ಚರಣಾಶ್ರಯದಿ ಸ್ಥಾಪಿಸ
ಲೆದ್ದ ಪುರ ಮರೆಗುದ್ದಿ ಮಠವಿದು ಅಡವಿಸಿದ್ಧೇಶ ||
ಒದ್ದಿದಕೆ ಗುರುವಂಶದೊಳು ಕ್ರಮ
ಬದ್ಧ ಗುರು ಗುರುಪಾದ ಕೃಪೆಯಿಂ
ದೆದ್ದ ಗುರು ನಿರುಪಾಧಿ ಕೃತಿಯೋಳ್ ಐದನೆಯ ಸ್ಥಲವು || ೩೬ ||

ಅಂತೂ ಸ್ಥಲ ೫ಕ್ಕಂ ಪದ ೩೬ಕ್ಕಂ ಒಟ್ಟು ಪದ
೨೨೨ ಕ್ಕಂ ಮಂಗಲಂ

## ಓಂ

## ಆರನೆಯ ಸ್ಥಲ

ಸೂಚನೆ-
ಲಿಂಗನಾಯ್ಕನ ಹಳ್ಳಿಯೊಳಗಿನ
ತುಂಗವಿದ್ಯಾಶ್ರಮದಿಕೂಡಿಹ
ರಂಗದೊಳು ಗುರುಸಂಗಿ ಶರಣರ ಸ್ಥಿತಿಯ ತಿಳಿಯುವದು ॥

ತನುವೆ ಪಂಪಾಕ್ಷೇತ್ರ ತನ್ನಯ
ಮನವೆ ದೇವಸ್ಥಾನವಲ್ಲಿಯ
ಮಿನುಪರಸನೇ ದೇವ ವಿರುಪಾಕ್ಷೇಶ ತಾನಾದ ॥
ಘನತೆಗತಿಯುತ ತುಂಗಭದ್ರಾ
ಸನಿಹ ಪ್ರಮಥ ಸಮರ್ಥ ಸಂಗಮ
ನೆಣಿಕೆ ಎನಗಳವಲ್ಲ ಕೇವಲ ಸ್ತುತಿಸಿ ಸಾಗುವೆನು ॥ ೧ ॥

ದೇವ ಸಾಧನ ಮಾರ್ಗ ವೀರ
ಶೈವ ಧರ್ಮ ವಿಚಾರಸಾಗರ
ಸೈ ವಿಭಾಗ ಸುಧಾರಣಾಶ್ರಮ ಪಥಪ್ರತಿಷ್ಠೆಯದು ॥
ಭಾವದೊಳು ಆವರಿಸಿ ಬಿಟ್ಟರೆ
ಭಾವಿಕರ ಶಿವಯೋಗ ಸಾಧನ
ಕಾವದೆಡೆ ತಡೆಯಿರದ ಸಂಗತಿ ಖ್ಯಾತವಾಗಿಹುದು ॥ ೨ ॥

ಸರಸ ಬತ್ತಿರೆ ಹಂಸ ಬೇರೆಡೆ
ಸರಸದೆಡೆ ಗತಿಯಂತೆ ಜಂಗಮ
ದಿರವ ವಟುಗಳು ಜ್ಞಾನ ಸಾಗರದೆಡೆಗೆಯಾಗಮನ ॥
ವರನ ಗುಣ ದಮಯಂತಿಗದು ನಿಜ
ದರುಹಿಸಲು ಹೊರಟಂಥ ಧೂತನ
ಸರಣಿಯಂತಿರುವೋಲು ಶೋಭಿಸುತಿಂತು ಗುರುಕುಲವು ॥ ೩ ॥

ಭಾಷೆ ಭಾವೈಕ್ಯತೆಯು ಕೃತಿ ಸಂ
ಭಾಷಣೆಯು ಸಂಸ್ಕೃತಿಯ ಸಂಗದ
ವೇಷ ವರ್ತನ ವಾಕ್ಸರಣಿ ಚಿದ್ಭಾವವಲ್ಲಭನ ॥
ಹರ್ಷ ಹೃದ್ಗತ ಬೋಧದಮೃತ
ವರ್ಷ ವರ್ಷಾಕಾಲ ಬಿಡದಿಹ
ಹರ್ಷ ತಂದಿರುತಿರುವ ವಟುಗಳಿಗಂದು ಗುರುಕುಲವು ॥ ೪ ॥

ಚನ್ನವರ ಮಠಮಾನ್ಯಕಾಗುವ
ಮನ್ಯವಟುಗಳ ತಂದು ಸಾಧಕ
ರನ್ನೆ ಮಾಡಿ ಶಿವಾನುಭವಗಲಿಸುತ್ತೆಯವರಿಂದ ॥
ಅನ್ಯರಿಗೆ ಸದ್ಬೋಧ ಕಾಯಕ
ವನ್ನೇ ಮಾಡಿಸುವಂಥ ಕಾರ್ಯದು
ಚನ್ನ ಸಮಕ್ಕೈಕೊಂಡ ಕಾಯಕ ಸಾಧು ಜಂಗಮನು ॥ ೫ ॥

ಪ್ರತಿಫಲಾಪೇಕ್ಷಿಸದ ಬೋಧಕ
ಗತಿಯ ಪ್ರೇಮದ ಭಾವಪೂರ್ಣನು
ಜೊತೆ ವಿಲಕ್ಷಣ ಪಾಠದೊಳು ನಸುಕೋಪ ಭೂಷಿತನು ॥
ಯತಿಯು ಶೋಭಿಸುತಿರಲು ಹಿಂದಿನ
ಗತಿಯ ಋಷಿಗಳ ಗುರುಕುಲಗಳಾ
ಸ್ಮೃತಿಗೆ ತರುವಂತಿದ್ದಿತಿದು ಕ್ರಮ ಸಂಸ್ಕೃತಿಯ ಸಾರ ॥ ೬ ॥

ದುರಿತ ಫಲ ಕೊಡುವಂಥ ಕರ್ಮದ
ಗುರಿಯು ಬಿಟ್ಟಿರಬೇಕು ಎಂಬುವ
ಪರಮ ಬುದ್ಧನ ದಮ್ಮಪದ ನುಡಿ* ಮಾರ್ಗದರ್ಶನವು ॥
ಸರಿಯೆ ಬಸವನ ತತ್ವ ಸಮತೆಯು
ಗುರಿಯು ಪಿಡಿದ ಪ್ರಸಾದ ಪೂರ್ಣನ
ಸಿರಿಯು ಸತ್ಕೃತಿಗಿದುವೆ ಸತ್ಫಲ ಪೂರ್ಣವಾಗಿಹುದು ॥ ೭ ॥

ಅನ್ಯಲೋಕಕೆ ಹೋದರೂ ಪ್ರತಿ
ಯನ್ಯ ಸ್ಥಾನಕೆ ಜನುಮ ತಪ್ಪದು
ಮಾನ್ಯ ಲೋಕಾಚೆಯದ ಸ್ಥಿರಫಲವಿಲ್ಲಿಯಡಗಿರಲು ॥
ಖಿನ್ನ ಪಂಡಿತರೆನಿಸಿಕೊಂಡಿಹ
ರನ್ಯ ಮೂಢಾಂಧರನು† ತೊರೆದ ಸು
ಧನ್ಯ ಜಂಗಮಲೋಕ ಗುರುಕುಲಗರಿಮೆಗೊಂಡಿಹುದು ॥ ೮ ॥

* ಪಾಲಿ. † ಮುಂಡಕ ೧।೨।೮.

ಹಾವು ಪರೆಯಂ ಕಳಚಿಕೊಳ್ವಂ
ತೋವಿ ತತ್ವಕೆ ಬದ್ಧಸೌಮ್ಯರು
ದೇವಮಯ ಸರ್ವಜ್ಞ ಮಹತರ ಸರ್ವವಿದನಡಿ§ಯೆ ॥
ಯಾವ ನಿಜ ತನ್ನಿಂದ ತಾನೇ
ತೀವಿ ಬೆಳಗುತ ತೋರ್ಪುತಿಹ ಸನು
ಭಾವಿ ಜಂಗಮ ಜ್ಯೋತಿಗದು ‡ ಚಿಜ್ಯೋತಿ ಗುರುಕುಲಕೆ ॥ ೯ ॥

ಮನೆಗಮಂಗಳವಾದರೇನದು
ಮನವ ಮಂಗಳ ಮಾಡಿಕೊಳ್ಳಲು
ಘನತೆ ಗಂಗಾ ಜ್ಞಾನ ಸ್ನಾನದಿ ತುಂಗೆ ಪಾನಕ್ಕೆ ॥
ತನಿಯದೆಡೆ ಸತ್ಯಾರ್ಥಿ ಸಂಪತಿ
ಗುಣಿಸುತಂ ಪ್ರಸ್ಥಾನಕದು ಪ್ರೇ
ರಣೆಯು ಪ್ರಾತಃಸ್ಮರಣೆಯುದ ಪ್ರಾಚಾರ್ಯನೆಡೆ ನೈಜ ॥ ೧೦ ॥

ಶೀಲಸಹನೆಚ್ಚಂತೆ ಪೂರ್ಣ ವಿ
ಶಾಲ ಗತಿ ಸಂತುಷ್ಟಿ ಧೀರನು
ಕಾಲ ಸೀಮಿಲ್ಲದೆ ಪ್ರಕಾಶಿಸುವಂಥ ಸ್ವಯಪದದಿ ॥
ಕಾಲಕಳೆಯುವ ಛಾತ್ರವರ ವಿ
ದ್ಯಾಲಯದಿ ಶೋಭಿಸಿದರೈ ಸುಧೆ
ಶೀಲ ಗುರುವರ ಧೀರ ಜಂಗಮ ಪಾದಪ್ರಿಯರಿಲ್ಲಿ ॥ ೧೧ ॥

ತುಂಬಿದಂತೆ ನಿಶಬ್ದ ಕುಂಭದು
ದಂಬು ಗತಿ ನಿರಿ ದೃಷ್ಟಿ ಸೂಕ್ಷ್ಮದು
ಹೊಂದಿರುವ ಶಿವಯೋಗಿಯಾತ್ಮರತಿಃ * ಕ್ರಿಯಾವಂತ ॥
ತುಂಬ ಪ್ರಖ್ಯಾತಾದವನ ಬಳಿ
ಹೊಂಬೆಳಗಿ ಮುಂಡಕದ ನುಡಿಯೋಲ್ †
ನಂಬಿಯಾತ್ಮ ಜ್ಞಾನಿಯಂ ಪೂಜಿಸಲು ಬೇಕೆಂಬ ॥ ೧೨ ॥

ಶ್ರದ್ಧೆ ಭಿಕ್ಷಾವೃತ್ತಿ ತಪಸಹ
ಬದ್ಧ ವಿರತಗೆ ಇರದು ಭಯವದು
ಶುದ್ಧ ವಿದ್ಯಾ ಸಾಧ್ಯವಪ್ಪುದು ಕ್ರಮದಿ ಸಂಪದವು ॥
ಶುದ್ಧ ಶ್ರೋತ್ರಿಯ § ಸ್ಥಲದ ನಿಷ್ಠೆಯೊ
ಳೆದ್ದ ಪರತರ ಚನ್ನವೀರನ
ಶುದ್ಧ ಪದದಡಿ ಬರುತಿರುವ ವಟು ಶರಣ ಜಂಗಮರು ॥ ೧೩ ॥

§ ಅದೇ ೨/೨/೭, ‡ ಅದೇ ೨/೨/೧೦, * ಮುಂಡಕಉ೩/೧/೪, † ಅದೇ ೩/೧/೧೦, § ಅದೇ ೧/೨/೧೩

ಚಿತ್ರ ಫಲದೆಡೆ ಹೋದರೂ ರಸ
ಮಾತ್ರ ತೃಪ್ತಿಯು ಸಾಧ್ಯವಾಗದು
ನೇತ್ರ ಪ್ರಜ್ವಲ ಪಣತಿಯೆಡೆ ಗತಿಸಿರಲು ಮತ್ತೊಂದು ॥
ಪಾತ್ರತೆಯ ಪ್ರಭೆಯಂತೆ ಬೆಳಗಲು
ಮಾತ್ರ ಶಮೆದಮೆ ಶಾಂತಿ ಸಾಧಕ
ಛಾತ್ರ ಶರಣತರಂಗ ಸಂಗಮ ಸ್ವಾಮಿ ಚರಣೆಡೆ ॥ ೧೪ ॥

ರನ್ನ ಕಣ ಹೊರಟಂತೆ ಹರ್ಷದ
ಸನ್ನಿಧಾನಕೆ ಗಣ ಸುಲಕ್ಷಣ
ರನ್ನೆ ಚುಂಬಕದೋಲು ಸೆಳೆಯಿತು ಪ್ರಣವ ಪುರುಷರಡಿ ॥
ಚನ್ನ ಗುರು ಸಂತಾನ ರುಚಿ ಸಂ
ಪನ್ನವಲ್ಲರಿ ಶಿಷ್ಯ ಪ್ರತ್ಯು
ತ್ಪನ್ನ ಮತಿ ಶರಣಾರ್ಥಿಸಾಧಕರಾಗಮನಲಹರಿ ॥ ೧೫ ॥

ನಿತ್ಯ ಸಮ್ಯಜ್ಞಾನ ಘನತಪ
ನಿತ್ಯ ನಿರುಪಮ ಬ್ರಹ್ಮಚರ್ಯಾದಿ
ನಿತ್ಯ ಹೃದಯಾಕಾಶದೊಳು ಚಿದ್ಭಾವಲಿಂಗವನು ॥
ಸತ್ಯವಿದನೇ ನೋಡುತಿಹ ತತ್
ತಥ್ಯದಾ ಶಿವಯೋಗಿ ತತ್ಸಮ
ತೃಪ್ತಿಹೊಂದಲು ಬರುತಿಹರು ಸನ್ಮತಿ ನಕ್ಷೆ ಲಕ್ಷಿಡಿದು ॥ ೧೬ ॥

ಒಂದಳಿಯೆ ಮತ್ತೊಂದು ಸುಲಭದು
ಹೊಂದಿ ಹರ್ಷದ ಗಂಧ ಸರ್ವೆಡೆ
ವೃಂದದೊಳು ಸುಳಿದಾಗ ಸೌಖ್ಯದು ನಿಸ್ತರಂಗತೆಯ ॥
ಹೊಂಧಿಯಂತ;ಭೂರ್ತ ಸ್ಥಿತಿಯಾ
ನಂದ ಸದ್ಗುರುವಿನ ಗುರುಕುಲಕೆ
ಬಂದರೈ ಹೊರವೃತ್ತಿಯಳಿದಾ ಗಹನಗುಹೆಗವರು ॥ ೧೭ ॥

ಚಿತ್ತ ಶುದ್ಧಾಗಿರಲು ಸಾಧನೆ
ಸತ್ಪುರುಷದೊಲುಮೆಗೆ ಸಹಾಯಕ
ಮತ್ತೆ ತತ್ಸುಖ ತನಗೆ ಗುಹ್ಯದಿ ಕಂಡು ಕುಣಿಯುದಕೆ ॥
ನತ್ತು ಮಾಡಲು ಕೊಟ್ಟಿರುವ ಸ್ಥಲ
ದತ್ತವಳು ಗತಿಯಂತೆ ಯುತ್ಸುಕ
ರಿತ್ತ ಮಧುರಸಮೇತ ಸತ್ವ ಪರೀಕ್ಷೆಗದು ಬಾಗಿ ॥ ೧೮ ॥

ನೀರು ಗುಳ್ಳೆಯು ಒಡೆದು ನೀರೊಳು
ನೀರು ನೀರಾದಂತೆ ನೀರಜ
ನೀರ ಸ್ಥಿತಿಯೊಳು ಗೂಢತೆಯ ರಸತತ್ವತಕ್ಕಂತೆ ॥
ನೀರವದ ವಿದ್ಯಾ ಪ್ರಭಾವದ
ಧಾರೆಯೆಡೆಗೆ ಮುಮುಕ್ಷು ಲೌಕಿಕ
ಮೀರಿ ಸೀಮೆಯ ದಾಟಿ ವಿಜಯೋತ್ಸವಕೆ ನಿರ್ಬಂಧ ॥ ೧೯ ॥

ಪರಮ ಪೂರ್ಣ ಪ್ರಸಾದವೆನಿಕುಂ
ವಿರತಿ ಬಲಿಯದೆ ಲಭ್ಯವಾಗದು
ದೊರೆಯದೈ ಬಲಹೀನ*ನಿಗೆ ಬಲು ಮರೆವ ಮನುಜನಿಗೆ ||
ಪರಿಭರಿತ ಸುವಿಚಾರಿಗದು ನಿಜ
ದಿರವನರಿಯಲು ಸರಳವೆಂದೇ
ಬರುತಿಹರು ಲಿಂಗಾಂಗ ಸಮರಸ ಜ್ಞಾನತೃಪ್ತರಡಿ || ೨೦ ||

ತಾನೆ ಸಾಗರನಾಗಿ ತೋಲಿರ
ಲೇನು ಶರ ಶರಣಾಂಗ ಪಿಡಿದಿಹ
ಸಾನುಮತಿಯ ಮುಮುಕ್ಷುಗಳ ತೆರೆಯಂತೆ ತಾವೆದ್ದು ||
ತಾನೆಯದರೊಳುವಡಗುವಂತೆಯೆ
ಭಾನು ಭೂತಿಯ ಭಾಷೆ ಭಾವವ
ಕಾಣುದಕೆ ಬರುತಿಹರು ಅನುಭವ ಲಾಲಸೆಯ ಪಿಡಿದು || ೨೧ ||

ಪುಸ್ತಕಾಧಾರಾಗಿ ಸಾಗದ
ಮಸ್ತಕಾಶ್ರಯ ಪಡೆದ ಸುಜ್ಞಾ
ನಾಸ್ತಿಯಂ ಗಳಿಸುವದಕೆ ಯಾರೂ ಕಸಿದುಕೊಳ್ಳದಿಹ ||
ಸ್ವಸ್ಥಿ ಸುಖದ ವಿಹಾರ ಮಾಡುವ
ದಾಸ್ತಿಯದು ಸರಳಲ್ಲ ಚಂಚಲ
ದಾಸ್ತಿ ಸ.ಟ್ಟ ವಿಶಾಲ ಶರಣರ ಚಿತ್ತ ಚಿರದತ್ತ || ೨೨ ||

ಪರಮ ಪರತರ ಭಾವಲಿಂಗದಿ
ಬೆರೆತು ಶೋಕವ ದಾಂಟಿ ಪಾಪದ
ಪರದೆಯಂ ಹರಿದೊಗೆದು ಚಿರದಾನಂದ ಹೊಂದುದಕೆ ||
ಪರತರದ ಚಿತ್ಕಳೆಯ ಸುಖರಸಿ
ಗರಸ ತಾಂ ತಾನಾದ ಚಿಸ್ಮುಖಿ
ಹಿರಿಮೆ ನಂಜೇಶಾತ್ಮಜರು ಗುರುಕುಲಕೆ ಬರುತಿಹರು || ೨೩ ||

* ಮುಂಡಕ ೩/೨/೪.

ತ್ಯಾಗಿಯಾದವಗಾವದೇಶದು
ಯೋಗ ವಿರಲದುವದುವೆ ಶಿವಗಿರಿ
ಭಾಗ ಭಾಗಿಸದಂಥ ಸಂಖ್ಯಾಯೋಗ ಶೂನ್ಯಾಂಗ ||
ಯೋಗಿ ತಾವಾಗುದಕೆ ಮೇಣದು
ರಾಗವಿತಲೇನ್ ಭೋಗವಲ್ಲದ
ಯೋಗ ಕುಲಪತಿಯೆಡೆಗೆ ಜಾಗ್ರತ*-ಸೂತ್ರಸ್ಮರಣೆಡಿದು || ೨೪ ||

ಲಿಂಗಕದು ಸಂಬಂಧ ತಾನೇ
ರಂಗದಂಗದಿ ತಿಳಿವ ಶರಣಗೆ
ಲಿಂಗ ವಿದ್ಯಾ ಬೋಧ ಸಮುಚಿತವೆಂದು ತಿಳಿದ ಗುರು ||
ಸಂಗಿಗಳ ಸಂಗತಿಯು ಪ್ರತ್ಯ
ಕ್ಷಾಂಗವೆಲ್ಲವನರಿತು ತಿದ್ದುವ
ಮಂಗಲಾತ್ಮನ ನಿಲುಮೆಯನು ಮಾನಿಸದ ಸ್ಥಿತಿಬಿಂಬ || ೨೫ ||

ಮಾನ್ಯರಿಗೆ ಸಂಬಂಧ ತಾನೆಂ
ದೆನ್ನುವದೆ ನಿಜ ನಿಷ್ಠೆವಿರದಿರೆ
ಧನ್ಯ ಚೇತನಭಾವದಿಂಗಿತ ತಿಳಿಸುತಿಹನೆಂತು ||
ಮನ್ನಿತ ಕ್ರಿಯಾವಂತ†-ಮತಿ ಸೌ
ಜನ್ಯರಿಗೆ ಬೋಧಿಸುವ ನಿಯಮುವ
ಮನ್ನಿಸುವ ಮಧುವರನು ಸಾಗಿರಲಿವನ ಚರಣದಡಿ || ೨೬ ||

ಪರಿ ತಿಳಿದು ಪ್ರಖ್ಯಾತರಾಗಿಹ
ಶರಣರೊಳು ಮೈಲಾರ ಬಸವನು
ಸರಿಯೆ ಮೈಲಾರ್+ ಬನ್ನಿಮಟ್ಟಿಯ ಚನ್ನರೆಂಬುವರು ||
ಪರಮ ರಾಜಕೋಟೀಶ ಸ್ವಾಮಿಯ
ಕಿರಿಯ ಸಾಧಕ ಶಾಂತವೀರನ
ಚರಣ ಲಕ್ಷಿತನಾಲಮಟ್ಟಿ ಮಹಾಂತಲಿಂಗವಟು || ೨೭ ||

ಬಂದಿರುವ ಸಾಧಕರೊಳಗೆ ನುಡಿ
ಗಂಥ ಧರಿಸಿ ಪ್ರಪೂರ್ಣರಾಗಿಹ
ವೃಂದದೊಳು ಶ್ರೀ ಶಾಂತವೀರನ ಮೇಲಿರುವ ನಜದ ||
ಹೊಂದಿರುವ ಪ್ರೀತಿಯದು ಪಾಠವ
ಮುಂದೆ ಬರುವಭ್ಯಾಸಗಳಿಗಾ
ನಂದಿಸುವ ಕಾರ್ಯವನು ಒಪ್ಪಿಸಿ ಬಿಟ್ಟನಾ ಗುರುವು || ೨೮ ||

---

*ಕಠ-೩/೧೪, †ಮುಂಡಕ ೩/೨/೧೦.
+ ಮೈಲಾರದ ಚನ್ನಪ್ಪನ ಮನೆತನದವರು ಈಗ ದಾವಣಗೇರಿಯಲ್ಲಿ ಇದ್ದು ಶ್ರೀಗಳ ಕೃಪೆಯಿಂದ ಶ್ರೀ [illegible]ಚಾರ್ಯರ ಸೇವಾನುಭವಿಗಳಾಗಿ ಚನ್ನವೀರಪ್ಪ ಮೈಲಾರದವರೆಂದು ಪ್ರಖ್ಯಾತರಾಗಿದ್ದಾರೆ.

ಬಾಲವಟುಗಳಿಗಾಗ ಯೋಗಿಯ
ಮೇಲು ಸಾಧಕರಿಂದ ಪಾಠವ
ಕಾಲಕಾಲದಿ ಹೇಳಿಕೊಡಿಸುವ ಮಾರ್ಗ ಹಾಕಿರಲು ||
ಶೀಲನೀ ಪದ್ಧತಿಯದನುಭವ
ಮೇಲು ಪಡೆಯುತ ಮನನ ಲಾಭ ವಿ
ಶಾಲ ಸೂಕ್ಷ್ಮತೆ ಹೊಂದುದಲ್ಲದೆ ದೃಢತೆಯಾಚಾರ || ೨೯ ||

ನಾಲಿಗೆಯು ತಕ್ಷಣವೆ ರುಚಿ ತಿಳಿ
ವೋಲು ಲೀಲಾಪುರುಷ ಲಾಲಸ
ದಾಲಿಸಲು ಬಂದಿರುವ ಸಾಧಕರಿರವನರಿಯುತಲಿ ||
ಬಾಲವಟುಗಳಿಗಾಗ ಕೃತಿ ತ
ತ್ಕಾಲದರ್ಶಕನಾಗುತಂ ಕರು
ಣಾಲಯದಿ ಸುವಿಚಾರ ವಿಧಿನುಸಾರದಾಚಾರ || ೩೦ ||

ಬೆಳಗು ಪ್ರಾತಃ ಕಾಲಪ್ರಾರ್ಥನೆ
ಯೊಳಗೆಯೀರ್ವರು ಕೂಡ್ರುತಾಸನ
ದೊಳಗೆ ಸ್ವರ ಎತ್ತೆತ್ತಿ ನೋಡಿದಡತ್ತ ನೀ ದೇವ ||
ಸುಳಿದ ಪದಗತಿ ವಾಣಿ ವೀಣಾ
ಸೆಳೆತ ಜಗದಗಲ ಮುಗಿಲಗಲ
ಚಲುವಚನ ಝೇಂಕಾರ ಸಮಯಾಚಾರ ಗಣಕೆಲ್ಲ || ೩೧ ||

ಶಾಂತವೀರೇಶವರವಟುಗಳಿ
ಗಂತು ತಿಳಿಸುತ ಲಿಂಗಪೂಜೆಯ
ನಿಂತು ತನ್ನ ನಿಪುಣತೆ ಸಹಿತ ಶಿವಾನುಭವಗೋಷ್ಠಿ ||
ಸಂತತಂ ನಡೆಸಿಹುದ ಪರಿ ಶ್ರುತಿ
ಯಂತು ತೈತ್ತರಿ* ನೆನವು ಸಾದೃಶ
ವಿಂತು ಶಿಕ್ಷಾವಲ್ಲಿಯಾ ಸೂಕ್ಷ್ಮತೆಯರಸವಿಲ್ಲಿ || ೩೨ ||

ಇಲ್ಲಿದಕೆ ನಿಜ ಶಿಷ್ಯಗುರುವಿನ
ಸಲ್ಲು ಯೋಗ್ಯತೆ ನಿಯಮ ಸತ್ಯತೆ
ಯುಳ್ಳ ಶೀಲಾರೋಗ್ಯ ಪ್ರಕೃತಿ ಸಾಧಕಗೆಲ್ಲ ಸಹಕಾರ ||
ಎಲ್ಲವಿರೆ ಸಂಧಿಪುದು ವಿದ್ಯಾ
ವಲ್ಲಿಯುಪದೇಶಾಂಗ ಸಂಧಾ
ನಲ್ಲಿ ಶಿಶುವಿಗೆ ಮಾಲೆಯುಣಿಸುವೋಲ್ ಧಾರೆ ಗುರುವಿಂದ || ೩೩ ||

* ೦/೩೦

ಚಾರು ವಿದ್ಯಾದಾನ ಮಾಳ್ಪುದೆ
ವೀರ ಶಿವಯೋಗಿಗಳ ಕಾಯಕ
ಸಾರತರ ಸಚ್ಛಿಷ್ಯನಿಗೆಯರ್ಪಿಸಲುವಾನಂದ ||
ಮೇರು ತನದಿಂದನುಭವಿಸಿ ಸುವಿ
ಚಾರಿ ದೇವರು ಶಾಂತವೀರಗೆ
ದಾರಿ ತೋರಿಸಿದಂತೆ ತೋರಿದನೀತ ವಟುಗಳಿಗೆ || ೩೪ ||

ಪಾರಮಾರ್ಥದ ಜೀವನಕೆ ಸುವಿ
ಚಾರ ಋತಸ್ವಾಧ್ಯಾಯ ಪ್ರವಚನ
ಕಾರಣೆಂಬುದ ತಿಳಿದ ತೀರ್ಥನು ಸ್ವಾನುಭವಪುಷ್ಪ ||
ಹಾರಿಸಲು ಸನ್ನದ್ಧವಿರೆ ಕೈ
ಸಾರಿ ಮುಡಿಯಲು ಬರರು ಲೌಕಿಕ
ಭಾರ ಬೀಸಾಡುತ್ತ ಕಿಂತುರೆ ಬಂದವಟುಗಳೊಳು || ೩೫ ||

ಶುದ್ಧ ಮಹತೆ ಮಹಾಂತ ನೀ ಸದ
ಬದ್ಧನಾಗುತ ನಿಷ್ಠೆಯಿಂದುರೆ
ಗೆದ್ದನೀ ವರಶಾಂತವೀರರ ಮನವ ಸೇವೆಯಲಿ ||
ಶುದ್ಧ ಸತ್ವದ ಗತಿಯಭಾವನೆ
ಬದ್ಧ ನಿಷ್ಠೆ ಶಿವಾರ್ಚನದಿ ಪರಿ
ಶುದ್ಧರಿರುವಿಕೆ ಶರಣರೆಲ್ಲರ ಮನವ ಸೆಳೆಯುತಲಿ || ೩೬ ||

ಕಲಿತು ತೃಪ್ತಿಯೆ ಹೊರಟು ಹಂಸದ
ಕಲೆಯು ಸ್ನಾತಕ ವಟುಗಳಿಗೆ ಕೊನೆ
ಚಲುವ ನುಡಿ-ಗುರುವತಿಥಿ ದೇವೋಭವ* ಸುಧಾವಾಣಿ ||
ನಿಲವ ಪ್ರಭು ಬಸವಣ್ಣನರವಣಿ
ಗೋಲವಿನಿಂ ಬಂದಿಹ ಪ್ರಸಂಗವ
ತಿಳಿಯುತಾಚರಣೆಯೊಳು ಸಾಗಿರಿಯೆಂಬ ವಿಧಿನುಡಿಯು || ೩೭ ||

ತಿಳಿದ ತಿಳಲನು ತಿಳಿಸುತೆಲ್ಲರ
ಕಳೆಯು ಕಲಿಯುತವರಿಸುತಾರ್ಚನೆ
ನಲುಮೆಯಿಂ ಸ್ವಾಧ್ಯಾಯ ಪ್ರವಚನದಿಂದೆ ಸಾಗುವದೆ ||
ಬಲಿಸಿಯಷ್ಟಾವರಣ ಷಟ್‌ಸ್ಥಲ
ದೊಲವು ಪಂಚಾಚಾರದ ನಿಲವ
ನೆಲಿಸುತಂ ಸಾಗಿರಲಿದುವೆ ಗುರುದಕ್ಷಿಣೆಯು ನನಗೆ || ೩೮ ||

* ತೈತ್ತಿ-೧/೧೧

ಸತ್ಯ ಶಿವಸೌಂದರ್ಯದನುಭವ
ಬುತ್ತಿ ಬಿಚ್ಚುತ ಹರಡಿಸದೆ ಬರಿ
ಕತ್ತೆ ಭಾರದ ವೇದ ಪದವಿಗಳೇಕೆ* ಬೇಕೆಂದ ॥
ಚಿತ್ತಜಾಂತಕ ಸಮತೆ ಪೀಠವ
ಹತ್ತಬೇಕೆಂಬಾಸೆಯಿರೆ ಸ
ದ್ವೃತ್ತಿ ಸಾಧಿಸಿರೆನ್ನುವಾ ಗುರುಚನ್ನವೀರೇಶ ॥ ೩೯ ॥

ಬಣ್ಣ ಧರಿಸಿರಲೇನು ಬಣ್ಣದ
ಹಿನ್ನೆಲೆಯು ವೈಶಿಷ್ಟ್ಯವಿರದಿರ
ಲೆನ್ನು ಕಬ್ಬುಣದ ಕಪಿಗೆ ಪರುಷ† ಮುಟ್ಟಿಸಿದ ಬಳಿಕ ॥
ಚಿನ್ನವಾಗಲು ಪೂಜೆಗೊಳ್ಳದು
ಎನ್ನುವಾ ಸಂಪನ್ನ ಸೂಕ್ತಿಗ
ಳನ್ನೆ ವಟುಸಹ ದೇವರೆಲ್ಲರು ಗ್ರಹಿಸಿರೆಂದೆನುತ ॥ ೪೦ ॥

ಒಳಗೆ ಹಂಬಲ ಹೊಲಸು ಬಾಹ್ಯದಿ
ತಿಳಿಯ ಬಣ್ಣದ ಬಟ್ಟೆ ಬೆಳಕದು
ಒಳಸಣಬು–ಮೈಲಾರದೇವರ§ ಸಮತೆ ಸರಿಬರದು ॥
ಫಲದ ಪಕ್ವತೆ ರಂಗ ಹೊರಗಿರ
ಲೊಳಗೆ ಪೂರ್ಣತೆಗೊಂಡು ಹೊರಗಡೆ
ಬೆಳಗುವೊಲು ಸ್ಥಿತಿಯೊಪ್ಪ ಸ್ವಾಮಿಗಳಾಗಿ ಸಾಗೆಂದ ॥ ೪೧ ॥

ಹುಲಿಯ ವೇಷವ ತೊಟ್ಟು ತೋಟದಿ
ಕುಲುಕುಲನೆ ಕೂಗಲ್ಕೆ ಗಾರ್ಧಭ
ಸೆಳೆತ ಬಾರುಂಡಂತೆ ಎಂದಿಗು ಬರದಗತಿಯಿರಲಿ ॥
ಚಲುವ ಕಾವಿಯ ಬಣ್ಣವೆನ್ನದೆ
ಕುಲುಮೆಯುದ ಕಿಡಿಯೆಂದು ಮನ್ನಿಸು
ತೊಲುಮೆಯಿಂ ಧರಿಸೆನ್ನ ಚನ್ನನ ಪಂಥ ಪ್ರಜ್ಞಾನ ॥ ೪೨ ॥

ಆ ಮಹಾ ಮನೆಯೇನು ಗುರುಕುಲ
ದೀ ಮಹಾ ಮುನಿಭಾನು ಸನ್ಮತ
ದಾ ಮಹಾರುಚಿ ಚನ್ನಗವ ಸಮುಸದ್ರುಸತೆವೇನು ॥
ಶ್ರೀ ಮಹಾಂತ ಪ್ರಶಾಂತ ದೃಷ್ಟಿಯ
ದಾ ಮಹಾಮತಿ ನೆನಪು ನಿಜದಿಹು
ದೀ ಮಹಾನತೆಯೆನ್ನಿ ಮತ್ತಿನ್ನೇನು ಮಾತೇನು ? ॥ ೪೩ ॥

---

* ಬ. ವ. ೯೪ † ಬ. ವ. ೫೯೮,೬೧೧ § ಚ. ಬ. ವ. ೨೮೦

ಕರಜ ನಟುಗಳ ವರೆಗೆ ಹಚ್ಚುವ
ವರ ವಿಮರ್ಶಕ ವೇದಿ ವಿವರಾ
ಧರಿಸಿ ಸ್ವತಂತ್ರ ಸುವಿಚಾರಿಗಳಾಗಿಸುತ್ತವರ ॥
ಮರೆಯ ಮಧುವನ ಮಧು ಮಹಾಮನ
ವಿರವಿರನೆ ಮಾರ್ಪಾಟು ಮಾಡುತ
ಮೆರೆದನಾ ಮಾರ್ಮಿಕನ ಪ್ರಮೋದನು ಪಥ ಚಿರಂತನದಿ ॥ ೪೪ ॥

ಮೋದ ಬೀಳ್ಕೊಡುವಿಕೆಯ ಪದ್ಧತಿ
ವೇದವಲ್ಲಭ ಚನ್ನವೀರನ
ವೇದನುಡಿ ತಾನಿಡಿದು ಮಾಡಿದ ಶಾಂತವೀರೇಶ ॥
ಆದ ಸೇವೆಯ ಹೇಳಿಕೊಳ್ಳದೆ
ಮೋದದಿರೆ ಗುರು ಕೃಪೆಯ ಹೊಂದಿಸು
ನಾದದಿರಲು ಮಹಾಂತ ಲೀಲೆಯ ಮುಂದೆಯ್ಯಾಲಿಪುದು ॥ ೪೫ ॥

ಶುದ್ಧವಹುದಂಕಲಗಿಯಡವೀ
ಸಿದ್ಧ ಚರಣಾಶ್ರಯದಿ ಸ್ಥಾಪಿಸ
ಲೆದ್ದ ಪುರ ಮರೆಗುದ್ದಿ ಮಠವಿದು ಅಡವಿಸಿದ್ಧೇಶ ॥
ಬದ್ದಿಡಕೆ ಗುರುವಂಶದೊಳು ಕ್ರಮ
ಬದ್ಧ ಗುರು ಗುರುಪಾದ ಕೃಪೆಯಿಂ
ದೆದ್ದ ಗುರು ನಿರುಪಾಧಿ ಕೃತಿಯೋಳ್ ಆರನೆಯ ಸ್ಥಲವು ॥ ೪೬ ॥

ಅಂತೂ ೬ಕ್ಕಂ ಪದ ೪೬ಕ್ಕಂ ಒಟ್ಟು ಪದ
೨೬೪ ಕ್ಕಂ ಮಂಗಲಂ

ಓಂ

## ಏಳನೆಯ ಸ್ಥಲ

ಸೂಚನೆ-

ಚನ್ನವೀರಾಶ್ರಮದಿ ಕಲಿಯುತ
ಧನ್ಯಪುರ ಮುಳಗುಂದದೊಳು ಸಂ
ಪನ್ನನಾಗುವ ಮಹ ಮಹಾಂತನ ಲೀಲೆಯಾಲಿಪುದು ॥

ಹಂಪೆಯಾ ಮಾಯ್ದೇವ ಗುರುಗಳ
ಯಿಂಪು ಶ್ರೀ ಸಚ್ಛಿಷ್ಯವರಮತಿ
ಕಂಪು ಸೂಸುವ ರಗಳೆ ರಾಜ ಕವೀಶ ಕೃತಿ ಕುಲಕೆ ॥
ಕಂಪನತೆಯೆನಿತಿರದ ಭಕ್ತಿಯ
ಸೊಂಪು ಶಬ್ದ ಪ್ರಸಾದದಿಂ ಬಹು
ಗಾಂಪರಿಗೆ ಕರುಣಿಸಿದ ಹರಿಹರ* ದೃಷ್ಟಿ ನನಗಿರಲಿ ॥ ೧ ॥

ತನ್ನೊಳಿರುವ ವಿಶಾಲ ವಿದ್ಯೆಗೆ
ಮಾನ್ಯ ಬರಬೇಕೆನುವದಾದರೆ
ಸನ್ನಿಧಿಗೆ ನಿಜ ಬ್ರಹ್ಮಚಾರಿಗಳಾಗ ಬರಲಾಗ ॥
ತನ್ನನೇ ಬಹುಧನ್ಯ ತಿಳಿಯುವ
ಚನ್ನ ನುಣಿಸಲು ಸಿದ್ಧನಾದರೆ
ಚಿನ್ನಗುಣಿಬೇಕಲ್ಲೆ ತಾಯಿಗೆ ಶಿಶುಉಣಲು ತೃಪ್ತಿ ॥ ೨ ॥

ವಿವಿಧ ದಿಶೆಯಿಂ ಬ್ರಹ್ಮಚಾರಿಯು†
ಸವಿಧಿಯೊಳು ಬರಲೆಂದು ಶಮೆದವೆ
ಯವಧಿಯಲ್ಲದ ರೀತಿ ಸಾಧಿಸಲೆಂಬ ಭಾವದಲಿ ॥
ಅವಧಿಯಿರದದ ಚಿಂತನಿವನ ನಿ
ರವಧಿಯಿಂ ಭಾವಾಂಗದೊಳು ಸ್ವರ
ತವಕದಿಂದವಲೋಕನದಿ ರಸಯೋಗಿ ಸಾಗಿರಲು ॥ ೩ ॥

---

* ಶ, ಚರಿತಾಮೃತ–ಪುಟ ೫೩೪

† ತೈತ್ತರೀಯ- ೧/೪

ಇದು ರುಚಿಯೆ ಲಿಂಗಾರ್ಚನದ ನೇ
ಮದು ನಡೆದುದು ಸಮಾಜ ಚಿಂತನೆ
ಯಿದುವೆ ಗೋರಪ್ಪಗಳ ಚಕಿತಾಟಗಳ ಪರಿಹಾರ ‖
ಇದಕೆ ಸಂಚಾರದೊಳಗಿರುತಿರ
ಲದರ ಪ್ರತಿ ತಿಳಿಸುತದು ವಟುಗಳ
ಸದರದಿಂ ಶೋಧಿಸುತೆ ಸಾಗುತೆ ಕರೆಯ ತರುತಿರ್ದ ॥ ೪ ॥

ಸಲ್ಲುವಿದ್ಯಾ ಬೋಧ ಒಪ್ಪಿಸು
ತಲ್ಲಿ ಹಿರಿಸಾಧಕಗೆ ಛಾತ್ರರ
ನೆಲ್ಲ ಸ್ಪರ್ಶಜ್ಞಾನ ತಿಳಿಮೆಯದಂತೆ ತಕ್ಷಣದಿ ‖
ಎಲ್ಲ ತಿಳಿಯುತ ಬೋಧಿಸುವ ಕೃತಿ
ಯಲ್ಲಿ ಬಂದಿಹುದೆಲ್ಲ ಕೊಡುತಿರ
ಲಲ್ಲಿ ಕ್ರಮದಲ್ಲಲ್ಲಿ ಸರ್ವಪರೀಕ್ಷಿಸುತನಲ್ಲಿ ॥ ೫ ॥

ಈ ತೆರದ ಕೃತಿಯಿರಲು ಪದ್ಧತಿ
ನೀತಿಯಿಂ ವ್ಯಕ್ತಿತ್ವ ತಿಳಿಸುವ
ಜ್ಯೋತಿ ಲಕ್ಷಿತ ಚಿತ್ತ ಶುದ್ಧದ ಸಾಧಕರ ದಾರಿ ‖
ಖ್ಯಾತಮತಿಯುತ ಚನ್ನವೀರನು
ಆತುರದಿ ಕಾಯುವನು ಲೌಕಿಕ
ರೀತಿ ಬಾಂಧವರನ್ನೆ ನೋಳ್ಪಾ ಸ್ವಾಮಿಯಂತಲ್ಲ ॥ ೬ ॥

ಮಾನನಿಧಿ ಚಿಂತನೆಯು ಚಿರ ಸ
ಮ್ಮಾನ ಶರಣರ ರಚನ ವಾರಿಧಿ
ಗಾನ ವಿದ್ಯಾದಾನ ಲಕ್ಷಿತನೇಮ ಪ್ರಭುವಚನ ‖
ತಾನೆ ನಮಿಸುತೆ ಕರೆದು ಶಿಕ್ಷಣ
ತಾನೊರೆವುದೆ ಮಹಾಪ್ರಸಾದ* ವಿ
ಧಾನ ಕಲಿಯುಗದೊಳಗದೆಂದನುಭಾವಿಯವನಿರಲು ॥ ೭ ॥

ಆಲಮಟ್ಟಿಯ ಹಿರಿಯ ಮಠವಾ
ಶೀಲ ದಂಪತಿಯನ್ನಪೂರ್ಣಾ
ಲೋಲ ಜಂಗಮ ಚನ್ನಮಲ್ಲಾರ್ಯರಿಗೆ ಒಂದು ದಿನ† ‖
ಲೀಲೆಯ ಮಹಂತೇಶನಿಂ ಕರು
ಣಾಲಯದಿ ಕೃಪೆಯಾದ ಶಿಶುವಿಗೆ
ಲೋಲದಿಂದೆ ಮಹಾಂತಲಿಂಗೇಶೆಂದು ಕರೆಯುತಲಿ ॥ ೮ ॥

---

*ಅಲ್ಲಮ– [illegible]

†ಕೆ ೧೭೪೫ ಶ್ರಾವಣ ಕಡೇ ಸೋಮವಾರ–ಬಾ. ಲೀ. ಮ. ಪುರಾಣ ೩/೪೫–೬೦

ಪಾಲನದಿ ಲೀಲೆಯೊಳು ಗತಿ ಬಳಿ
ಕೇಳನೆಯ ವರ್ಷದೊಳು ಗುರುಕುಲ-
ಕಾಲಯುವ ತೊರೆದೆದ್ದು ಹೊರಟನು ವಿರತಿಯಿಂದವನು ||
ವೇಳೆ ಕಳೆಯದೆ ದಾಟಿದಂ ಮನ
ಮೇಲು ಮಂಜುಳ ಮಧುರ ಮಾಯೆ ವಿ
ಶಾಲನಿಗೆ ಮಟಮಾಯು ಮನೆ ಮೋಹಕತೆಗೆ ವಿದಾಯ || ೯ ||

ತನ್ನ ಮರೆದಡೆ ಮಾಯೆ ಅರಿದೊಡೆ
ಧನ್ಯ ಮನ್ಯತೆ ಶ್ರೇಯ ಶುದ್ಧತೆ
ಹೊನ್ನು ತಾನಾಗಿರಲು ವಿನ್ನುಳಿದುದನು ತೊರೆಯೆಂಬ ||
ಹಣ್ಣು ಗಿಡ ತೊರೆದಂತೆ ನಾವಿಕ
ನಣ್ಣ ಕೃತಿಗತಿಯಂತೆ ಹೊರಟಿಹು
ದೆನ್ನಿ ಶೋಧನೆಯಾತ್ರೆ ಸಾಧಿಸಿ ತಣಿಯುವಾ ಜಾತ್ರೆ || ೧೦ ||

ತಲೆಗೆ ಕಿವಿ ಟೊಪ್ಪಿಗೆಯ ಮಣಿಸರ
ಪೊಳೆವ ಕಾವಿಯವಸ್ತ್ರ ಭೂಷಿತ
ತಿಳಿವು ಪೊಸಕೌಪೀನ ತಂಬಿಗೆ ಭಸ್ಮ ಭೂಷಿತನು ||
ಒಲುಮೆ ಗೋಸಲ ಚನ್ನಬಸವನ
ಕಳೆ ಸುಶೋಭಿತ ಸುಧೆಯ ಮಾಧುರಿ
ಬಲಿತ ಕಾನನವೆಲ್ಲ ಭೂಷಿತ ವಟುಗಮನದಿಂದ || ೧೧ ||

ಕೊಟ್ಟ ಕರಿಯಂ ಏಡಲಾರದೆ
ಪುಟ್ಟ ಕುರಿಯಂ ನೋಡುವವರಿಗೆ
ದಿಟ್ಟರೆಂದೆನ್ನುವರಾರೈ ಬರಿಯಡಿಗೆಮನೆಯ ||
ಭಟ್ಟನಾ ಸಮ ಜೀವಿ ನಿಜತವ
ಗಟ್ಟಿ ಗುರಿಯುದ್ದೇಶ ಸರಳದಿ
ಮುಟ್ಟ ಸಾಧಿಸಲಾರ ದೃಢ ನಿಶ್ಚಿಂತನಿಗೆ ಸುಲಭ || ೧೨ ||

ಹಳ್ಳಿ ಕೆರೆ ನದಿ ದಾಟಿ ಸಾಗಿರ
ಲಲ್ಲಿ ಕಾಣುತನಲ್ಲಿ ಭಂಡರ
ಗಲ್ಲಿ ಇರದಲ್ಲಲ್ಲಿ ಕೇಳುತ ಶರಣರೆಲ್ಲೆಲ್ಲಿ ||
ಹಳ್ಳಿಯೊಳಗಿರಲಲ್ಲಿ ತಿಳಿದನು
ಯೊಳ್ಳೆಯುಪದೇಶಿಕನು ತಾತ್ವಿಕ
ನುಳ್ಳ ವಾಚಸ್ಪತಿಯು ನಿರುಪಮ ಚನ್ನವೀರೇಶ್ವರನ || ೧೩ ||

ಸುಳಿವಿಡಿದು ಬಂದಾಗನುತ್ಸುಕ
ಲಲಿತ ಶಿಶು ರುಚಿಯಂತೆ ಮಂದದಿ
ಸುಳಿವ ತುಂತುರ ಪವನ ಪುಷ್ಪದ ಗಂಧರಸದೊಳಗೆ ||
ಸುಳಿಗೆ ಸುಂಯ್ ಭ್ರಮರಂತೆ ಸಾತ್ವಿಕ
ಸುಳಿದ, ಪೂರ್ವದ ವೃಂದ ಶಿಷ್ಯರ
ನಿಲವ ಸೆಳವಿಗೆ ಲಿಂಗನಾಯ್ಕನ ಹಳ್ಳಿ ಮಠದೊಳಗೆ || ೧೪ ||

ಭೂಷಿತೋನ್ನತ ಪೀಠ ಪಂಥನು
ಘೋಷಿತನು ಸತ್ಕಲೆ ಪದಾಶ್ರಿತ
ಪೋಷಿಪನು ಚರ ಚನ್ನವೀರ ರಸೇಂದ್ರ ಸಚ್ಛಿಷ್ಯಾ ||
ಭೂಷಿತನು ಇರುವಾಗ್ಗೆ ವಟು ಸ್ವರ
ಘೋಷಿಸುತೆ ಕೈ ಮುಗಿದು ಶೋಭಿತ
ಭಾಷೆಯಿಂ ತನ್ನಿರವ ಬೇಡಿಕೆಯಿಂತು ಇಡುತಿಹನು || ೧೫ ||

ಚಾರುವರ ಗುರು ವೀರಶೈವಾ
ಚಾರ ಆಕರ ತತ್ವರಸಕಾ
ಧಾರ ಶ್ರೀಕರ ದುರುಳರಿಗೆ ಮಹಘೋರ ಮೂರುತಿಯೆ ||
ಮೇರು ಶ್ರುತಿ ಸ್ಮೃತಿ ವಚನವಾಗಮ
ಭಾರಿ ನೀನೆ ಪೂರ್ಣ ಸರ್ವದ
ಸಾರ ಸದ್ಗುರುವೆಂದು ಕೇಳುತ ಬಂದೆ ನಿನ್ನಡಿಗೆ || ೧೬ ||

ಎಲ್ಲ ದೈವದಕಿಂತ ಘನತರ
ಬಲ್ಲವನು ನೀನೆಂದು ನೈಜತೆ
ಗೆಲ್ಲ ಪರವಾಗಿರ್ದು ಸಹಜತೆಯ ಚರಿತಾರ್ಥವರ ||
ಸಲ್ಲು ನೀನೊಲಿದ ಶರಣರ ಸಮ
ವಿಲ್ಲವದು ದಿಟವೆಂದು ನಂಬುತ
ವಿಲ್ಲಿ ಬಂದೆನು ಕಿರಿಯಮಗನಿವನೆಂದು ಕೃಪೆಯಾಗು || ೧೭ ||

ಉಪ್ಪು ನೆಲ್ಲಿಯುಗೂಡಿ ರಸರುಚಿ
ಯೊಪ್ಪುವಂತೆಯೆ ಕಂದ ನೀನೆಂ
ದಪ್ಪಿ ಬಸವಾದಿ ಪ್ರಮಥರ ಪಥಕೆನ್ನ ತಿಳಿದಿರಿಸು ||
ಕಪ್ಪು ಶಶಿಯೊಳು ಕಾಣುತಿರಲವ
ನಪ್ಪಿ ಕೊಂಡಿರುವಂತೆ ಬರಸೆಳೆ
ದಪ್ಪಿ ಮುದ್ದಿಸು ಕಂದನಿವನೆಂದಪ್ಪಿ ಕೃಪೆಯಾಗು || ೧೮ ||

ತಥ್ಯ ಮಿಥ್ಯವನಳಿದ ನಿಲವಿನ
ಸತ್ಯ ಶರಣರ ಚರಣ ತೀರ್ಥದಿ
ಭೃತ್ಯ ನೀನಾಗೆಂದು ಮನ್ನಿಸಿ ತತ್ವಮೊಲೆಯುಣಿಸು ॥
ಹೆತ್ತುಡಕೆಯಭಿಮಾನ ಬೇಡವೆ
ಪೆತ್ತವನಣುಗನಣುಗನಾ ಪದ
ಭೃತ್ಯನಿವನೆಂದರಿತು ತಾತಾ ಗುರುವೆ ಕೃಪೆಯಾಗು ॥ ೧೯ ॥

ವೀಣೆ ತಾನೇ ನಾಡಕೊಡದದು
ಪಾಣಿಯಿಂದೊಗೆವಂತೆ ನನ್ನುಡಿ
ಜಾಣ ಗುರುವೇ ನುಡಿಸಿದಂತೆಯೆ ನುಡಿಯ ಹೊರಡಿಸಿದೆ ॥
ಸ್ವಾನುಭಾವದ ನೆಲೆಯ ತಿಳಿಯೆನು
ಮಾನನಿಧಿ ತಾನೆಲ್ಲ ಬಲ್ಲನು .
ನೀನೇ ಸುಲಭದಿ ಕರೆದು ಕೃಪೆ ಮಾಡೆನಲು ಗುರುದೇವ ॥ ೨೦ ॥

ಚರಣ ಶರಣಾಗತದ ಶಿಷ್ಯಗೆ
ಮರಳಿ ಸಂಶಯ ಮಂಕುರಿಸದಾ
ಪರಿಯ ನಿಜ ತತ್ವೋಪದೇಶಿಕ ಕೇಳುತಿವನನುಡಿ ॥
ಅರಿಯುತನನಧಿಕಾರ ಸೂಕ್ಷ್ಮದಿ
ಕರೆಯುತಂಜದಿರೆಂದ ಭಯದಿಂ
ಕರವ ಮಸ್ತಕವಿರಿಸಿ ಸದ್ಗುರು ವಿಹಿತನೊಪ್ಪಿರಲು ॥ ೨೧ ॥

ಪರಮ ಚಿದ್ಗುರುವೊಪ್ಪಲಾ ನಿಜ
ಸುರಸ ಸುಸ್ಥಿರ ಬುದ್ಧಿ ಸದ್ಗುಣಿ
ಯುರುದಯಾ ಶುಚಿ ಧೀರ ಭರಿತ ಮಹಾಂತ ಗುಣವಂತ ॥
ಗುರುವೆ ಪರಶಿವನೆಂದು ತಿಳಿಯುತ
ಚಿರ ಚತುರ್ವಿಧ ಸೇವೆ ಪೂರ್ಣನು
ಗುರುವಿನಾಳಿನ ಆಳು ತಾನೆಂದರಿತು ಸಾಗಿದನು ॥ ೨೨ ॥

ಇನ್ನುಳಿದ ಬಳಗದೊಳು ಮನದಿಂ
ದನ್ಯ ತಿಳಿಯದೆ ಹೊಂದುತವರೊಳು
ಸನ್ಮಾನದಿ ಶಿವಧರ್ಮ ತತ್ವಾಚಾರ ಭೂಷಿತನು ॥
ಚನ್ನವೀರನ ಬೋಧದೊಳು ಸಂ
ಪನ್ನ ಸದ್ಭಾವದೊಳು ಪಾತಗ
ಳನ್ನು ಕಲಿತಂ ಪ್ರಮಥರಾ ವಚನಾಂಗ ಸಹಿತಾಗಿ ॥ ೨೩ ॥

ಇನಿತು ಭಾವದಿ ಸಾಗಿರಲು ಘನ
ವಿನಯದಿಂ ಗುರುಚರಣ ಸನ್ನಿಧಿ
ತನಗೆ ಶಿವಪೂಜಾಂಗ ವಿವರವ ತಿಳಿಸಬೇಕೆನಲು ॥
ಮಣಿದು ಭಿನ್ನೈಸಿರುವ ಸ್ಥಿತಿಯಿದು
ಘನತೆ ಗುರುಮಾರ್ಗಿಗಳ ಲಕ್ಷಣ
ಹನಿಸುವದು ಪಯಹಸುವು ಹುಲ್ಲದು ಹನಿಸಲಾರದದು ॥ ೨೪ ॥

ಶ್ರೀಗುರುವಚನದಿಂದಧಿಕ ರಸ
ಯೋಗ ಸುಧೆಸಿಗದೆಂಬ ನಿಜಗುಣಿ
ಯಾಗಮದ ಸೂಕ್ತಿಗಳು ಜಾಗ್ರತವೆಂದು ಘೋಷಿಸಲು ॥
ರಾಗಭಾವನೆಯಡಗುತನುಭವ
ಯೋಗ ಪೇವ ಸ್ವರೂಪನಾಗಲು
ಆಗಮದ ಸ್ಮೃತಿ ಮೂರ್ತಿಗಳ ಸಂಸ್ಕಾರವದುವಿರಲು ॥ ೨೫ ॥

ಕಂದನಾ ನಿಜಭಾವ ಭಯಕಿರ
ಲಂದು ವರಮೂರ್ತಿಗಳು ಬಪ್ಪುತ
ಲಂದು ಶಿಷ್ಯ ಪ್ರಶಾಂತ ವೀರೇಶಂಗೆಯಪ್ಪಣೆಯ ॥
ಆಂದಿಡಲು ಶಿವಲಿಂಗ ಪೂಜಾ
ನಂದವಂ ಸುಜ್ಞಾನವಂ ಕ್ರಮ
ದಿಂದೆ ತಿಳಿಸನೆ ಸೂಕ್ತಿ ಲೋಕಾನುಭವ ಸ್ಮೃತಿಯಂತು ॥ ೨೬ ॥

ತಾನು ಬುಧನಿರಲೇನು ಕುಲಪತಿ
ಭಾನುಮತಿ ವಿದ್ಯಾರ್ಥಿಯಿಂ ಸುವಿ
ಧಾನದಿಂ ಪಾಠವನು ಹೇಳಿಸುವಂತೆ ಚನ್ನವರ ॥
ತಾನಿರಲು ಸರ್ವಾಧಿಕಾರಿಯು
ತಾನೆ ಮಾಡದೆ ತನ್ನ ಶಿಷ್ಯಗೆ
ತಾನೆಯಪ್ಪಣೆ ಮಾಡುತಿಹನೈ ಮಹತೆಗುಣವಿದಿದು ॥ ೨೭ ॥

ತಿಳಿದು ವರಮತಿ ಶಾಂತವೀರನು
ಬಲು ಸಮಾಧಾನದಲಿ ಕರೆಯುತ
ಫಲವರಿಸಿ ಶ್ರೀ ಲಿಂಗಪೂಜಾ ಕ್ರಮದ ಬೋಧನೆಯ ॥
ನಿಲವ ನೇಮವ ರೀತಿ ರಾಗದಿ
ಬಲದ ಗುರುವರ ಚನ್ನವೀರರ
ಲಲಿತ ಸನ್ನಿಧಿವಿಡಿದೆ ಮಾಡುತಲಿರ್ದ ದೀಕ್ಷೆಯನು ॥ ೨೮ ॥

ಇಷ್ಟಲಿಂಗವ ಕರದಿ ಶೋಭಿಸಿ
ಸ್ಪಷ್ಟ ಪೂಜೆಯ ಕ್ರಮವ ತಿಳಿಸುತ
ಶ್ರೇಷ್ಠ ಮನು ಚಿದ್ಬೋಧೆಗೈದಂ ಶಾಂತವೀರವರ ॥
ಅಷ್ಟವಿದದರ್ಶನೆಯ ಸುಮಧುರ ವಿ
ಶಿಷ್ಟದುಪಚಾರಗಳ ಸಹ ಸಂ
ತುಷ್ಟಿಯಿಂ ಧರಿಸಿಯುಗಲದಿರೆಂದಿಷ್ಟಲಿಂಗವನು ॥ ೨೯ ॥

ಪರಮ ಕರುಣದಿ ಗುರುವು ಶಿರದಲಿ
ಕರವನಿಡುತಲಿ ಹರುಷ ಸ್ಪರ್ಶದ
ಪರಿಯು ಲೋಹದವೋಲುವೀತ ಮಹಾಂತಲಿಂಗಮಯ ॥
ಪರಿಯ ಸ್ವಾತ್ಮಜ್ಞಾನ ಸುಖದಲಿ
ಅರಿಸಿದವರನು ಸ್ತುತಿಸಿ ನಮಿಸುತ
ಗುರುವೆ ನಿಜ ಸಂತೃಪ್ತಿಯೆನಗಿದು ನಿನ್ನದಯದಿಂದೆ ॥ ೩೦ ॥

ನಾನು ನನ್ನದುದೆಂಬುದಡಗಿಸಿ
ನೀನೆ ಸುಶರಣ ಸತಿಯು ಲಿಂಗ್ಪತಿ
ತಾನೆ ಒಂದೆರಡಾದುದನರಿಸಿ ಪಾವನಗೊಳಿಸಿದೆ ॥
ಸ್ವಾನುಭವ ಸುಜ್ಞಾನ ಸಾರವ
ಸಾನುರಾಗದೆ ತಿಳಿಯ ಬೋಧಿಸಿ
ಹಾನಿಯಲ್ಲದ ಕೊಡುಗೆಯಿಂ ನಿಜಧನ್ಯನಾದೆನಲು ॥ ೩೧ ॥

ಇಂತು ಸ್ತುತಿಸಿರೆ ಸಂತಸದಿ ನಿಜ
ವಾಂತು ಗುರುಸ್ಥಿತಿ ಭೂಷಿತನು ನಿಜ
ವಿಂತು ಗುರುತಾನಾಗಬೇಕೆನುವಂಥ ಭಾವನೆಯ ॥
ಭ್ರಾಂತರೀಗಿನ ಗುರುಗಳಾ ತೆರ
ಭ್ರಾಂತನಿವನಲ್ಲನೆಂದೆಂಬುವ
ಶಾಂತಿಯೊಳು ಲಿಂಗಾರ್ಚನೆಯ ದಿವ್ಯಪ್ರಸಾದದೊಳು ॥ ೩೨ ॥

ಲಿಂಗ ಸುಖದಿರೆ ಸಂಗಸುಧೆರುಚಿ
ಯಂಗವದು ಮಾರ್ಪಡಿಸಿ ತೇಜದ
ಮಂಗಳತೆ ನೆಲೆಗೊಂಡ ಶಕ್ತಿಯ ಶೋಭೆ ದೇಶಿಕನು ॥
ತುಂಗಪ್ರಭೆ ಚಕಿತಾಂಗ ಮಾಡಿತು
ರಂಗ ಶರಣನು ಚನ್ನವೀರನ
ತುಂಗ ತೀರ್ಥದಿ ಭರಿತನಿರೆ ಭವಿಗೆಂತುವೀಸೌಖ್ಯ ? ॥ ೩೩ ॥

ತುಂಗ ತತ್ವ ಪದಾರ್ಥ ತಿಳಿಯದ
ಮಂಗಗಳ ನುಡಿ ಹೇಶಿತನಪಿದು
ಲಿಂಗವಂ ಮೊಳಕಾಲಿಗಾದರು ಕಟ್ಟ-ಮೀನ್ಗಂಡ ॥
ಅಂಗದೊಳಗಾದರಿರಿಸೆನುವ
ಭಂಗಿಗಳ ಮುಖ ನೋಡಬಾರದು
ಸಂಗಮನ ನುಡಿ ಶಾಶ್ವದನುಭವಿ ನುಡಿಯನೀ ತೆರದಿ ॥ ೩೪ ॥

ಓತು ಕ್ರಮದಿಂದೊರೆದ ನಿಜಗುಣಿ
ಮಾತು ನೈಜ ಸಮೇತು ಹೃದಯ ಪ್ರ
ಭಾತಮಯ ಮಾಳ್ಪದದು ಶಿವಯೋಗಾದಿ ಶಿವಪೂಜೆ ॥
ಮಾತುಗುಳಿ ದುರುಳಿವರು ಲಿಂಗದ
ಜ್ಯೋತಿ ಸುಖ ತಿಳಿದಿಹರೆ ಶುಕಸಮ
ಮಾತು ಮಾರಾಟೊಂದೆ ವೇಶ್ಯೆಯ ಸಮತೆ ಸೋಗಿಗಳು ॥ ೩೫ ॥

ಸಾಧು ಯತಿಯಾಶ್ರಮಕೆ ಕಾವಿಯ
ಹಾದಿ ಕುರುಹದುವೆಂದು ಧರಿಸುತೆ
ಬೋಧದೊಳಗಾ ಲಿಂಗ ಜಂಗಮ ಟೀಕೆ ಮಾಡುವರು ॥
ಕಾದು ನೋಳ್ಪದಕಿಂತ ಭಂಡಗೆ
ಹಾದಿ ತೋರಿಸಬೇಕು ಸನ್ಮತಿ
ಸಾಧು ತತ್ವಾನುಭವದಿಂಕಾಲಕಳೆಯುವನೂ ॥ ೩೬ ॥

ಮಧುರಗುಣವಂ ಇರುವೆ ಬಲ್ಲುದು
ಮಧುರ ವೇಳೆಯ ಕೋಳಿ ಬಲ್ಲುದು
ಚದುರ ಕಾಗೆಯು ಗೋತ್ರ ಗುಣವಂ ಬಲ್ಲುದದು ಸ್ಪಷ್ಟ ॥
ಸದರ ಮಾನವರಾಗಿ ಜನಿಸುತ
ಚದುರ ಶಿವಜ್ಞಾನಿಗಳು ತಿಳಿಸಿಹು
ದಿದುವೆ ಲಿಂಗವ ಟೀಕಿಸಲ್ ಭಂಗೇನು ಬರದದಕೆ ॥ ೩೭ ॥

ಸರಸ ಸಂಗತಿಗಾಗಿ ಶೋಧಿಸು
ತಿರುವವದು-ವರ ಕುಲವ ಕೇಳ್ವುದು
ಬರಿಯ ಹೊರಮಾತಿಹುದು ಎದೆಯದು ಬೋಳಿಸಿರುವವೋಲ್ ॥
ಬರಿದೆ ಭೂಷಿತ ಸಮಯಸಾಧಕ
ರಿರವ ಕೃತಿಸರಿಯೆನದು ರವಿಗತಿ
ಯರಿತರ ಕೊಡೆಯಾಶ್ರಯದ ಹುಂಬರ ಮಾತು ಸಾಕಿಷ್ಟೆ ॥ ೩೮ ॥

ಮನದ ಮೈಲಿಗೆ ತೊಳೆದುಕೊಂಡಿಹ
ಘನ ಮಹಾಂತನುವಿರ್ದು ಚಿಂತನ
ಮನದ ಮೂರ್ತಿಯು ಶಾಂತವೀರಸ್ವಾಮಿಕರುಣೆಯನು ||
ಮನದಿ ಸ್ಮರಿಸುತಲಿರ್ದರೀರ್ವರ
ಘನತೆ ಗತಿಯುಎಂಶವು ಜೋಡಿಯ
ನೆನಹು ಮಾಯೆ ಮರವೆಯ ಮಹಪಾಶಳಿದ ಸ್ಮೃತಿಯೊಳಗೆ || ೩೯ ||

ಇಂತಿದು ಮಹಾಂತ ಮರಿಗಳು
ಶಾಂತವೀರನ ಕರುಣೆಯಿಂದಿರ
ಲಿಂತು ಶಿವಪೂಜಾ ವಿಧಾನ ಶಿವಾನುಭವಲೀನ ||
ಶಾಂತಿಯಿಂದಾಲಿಸುತೆ ಸಾಧಿಸು
ತಿಂತು ಸಾಗಿರಲೊಮ್ಮೆ ತುಂಗೆಯ
ಕಾಂತಿಯೊಳು ಮಡಿಯಾಗ್ವ ಘಳದಲಿ ಲಿಂಗನೀರೊಳಗೆ || ೪೦ ||

ಬಿದ್ದಿರಲು ಆಳದಲಿ ಸಿಗದಿರೆ
ಬದ್ಧನಾದನು ತಟದಿಸೂತ್ರದಿ
ಬದ್ಧನಂತರ್ಧ್ಯಾನದೊಳುವಾಕ್ಷಣದಿ ಮುಳುಗಿರಲು ||
ಬಿದ್ದ ಮಳೆಯಿಂ ತುಂಬಿಹೊಳೆ ಬರ
ಲೆದ್ದು ಸಹಪಾಠಿಗಳು ಕೂಗಲು
ಸಿದ್ಧ ಬಾಹ್ಯಜ್ಞಾನವಿರದಿರೆ ತಿಳಿದ ಶಿವಯೋಗಿ || ೪೧ ||

ಬಂದು ಎಬ್ಬಿಸಲಾಗ ಗುರುಕೃಪೆ
ಯಿಂದೆ ಲಿಂಗದುವೆದ್ದು ತೋರಿರೆ
ನಂದನುಲಿ ಚಂದಯ್ಯನಾತೆರ ಅದನೆತ್ತಿಕೊಳ್ಳದಿರೆ ||
ಇಂದುಧರ ಗುರು ಹಟವ ಬಿಡಿಸ
ಲಂದವನು ಲಿಂಗವನು ಧರಿಸುತೆ
ನಂದದಿ ಪರೀಕ್ಷೆಯೊಳು ವಿಜಯದ ಲಿಂಗ ನಿಷ್ಠೆಯೊಳು || ೪೨ ||

ತಾನು ಲಿಂಗಾಚಾರದಿಂ ಹೊರ
ಗಾನು ಆದೆನುವೆಂಬ ಭಾವನೆ
ಮೇಣು ಮುಸುಕಿರಲಂದು ಇರುವಿಕೆ ಸಮತೆಶ್ರೀಗಂಧ ||
ಕಾಣಲದು ಪುರದೊಳಗೆಯಡವಿಯೊ
ಳೇನುವಿರ್ದೊಡೆ ಬಿಡದು ಪರಿಮಳ
ದೀ ನಿರುಪಮಂ ಸಮತೆ ಲಕ್ಷಿತ.ಹೊರಗೊಳಗು ನಿಲವು || ೪೩ ||

ಸರ್ವಮಾತ್ಮವಶಂ ಸುಖಂ– ನುಡಿ
ಸರ್ವರಿಗಿದುವೆ ಮಾರ್ಗದರ್ಶನ
ಗರ್ವಿಗಿದು ಪ್ರತಿಯಾಗಿ ಮಾಳ್ಪುದು ಸುಖ ನಿಗರ್ವಿಗದು ||
ಸರ್ವನೆಲ್ಲವನರಿತದೇಶಿಕ
ಸರ್ವಕಾಲದಿ ತ್ರಿವಿಧದರ್ಶನ
ಪರ್ವಕಾಲದಿಯಿರ್ದ ಸ್ಥಿತಿಗತಿ ಸ್ವಾತಿಮುಕ್ತಾಂಗ || ೪೪ ||

ಕಾಷ್ಠದಿಂದೊಗೆದಗ್ನಿಯದು ಬದಿ
ಕಾಷ್ಠವಂ ಸುಟ್ಟಿರುಹಲಾ ಪರಿ
ಕಾಷ್ಠ ಭೇದವ ಕೆಂಡದೊಳಿಹುದೆಂತು ನೋಡಲ್ಕೆ ||
ದೃಷ್ಟಿದ್ವಾರದೊಳೊಗೆದ ಚೇತನ
ದಿಷ್ಟಿಲಿಂಗಾಗ್ನಿಯೊಳು ಪೂರ್ಣದಿ
ಸುಟ್ಟ ನಿರ್ದೇಹಿ ಮಹತಾ ಜಡಜೀವಿಯುವನೆಂತು ? || ೪೫ ||

ಮುಂದೆ ತಾ ಸಾಗಿರಲು ಲಿಂಗಾ
ನಂದದಿರೆ ಬಸವಮ್ಮ ಶರಣೆಗೆ
ಬಂದಿಹುದ ಮೊಲೆಹುಣ್ಣು ಕಳೆದವಳ ಮೊಲೆಹಾಲುಂಡು ||
ಅಂದೆ ಖ್ಯಾತನು ಬಾಲಲೀಲೆ ಮ
ಹಾಂತನೆಂದುರೆ ವಿವಿಧ ಲೀಲಾ
ನಂದ ಕವಿತಾಶಕ್ತಿಸಂಪದನಾದ ಸ್ವರವೇದ || || ೪೬ ||

ತತ್ವಮತಿ ಶಿವಯೋಗಿನುಭವ
ತತ್ವಕೃತಿ ಹಾಳಿಯೊಳಗಿಡದಾ
ಸತ್ವಬಲ್ಲಿದ ಬಿತ್ತರಿಸಿದಂ ನಡೆನುಡಿಯೆ ಬದ್ಧ ||
ವ್ಯಕ್ತ ಮಾಡಿದುದದುವೆ ನಿಷ್ಠೆಯ
ತತ್ವಪದದಲಿ ಸಾಕ್ಷಿ ಶಿವಕವಿ
ಸ್ತುತ್ಯದಕ್ಷರ ಬಸವಲಿಂಗನ ಚರಿತೆ ಮುಂದೋದಿ || ೪೭ ||

ಶುದ್ಧವಹುದಂಕಲಗಿಯಡವಿ
ಸಿದ್ಧ ಚರಣಾಶ್ರಯದಿ ಸ್ಥಾಪಿಸ
ಲೆದ್ದ ಪುರಮರೆಗುದ್ದಿ ಮಠವಿದುಯಡವಿಸಿದ್ಧೇಶ ||
ಬದ್ದಿದಕೆ ಗುರುವಂಶದೊಳು ಕ್ರಮ
ಬದ್ಧ ಗುರು ಗುರುಪಾದ ಕೃಪೆಯಿಂ
ದೆದ್ದ ಗುರುನಿರುಪಾಧಿ ಕೃತಿಯೋಳ್ ಏಳನೆಯ ಸ್ಥಲವು || ೪೮ ||

ಅಂತೂ ಸ್ಥಲ ೭ಕ್ಕಂ ಪದ ೪೮ ಕ್ಕಂ ಒಟ್ಟು ಪದ ೩೧೬ ಕ್ಕಂ
ಮಂಗಲಂ.

# ಓಂ

## ಎಂಟನೆಯ ಸ್ಥಲ

**ಸೂಚನೆ–**

ವಿಮಲ ಮಾನಸ ಚನ್ನವೀರನು
ಸಮತೆ ಸನ್ಮತಿ ಬಸವಲಿಂಗಗೆ *
ಸುಮತ ತತ್ವಾಚಾರ ಭಕ್ತನ ನಡೆಯ ಬೋಧಿಸಿದ ||

†ಶರಣಶಾಂಭವಯೋಗಿ ನೆಲಿಸಿದ
ಧರಣಿ ಕ್ಷೇತ್ರಂ ನದಿ ಪವಿತ್ರಂ
ಸ್ವರಸುಂದ ಶತಕತ್ರಯ ಸಹಿತೈದು ಕನ್ನಡದಿ ||
ಸರಿ ವಿಶೇಷಾರ್ಥ ಪ್ರಕಾಶಿಕೆ
ಪರಮಸೂತ್ರಂ ಸಂಸ್ಕೃತದಿ ಕ್ರಮ
ವೊರೆದ ಮಗ್ಗೆಯಮಾಯಿದೇವರ ಕರುಣೆ ಸ್ಥಿರವಿರಲಿ || ೧ ||

ಕ್ಷೀರದಿಂ ಸಿದ್ಧಾದ ಘೃತವದು
ಕ್ಷೀರವಪ್ಪುದೆಯೆನಲು ಚಕಿತಂ
ಚಾರುನಡೆನುಡಿ ಚನ್ನಮದ್ದುಗ್ಗುರುವರನ ಕಾರುಣ್ಯ ||
ವೀರರಿಗದುವೆ ಸಲ್ಲುದಲ್ಲದೆ
§ಮೂರರಿಗೆ ಬಹುದೂರವೆಲ್ಲವು
ಚಾರುಸ್ಥಲಗಳ ಮೀರಿ ಮುಕ್ತಿಯ ಪಡೆದವರು ಎಷ್ಟೋ || ೨ ||

ಮಾರಹರ ಸದ್ಭಾವಿ ಶಿಷ್ಯಗೆ
ಸಾರಸುರಿಸುತ ದೃಷ್ಟಿ ನೆಲಿಸಲು
ಮಾರಮಧುರತೆ ಮರಳಿವರಿಸದು ವೀರವರನಿಂಗೆ ||
ಚಾರು ಷಟ್‌ಸ್ಥಲ ಜ್ಞಾನ ಸಾರವ
ಭೂರಿಯುಣಿಸಲು ಸರಸಸಂಭ್ರಮ
ರಾರು ಕಂಡಿಹರವರೆ ಬಲ್ಲರು ಪಡೆದವರು ಎಷ್ಟೋ || ೩ ||

---

* ೧೯ ಶತಮಾನದ ಪ್ರಾರಂಭದಲ್ಲಿದ್ದರೆಂದು ಡಾ॥ ತಿಪ್ಪೇರುದ್ರಸ್ವಾಮಿಯವರ ಅಭಿಪ್ರಾಯ. ಕರ್ನಾಟಕ ಶರಣ ಕಥಾಮೃತ p ೨೦೭. † ಶತಕತ್ರಯ ೧ / ೧೮.
§ ಹೆಣ್ಣು, ಹೊನ್ನು, ಮಣ್ಣು

ಬಂದರೆಷ್ಟೋ ಹೋದರೆಷ್ಟೋ
ಗಂಧ ಧರಿಸಿದ ಮೂಢರೆಷ್ಟೋ
ಅಂದರಿತು ಮರೆತಂಥ ಮರುಳರು ಕೆಲರು ಕೆಲರರಳಿ ||
ಮಿಂದರೆಷ್ಟೋ ತಪ್ಪು ತಿಳಿಯುತ
ಗೊಂದಲವ ಹಾಕಿದವರೆಷ್ಟೋ
ವೃಂದದೊಳು ಚರಿತೋರ್ವನುಳಿಸಿದನಿವನೇ ಶ್ರೀ ಶರಣ || ೪ ||

ಲಿಂಗನಾಯ್ಕನ ಹಳ್ಳಿ ಸನಿಹದಿ
ಯಂಗಡಿಯ ವ್ಯಾಪಾರಕಾಯಕ
ಲಿಂಗವಂತ ಬಸಪ್ಪನೆಂಬವನೂರು ಮೈಲಾರ ||
ಜಂಗಮನ ತತ್ವಾಂಗವೆಲ್ಲವ
ಸಂಗತಿಯ ಕೇಳುತ ಬರಲವನ
ರಂಗ ನುಡಿವಿದು ಶರಣನಾಗಿಹ ಪರಿಯ ಪದಮಾಲಿ || ೫ ||

ಚರಿತೆಗೋಚರ ಶರಣರಚನೆಯೊ
ಳೊರೆದ ವಿವರವ ನೋಡಿದಾಗಲೆ
ಸರಳ ಕೆಲಗೋಚರವು ಜೀವನ ಶಿಷ್ಯ ಗುರುಗಳರ ||
ಸರಳ ಕಠಿಣಿನದಂಥ ಶಬ್ದದ
ಸರಣಿ ಪುರಿತ ವಿಶಾಲ ಬೆಡಗಿನ
ಭರಿತ ಕೃತಿರಚನೆಗದು ಕಾರಣವೇನು ತಿಳಿಯುವದು || ೬ ||

ಶುದ್ಧ ಸರಳದ ನಮನ ನಿಯಮದಿ
ಎದ್ದು ತೋರ್ಪುದು ಸೇವೆ ಧರ್ಮದ
ವೃದ್ಧಿ ಗೊಳಿಪುದು ವರ್ಣಸುಖಬಲ ಆಯು–ಮನು ನೀತಿ* ||
ಇದ್ದ ನುಡಿ ತಿಳಿದಂಥವರೆ ಪದ
ಬದ್ಧರಾಗುತ ಪುಣ್ಯಗಳಿಸುತ
ಲೆದ್ದು ತಮ್ಮೃತ ಪದದಿ ಸಂಗತ ನಿತ್ಯ ಶರಣರರು || ೭ ||

ಯಾವುದಿರೆ ಮನ ಮುಟ್ಟಿರುವ ಕೃತಿ
ಗಾವ ಮಾತಿನ ತೊಡಕುಗಳು ಪ್ರತಿ
ಭಾವ ವೇಶ್ಯೆಯಲಪ್ಪುಗೆಯ ಸಮವೆಂದ ಶರಣರರು ||
ತೀವಿಯಾಚಾರಿರದ ಬರಿಯ ವಿ
ಭಾವವಿರು ಮರುಳರಿವರಿಗೆ ರಸ
ದೇವ ಸುಖಸರಳೆನದು ಕಾರಣ ಶರಣ ಮಹ ತುಷ್ಟ || ೮ ||



*ಮನುಸ್ಮೃತಿ ೨/೧೨೧

ಶಿವ ಗುರುಚರಣ ಸೇವೆಯರ್ಚನ
ಸಫಲ ಜಂಗಮ ತೃಪ್ತಿಗಳಿವುದ
ನುಪಮವಿರಲೊಂದೊಂದರಿಂ ಮತ್ತೊಂದು ಹೆಚ್ಚಳತೆ ||
ಸಫಲತೆಯ ನಿರಿವಿಡಲುರಿದರಿಂ
ವಿಫುಲ ಸರ್ವಾರ್ಥೆಲ್ಲ ಶರಣರ
ಸುಪಥ ತತ್ವ ಶಿವಾನುಭವವಿರಲಿತರದಾಶೇಕೆ ? || ೯ ||

ಸ್ವಾನುಭವ ಸುಜ್ಞಾನ ಸಂಪದ
ಮಾನನೀಯನು ನಿಂದಿಸನು ತಂ
ತಾನೆ ಸ್ವಯಮಾನಂದ ಪೂರ್ಣ ವಿರಕ್ತನೆನಿಸುವನು ||
ಸ್ವಾನುಭವಿಗಳು ಕೋಟಿಗೊಬ್ಬರು
ಹಾನಿರದ ಸದ್ವ್ಯಸನಿ ಪೂರ್ಣನು
ತಾನೆ ಪರಮ ವಿರಕ್ತ-ಶರಣನ ಸಮಕೆ ಮತ್ತಾರು ? || ೧೦ ||

ಗುರುಕುಲದಿ ಬರಿಕಂಠಪಾಠದು
ವಿರದೆಯನುಭವ ಪೂರ್ಣ ಪರಿಮಳ
ಭರಿತವಿದು ಗುರುಚನ್ನವೀರ ಶಿವಾನುಭವಗೋಷ್ಠಿ ||
ಪರಿಮನೋವಿಜ್ಞಾನಿಯಿರಲವ
ಸರಿಯೆ ಪಾಠ್ಯಕ್ರಮದ ಕಾರಣೊ
ಪರಮದನುಭವಿಯಾದ ಶಿವಕವಿ ಬಸವಲಿಂಗಾದ || ೧೧ ||

ಗಂಧವಂ ತನುವಿಂಗೆ ಸ್ಪರ್ಶಾ
ನಂದವಿರೆ ಶಿವಯೋಗಿ ಬೋಧವ
ಗಂಧಹೃದಯಕೆ ಬಡಿದುಚಿರತಮ ಸ್ವಾನುಭೂತಿಯದು ||
ಗಂಧ ನಾಸಿಕ ರುಚಿಯನಾಲಿಗೆ
ಬಂದ ಶಬ್ದವ ಕರ್ಣ ರೂಪಾ
ನಂದ ನಯನದು ತಕ್ಷಣರಿವಂತೆ ಗುರು ಶಿಷ್ಯಾಳಿ || ೧೨ ||

ಬಿಡದ ಚರ್ಚಾಗೋಷ್ಠಿ ಗಂಗೆಯ
ಬೆಡಗಿನೊಳು ವಾಣಿಯ ಸುಧಾಂಶದ
ಬೆಡಗು ಭ್ರಾಂತಿಯನಳಿಸುತೆಲ್ಲರವಿಡುತ ಸಂತೃಪ್ತಿ ||
ಮೃಡನ ಶರಣರು ಜಂಗಮಾರ್ಯರು
ನುಡಿಯ ಪಸರಿಸುತಾಗಯೆಲ್ಲೆಡೆ
ಬಿಡಿಸಿ ತಂದಿತು ಹರದ ಬಸವನ ನಿತ್ಯದೀ ಸಭೆಗೆ || ೧೩ ||

ಪುಣ್ಯವದು ಬೆನ್ನತ್ತಿದಾ ನೆರ
ಳೆನ್ನಿ ಬಿಡದಾವಾಗು ಮಾನವ
ಗನ್ಯವಿದ ಮೇಲೆನಿಪವಾವುದು ನಿಯಮ ತಾನಳಿದು ||
ಪುಣ್ಯ ಪುರುಷನು ತಿಳಿದೊ ತಿಳಿಸುವ
ಶೂನ್ಯ ಶೃತಿ ಶೈಂಗಾರ ಪರಿಮಳ
ಧನ್ಯಕಾರಣೋ ಬಂದ ಬಸವಂ ನಿತ್ಯದೀ ಸಭೆಗೆ || ೧೪ ||

ಧನ ಕನಕ ರಾಜಾದಿ ಯಾಶೆಗ
ಳೆನಿತಿರದವ ಕುಧರ್ಮದಿಂ ಮಹ
ಘನತೆಯಿಚ್ಛಿಸದಂತವ ಸದಚಾರಿಯೆಂದೆನುವ ||
ಎಣಿಕೆ ಬುದ್ಧನ ಧಮ್ಮಪದ* ನಿಜ
ದೆಣಿಕೆಯಂತಿರಲಿವರ ಗುರುಕುಲ
ಘನತೆ ಗುರುತರವೆಂದೇ ಬಂದನು ಭಕ್ತ ಬಸವಪ್ಪ || ೧೫ ||

ಮನದ ಮಾಧುರಿಯುಂಡು ಕ್ಷೀಣದಿ
ಕೊನೆಗೆ ಬೈರುಪಗಾರ ಸೋಗದಿ †
ಜಗಕೆ ತಾ ಗುರುವಾಗ ಬೇಕೆನುವಂಥ ಮಿಶ್ರಥಳಿ ||
ಗಿಣಿಯು ಮಾತಿನ ಗುರುಗಳೀಗಿನ
ಮನಕ ಘನತರದಾಚೆ ಶೂನ್ಯದ
ಮುನಿಯುನಿವನೆಂದರಿತೊ ಗೋಷ್ಠಿಗೆ ಬರುತ ಬಸವಪ್ಪ || ೧೬ ||

ಜಂಗಮರ ಕೃಪೆಯುಂಡು ಕಲಿಯುತ
ಜಂಗಮನ ಕೃಪೆ ಪಡೆದು ಹೊರಡುತ
ಜಂಗಮನ ನಿಂದೆಯನು ಮಾಳ್ಪಾ ತಾಯಿಗಂಡತನ ||
ಜಂಗುಳಿಯವಿಂದಿಲ್ಲಿ ಕಂಡಿರೆ
ಜಂಗಮನ ನಿಜ ಪ್ರೇಮಯಂದಿನ
ಸಂಗಮನ ಗೋಷ್ಠಿಗದು ಬರುತಿಹನಂದು ಬಸವಪ್ಪ || ೧೭ ||

ತನ್ನ ಕಾಯಕ ಮರೆಯುತಾಲಿಸು
ತಣ್ಣಗಳು ಮಠಹೊಂದಿ ಬಾಳುವ
ಕುನ್ನಿಗಳ ತೆರನಲ್ಲನೀತನು ಕಾಯಕದಿವಿದ್ಯ ||
ಚನ್ನವೀರನ ತತ್ವಗೋಷ್ಠಿಗೆ
ಮುನ್ನದಿಂ ಬರುತಿರ್ದ ಗುಣಸಂ
ಪನ್ನ ನಿಜಧಾಚರಣದಿಂದುರೆ ನಿತ್ಯಬಸವಪ್ಪ || ೧೮ ||



* ಧಮ್ಮ-೬/೯ † ಚ.ಬ.ವ-೨೦೦

ವ್ಯರ್ಥವಲ್ಲದ ವಚನವಲ್ಲರಿ
ಸಾರ್ಥಕದ ವಚನಾರ್ಥ ಸ್ವರಸಿರಿ
ತೀರ್ಥ ಶಿವಯೋಗಿಗಳ ನುಡಿಯಾಲಿಸುತೆ ಶಾಂತಿಸಿರಿ ||
ಅರ್ಥ ಪೂರ್ಣದಿ ಹೊಂದುವಾಸೆಯು
ದಾರ್ಥ ಸಂಗಮ ಶರಣ ಗೋಷ್ಠಿಗ
ಪಾರ್ಥನಾಚೆಯ ಬಸವಲಿಂಗನು ನಿತ್ಯದಭ್ಯಾಸಿ || ೧೯ ||

ರೋಗವಿರಿಯೌಷಧಿಯ ಸೇವನೆ
ಯಾಗಳೇ ಮಾಳ್ಪಂತೆ ಶರಣರು
ಸಾಗಿ ಬಂದಿರೆ ಚನ್ನವೀರನ ಬೋಧ ಪ್ರಕ್ರಿಯದಿ ||
ಯೋಗವಾಗುತ ಶರಣರನುಭವ
ತಾಗಲಾ ಪ್ರಜ್ಞಾನ ಪೂರ್ಣರು
ಹಾಗೆ ತಿರಗುತ ತಿಂದು ಕೊಬ್ಬಿದ ಕೋಣನಂತಿರದೆ || ೨೦ ||

ಲಿಂಗಸುಖವಿದ್ದು ಬಾಧಿತನು ಭವಿ
ಸಂಗದೊಳು ಮನಶೋಧನದಿ ಭವ
ಭಂಗವೆಂಬುದು ಸಿದ್ಧ ನಿಗಮಾಗಮದ ಸಾಧಾರ ||
ಭಂಗವಿಲ್ಲದ ಬೋಧ ಸರಸ ತ
ರಂಗ ಶಾಂತಿಯ ಸುಖದ ಪ್ರಜ್ಞಾ
ನಾಂಗ ಲಾಭದಿ ಶರಣಸಂಗಮ ಶ್ರೇಣಿ ಬಸವಪ್ಪ || ೨೧ ||

ಪರಮ ಲಾಭಾರೋಗ್ಯ ಶ್ರದ್ಧಾ
ಭರಿತ ಭೂಷಣ ಸಂತ ಸಂಗತಿ
ಚಿರದ ಸುಖದಾಯಕತೆವೆಂದೇ ತಿಳಿದ ತರಲ ಪ್ರಿಯ ||
ಭರಿತ ತಾರಾಮಂಡಲದ ಕ್ರಮ
ಸರಿವ ಸೋಮನವೋಲು ವರ ಸ
ತ್ಪುರುಷ ಬಹುಶ್ರುತ ಚನ್ನವೀರನ ಪಥದಿ ನಡೆದಿರ್ದ || ೨೨ ||

ದೇವನೊಲಿಸಲು ಬಂದ ಕಾಯವ
ದೇವನಡಿ ಸವೆಸುತ್ತೆ ನಿರ್ಮಲ
ತೀವಿ ಶ್ರವಣ ಮನನ ನಿಧಿಧ್ಯಾಸ ವಿಧಿ ಸಂಸ್ಕಾರ ||
ಸೇವಿಸುತ ಸಾಧಕರು ಸತ್ಕ್ರಿಯೆ
ಗಾವ ತಡೆ ಬರದಂತೆ ಇರಲನು
ಭಾವ ಭಾಗ್ಯ ಸದಾತ್ಮ ಹಸಿವೆಯ ಪೂರ್ಣ ಬಸವಪ್ಪ || ೨೩ ||

ಈತನಿಗೆ ಗೋರಪ್ಪಗಳ* ಸಂ
ಗಾತ ಸೇರದೆಯುವರ ಡಾಂಭಿಕ
ಮಾತು ಕೃತಿಗಳು ಮನಕೆ ಸೇರವೆ ತೊರೆಯುತವರ ಜೊತೆ ||
ಖ್ಯಾತ ಜಂಗಮದೇವ ಕಿಂಕರ
ನೀತ ಸಕ್ರಮ ಹರದ ಕಾಯಕ
ರೀತಿ ಬಸವನ† ವಚನದಂತೆಯೆ ನೈಜದಾಚರಣೆ || ೩೪ ||

ಜಂಗಮಾರ್ಚನೆಯರ್ಪಣಾನುಭವ
ದಂಗವಿಸಿಕೊಂಡಿರುವ ವರ ಶಾ
ಶ್ತ್ರಾಂಗಶೋಧನೆ ಶಾಂತವೀರಸ್ವಾಮಿಯಿಂ‡ ನಡೆಯಲ್ ||
ಸಂಗದೊಳು ತಾನಿರ್ದು ಕ್ರಮ ವಿಷ
ಯಾಂಗ ಸಹಿತಿರೆ ಚನ್ನವೀರ್ಪರ
ಜಂಗಮನ ಸತ್ಕೃಪೆ ಪಡೆಯುತ ಬಸವಲಿಂಗಾಖ್ಯದ || ೩೫ ||

ಸರಸದನುಭವ ಕಾವ್ಯರಸಮಯ
ಝುರಿ ಷಟಸ್ಥಲ–ವೀರಶೈವದ
ಪರತರದ ಸಿದ್ಧಾಂತ ಧರ್ಮಾಚಾರ ಪ್ರಕರಣವು ||
ವರಶಿವಾನುಭವ ದರಪಣ ಕೃತಿ
ಭರಣಿ ಸ್ವರ ನಿಜವೊಪ್ಪುವಂಥದು
ಪರತರದ ಸದ್ಭಕ್ತಿ ಭಿನ್ನಹ ದಂಡಕದು–ಮೇಣು || ೩೬ ||

ಚನ್ನವೀರ ಶಿವಾನುಭವದೊಳು
ಮಾನ್ಯದಿರುವಿಕೆ ಮಿಕ್ಕ ಸಮಯದಿ
ಅನ್ಯ ಮಹಕವಿಕಾವ್ಯ ಶಾಸ್ತ್ರಾಧ್ಯಯನದೊಳಗಿರುತ ||
ತನ್ನನುಭವಂ ಕೃತಿಗಳಲಿ ಸಂ
ಪನ್ನ ಸ್ವರ ಶಾಸ್ತ್ರೀಯ ಪ್ರಕರಣ
ವನ್ನೆ ವೈಚಾರಿಕತೆಯಿಂ ಪೂರ್ಣಾಗಿ ತುಂಬಿರುವ || ೩೭ ||

ಚನ್ನಗುರುಕುಲ ಸಂಗದಿಂ ಸಂ
ಪನ್ನಿ ಸುಖಿ ಹೂ ಭ್ರಮರವೋಲ್ ಮನ
ದನ್ಯ ಗಿರಿಯೆ ಮಯೂರನಾಟ್ಯದ ಚಿತ್ರದನು ಭವತೆ◘ ||
ಚನ್ನಮಲ್ಲನನರಸಿ ವಚನದ*
ಹಣ್ಣು ರಸದಂತಿಹನು ಶರಣನ
ಕಣ್ಣಿನೊಳಪ್ರಭೆ ಹದ್ದು ನೊರಜದು ಸೊಳ್ಳೆ ತಿಳಿಯುವವೇ || ೩೮ ||

---

*ಚ. ಬ-ಹ ೨೧೬ †ಬ. ವ ೧೧೫ ‡ಶಿ–ದರ್ಪಣ ೬೯/೩ §ವೀ. ದಾ. ಸಿ. p೪೧೮
◘ಅಕ್ಕನ ವ ೨೮೫ *ಅಕ್ಕನ ವ ೩೦೬

ಧೀರಗುರುವರ ಮುಂದೆ ಬಳಿಕೆ
ನ್ನಾರ ಅಧಿಕಾರಯ್ಯ*-ಪದವಿದು
ಧೀರತನ ಸೂಚಿಪುದು ಶರಣರ ಜೀವನದಿ ಸತ್ಯ ||
ಭೂರಿಬ್ರಾಹ್ಮಣರಾಗ ವರ್ಣಕೆ
ಮೇರುವೆನ್ನುವ ಕಾಲ ಒಂದದು
ಕಾರಣಾಗಿರಬೇಕು ಶಿವಕವಿಸಾಲು – ದರ್ಪಣಿದಿ† || ೨೯ ||

ಶರಣರರ ಘನ ನಿಷ್ಠೆ ಪ್ರಸರಿಸು
ತಿರಲು ಸಹಿಸದ ಬೇರೆ ಸಾಂಪ್ರದೆ
ವರಿವಗೆದು ಕಿರುಕಳಕೊಡಬೇಕೆಂಬ ಸಮಯದಲಿ ||
ಕರಮು ಸಂಯೋಗದೊಳು ಹಡಗಲಿ
ಪುರ ವಿಭಾಗದಧಿಪತಿಯಾಗಮಿ
ಸಿರಲು ಕಟ್ಟಾ ವೈಷ್ಣವದ ತಹಶೀಲದಾರಂದು || ೩೦ ||

ಬಂದಿರಲು ಸರಕಾರಿ ಕೆಲಸವ
ಹೊಂದಿ ಮೈಲಾರಕ್ಕೆ ಸಮಯವ
ನಂದು ಕೇಡಿಗಳೆಲ್ಲ ಸಾಧಿಸುತವನ ಕಿವಿಯೂದಲ್ ||
ಅಂದು ಶರಣನ ಕರೆದು ತಾನು ಮ
ತಾಂಧತನ ತೋರಿಸಲು ನಿಷ್ಠಾ
ನಂದ ಶರಣಂಜದಳುಕದೆ ವಿಚಕ್ಷಣದ ಮತಿಯ || ೩೧ ||

ತೋರಿಸಿದ ಹರಿನಾಮದೊಳು ಅಧಿ
ಕಾರಿ ಲಾಲಸೆಯಂತೆ ವಿಷಯ ವಿ
ಚಾರಮಯ ಗೋವಿಂದನಾದಿ‡-ಶ್ಲೇಷಿಡಿದ ಪದ್ಯ ||
ಚಾರು ಅಕಳದಿಂದೆ ಶುದ್ಧದ
ಮೇರು ಪಾವನ ಪಾಂಡು ವರ್ಣನ
ಶ್ರೀರಮತೆ ವಿಭೂತಿ ಘನತೆಯ ವ್ಯಕ್ತಪಡಿಸುತಲಿ || ೩೨ ||

ಸ್ವರಸರಣಿ ಹರಿಭಕ್ತನಹುದು
ಪರತರದ ಹರಭಕ್ತನಲ್ಲಂ
ಇರುವೆ ನರಸಿಂಹಾದಿ-ಪ್ರಣವದ ಸ್ಮರಣೆಯೊಳಗಾನು ||
ವರಿಯ ನಾನಾರ್ಥದೊಳು ವೈಚಿ
ತ್ರ್ಯರಿವದರ್ಥ ವಿಚಾರ ತೋರಿಸಿ
ಪರತರದ ಷಡಕ್ಷರಿಯ ಮಂತ್ರದ ಸ್ಮರಣೆ ಮಾಡಿಪದ || ೩೩ ||

*ಶಿ. ದರ್ಪಣ-ಪದ ೯ ಅದೇ ೩೬ †ಕರ್ನಾಟಕ ಶರಣ ಚರಿತಾಮೃತ-p೨೦೭,
‡ಡಾ|| ತಿಪ್ಪೇರುದ್ರಸ್ವಾಮಿ

ತೋರಿಸಲ್ಕೆ ಸಮಾಧಾನಗೊಳ್ಳುತಿ
ಗೌರವತೆ ತಾ ಕೊಟ್ಟು ಸಾಗಿರೆ
ಕೋರಿಹುಳ ಸಮಕೇಡಿಗಳು ಗರ್ವಳಿದು ಮುಖಪೂರ್ಣ ||
ದಾರದಿಂ ಹೊಲಿದಂತೆಯಾಯ್ತದು
ಚಾದು ಶರಣಾಚಾರದನುಭವ
ಸೇರಿದಂತಾಯ್ತದು ಶಿವಾನುಭವ ರಸದಲ್ಲಿ ಮಜಾ || ೩೪ ||

ಚಾರು ಸದ್ಗುರುರಾಯನಾ ಅಧಿ
ಕಾರ ಮುಂದೆಯದಾವದೈ ಸರಿ
ಯಾರ ಯಾದಧಿಕಾರವಿನ್ನೇನಯ್ಯ ಎಂಬ ಸ್ವರ ||
ಹಾರ ಪ್ರಿಯ ಹರಿಕರ್ತೃವೆಂದರೆ
ಮೇರು ಹಣಿಕಿಡಿಯಿಂದೆ ಸುತನ
ಚಾರು ಲಕ್ಷಿಸಲಿಲ್ಲಕಾರಣ ಹರಿವಿಂ ಗುರುವೆ ಶ್ರೇಷ್ಠಹನು || ೩೫ ||

ಸೃಷ್ಟಿಗೆ ಜಲಜೋದ್ಭವನೆ * ಪ್ರಮುಖನೆ
ಸೃಷ್ಟಿಜನ ನಡುತಲೆಯ ಚಿವುಟಲು
ಸ್ಪಷ್ಟವದನೇ ಮತ್ತೆ ಪುಟ್ಟಿಸಿಕೊಳ್ಳನೇಕಯ್ಯ ||
ತುಷ್ಟಿನೀಡುವನಿಂದ್ರನಿಗೆ † ಬಹು
ಸ್ಪಷ್ಟ ಯೋನಿಗಳಾದದೇಕದು
ಶ್ರೇಷ್ಠ ಮದ್ಗುರುರಾಯನಧಿಕಾರವದೆ ಶ್ರೇಷ್ಠನುತ || ೩೬ ||

ವೀರಶೈವದ ತತ್ವಸಾರದ
ಪಾರ ಸೂಕ್ಷ್ಮತೆ ಗ್ರಹಿಸುತೀ ಸಂ
ಸ್ಕಾರದಿಂ ಪರಿಶುದ್ಧರಾಗಿ ಪ್ರಬುದ್ಧ ಕೃತಿ ಬರೆದು ||
ನೇರವಾಗದ್ವೈತಿಯಾಗದೆ
ಚಾರು ಚಿನ್ಮಯ ಸುಖದಿ ಸಾಗಿರೆ
ಧೀರನೊಪ್ಪುವ ಚಕಿತನಡೆದಿರಲಂದು ಸತ್ಯದಲಿ || ೩೭ ||

ಕಾರಣಿರದಿರೆ ಕಾರ್ಯವಾಗದು
ಕಾರ್ಯಕದು ಸತ್ಕಾರಣವೆ ಸೈ
ಕಾರ್ಯಕಾರಣಕೆರಡಕೋರ್ವನು ಸಾಕ್ಷಿಯಿರುತಿಹನು ||
ನೀರು ನೀರಜ ಲಕ್ಷ್ಯ ಪೂರ್ಣವಿ
ಚಾರ ಭರಿತ ಪ್ರಸಾದ ಪೂರ್ಣಾ
ಚಾರ ನಿಷ್ಠನು ಚನ್ನವೀರನು ಓರ್ವ ನಿಯಮದೊಳು || ೩೮ ||

ತವೊಡ್ಮನೆ ಸಂಚಾರಕೋರ್ಮೆ ಸು
ಸಮ್ಮತದ ವಟುರ್ಪೋರ್ವನಾ ನಿಜ
ತಮ್ಮ ಜೊತೆ ಕರಕೊಂಡು ಹೋಗಿರುವಾಗ ಕಾಡಿನೊಳು ||
ತಮ್ಮ ನಾಯಕ ಮುಂವೆ ತಂಬಿಗೆ
ಯೊಮ್ಮಿಡಿದು ಕಾಡಿನೊಳು ಸಾಗಿರೆ
ಕೆಮ್ಮನೇ ಬಹುಕ್ರೂರ ಮೃಗವೊಂದಾಗ ವಟುವಿನೆಡೆ || ೩೯ ||

ನೇರದಾಕ್ರಮಿಸಲು ಭಯದಿ ವಟು
ಚೀರಲಾಕ್ಷಣ ಕೇಳುತಾ ಗುರು
ವೀರನಪ್ಪಣೆ ಮಾಡಲಿಂತಿದು ಕೇಳು ಹುಲಿರಾಯ ||
ದೂರಸರಿ ಆ ವಸ್ತು ನಮ್ಮದು
ನೇರ ಹಿಡಿಯುವದೇಕೆ ಯೆನಲಾ
ಕೂರ್ರಹುಲಿ ಗುರುವಾಣಿಯಂತೆಯೆ ಹೊರಡುತಲ್ಲಿಂದ || ೪೦ ||

ಆಹ ಚಕಿತನಬಹುದೆಯಲ್ಲವೆ
ಯಾಹ ತಾಂ ನಿಜಕೇಳಿ ಪೇಳಿ
ನೇಹ ಜಂಗಮದನ್ನದಾನೀಶ್ವರರ ಚರಣದಡಿ ||
ನೇಹ ದಾಶ್ರಮದೊಳಗೆವಾಸಿಪ
ಸಾಹಸದ ಬಹುಕ್ರೂರ ಪಶುಗಳು
ನೇಹದಿಂದಿರುತಿರ್ದು ನುಡಿಪಾಲನೆಯೆ ಸಾಧಾರ || ೪೧ ||

ಕಾವ್ಯ ನುಡಿಗೇನೆನ್ನುವಿರಿ ತಾಂ
ನವ್ಯ ಲೋಕದ ಭಾವಿಗಳೆ ತಾಂ
ಸೇವ್ಯವೋ ಈ ನುಡಿಯು ಸೇವಿಸದಿರಲು ಚಕಿತಷ್ಟೆ ||
ನವ್ಯಕಾಮಿಗಳೆಂಬ ನಿಶ್ಚಯ
ದಿವ್ಯ ಮಾನವನನ್ನೇ ತಿಳಿಯಲು
ಭವ್ಯ ಭಾವನೆಧರಿಸಬೇಕದು ಧರಿಸದಿರೆಯುಷ್ಟೆ || ೪೨ ||

ಹೊಳೆವ ಗುರು ಸರ್ವಾತ್ಮಭಾವಿಯು,
ಕಳೆಯುಮಂಗಳವಾಣಿಯಾಣತಿ
ಬಳಿಯುವನ ಮೃಗ ಪಾಲಿಸುವದಿದು ನೆನಪುಗೊಳಿಸುವದು ||
ಲಲಿತದ ಪತಂಜಲಿಯಿ ಸೂತ್ರದಿ
ಸುಳಿದಿಹುದು ವೈಷಮ್ಯಳಿವು ಸುಳಿ
ಸುಳಿವ ಭೂತಾದಿಗಳು ನುಡಿ ಪಾಲಿಸುವ ನಿಜ ಮಾತು || ೪೩ ||

ತಕ್ಕ ಸಿಹಿ ಸರ್ವಾತ್ಮವಚನಿದು
ಅಕ್ಕನಾ ವಚನಾಂಗ ವೀಧಿಯೊ
ಳಕ್ಕರೆಯು ತನ್ನರಸನಲ್ಲಿಹನೆಂಬ ವಿರಹಾಂಗ ॥
ಅಕ್ಕರೆಯು ಗಿಳಿ ಸ್ವರದಿಪಾಡುವ
ತಕ್ಕ ಕೋಗಿಲೆ * ನೀವು ಪೇಳಿರೆ
ಮಿಕ್ಕ ತರು ಖಡ್ಗಮೃಗವೆಲ್ಲಾ–ನೀವೆ ಭರಿತೆಂಬ ॥ ೪೮ ॥

ಸೂಸುತಿಹುದು ಚಿದಾತ್ಮ ಹೊರಗಡೆ
ಹಾಸಿಕೊಂಡಿಹುದೆಲ್ಲದೊಳಗಡೆ
ತೋಷ ಜಂಗಮನಿರವ ಬಲ್ಲಿದಬಲ್ಲ ಎಲ್ಲವನು ॥
ಶ್ವಾಸ ಬಿಡುತಿಹುದೆಲ್ಲರೊಳು ಶಿವ
ಭೂಷಣಾಗಿಹನೆಂಬ ತೀರ್ಥನ
ಭಾಷೆ ಕೇಳದ ಪ್ರಾಣಿಯಾವದು ಮಾನವನ ಕೊರತು ॥ ೪೫ ॥

ಅರಿತೆನೆನ್ನುವ ನುಡಿ ಸರಿಯೆನದು
ಅರಿದೆನೆಂದೊಡೆ ಅರಿಯಬಾರದು †
ಪರಮ ಪರತರ ಘನಕೆ ಘನತಾಂ ಮಲ್ಲಿಕಾರ್ಜುನನ ॥
ಹಿರಿಮೆ ತಿಳಿಯದೆ ಸೋತು ಹೋದೆನು
ಸುರಿಹುದಕ್ಕನ ನುಡಿಯು ಕೇಳಿರೆ
ಎರುಳರಿಗೆ ಸಾಧ್ಯೆಂತು ಯೋಗಿಯ ನೆಲೆ ನುಡಿಯು ಕಠಿಣ ॥ ೪೬ ॥

ಬಿಡುವೆನಾ ಬಹುಮಾತು ಮಂಥನ
ನುಡಿಯಳಿದು ತಾಂ ಕೇಳಿ ವಟುವಿನ
ನಡುಗು ಘಾಯದು ಮಾಯ್ತು ಗುರುವರ ಕೃಪೆಯ ಬಲದಿಂದ ॥
ನಡೆಯತೊಡಗಿದ ಶರಣಬಳಗದಿ
ನುಡಿಯತೊಡಗಿದ ಸ್ನೇಹ ಸಂಗದಿ
ಪಡೆಯತೊಡಗಿದ ಮತ್ತೆ ಚರ್ಚಾಗೋಷ್ಠಿಯನು ವಟುವು ॥ ೪೭ ॥

ಘಟನೆ ಜರುಗಿದ ಬತಿಕಲೊಂದಿನ
ದಿಟದ ಪರಶಿವಯೋಗಿಗಳು ಬಲು
ಘಟನೆ ತಮ್ಮವಸಾನವು ಸಮೀಪಿಸಿತೂ ಎಂಬಂತೆ ॥
ಮಠಕೆ ಸಾಂಪ್ರತ ತಮ್ಮ ಚರಣದಿ
ವಟುವ ನೇಮಿಸಲಾ ಪ್ರಸಂಗವ
ಮಠದೊಳಾಕಸ್ಮಿಕದಿ ಸೂಚಿಸುವಾಗ ಭಕ್ತಗಣ ॥ ೪೮ ॥

* ೬೧ ಅಕ್ಕನ. ವಚನ-೩೫೫, ೩೩೩

ಚರಣ ಸಮ್ಮುಖ ಸುತ್ತಲಿನ ಗಣ
ಹರವಿಯ ಪುರಾಣ ಮಠದವರಾ
ಗುರುಕುಲದ ಸಾಧಕರು ಹೊಳಲಿನ ಬನ್ನಿ ಮಟ್ಟಿಯದ ॥
ಶರಣರಾ ಬಸವಪ್ಪ ನಾಯಕ
ಭರಿತ ದಾನಿಗಳೆಲ್ಲ ಕೂಡಿರೆ
ಯಿರವ ತಿಳಿಸಿದ ಲಿಂಗಲೀಲೆ ವಿಲಾಸ ಕೊನೆ ಘಳಿಗೆ ॥ ೪೯ ॥

ಕಾಲ ಸಮೀಪಿಸುತಲೆನ್ನುತ
ಶೀಲ ಸಂಸ್ಕೃತಿಯ ಹೊಣೆ
ಶೀಲವರ ಜಂಗಮನ ಕಾರ್ಯ ಪರಂಪರೆಯ ಸ್ಮರಿಸಿ ॥
ಮಾಲೆಗತಿ ಗುರು ಶಿಷ್ಯವಂಶ ವಿ
ಶಾಲ ಚಿರತನುವಾಗಿ ನಡೆಸುವ
ಮಾಲೆ ಸ್ಥಲದ ಚಿರಂತನ ಪ್ರಸಾರತೆ ನಿರಂತರದಿ ॥ ೫೦ ॥

ಸಲ್ಲಲಿತದಿಂ ಸಾಗಲೆನ್ನುತೆ
ಯಿಲ್ಲಿರುವ ಸಾಧಕರೊಳೋರ್ವಗೆ
ಸಲ್ಲುತಿಹ ಜಂಗಮನ ಸಂಸ್ಕಾರವನು ಕೊಡುವೆನು ॥
ಇಲ್ಲಿ ಕೇಳಿರಿ ನಾಮಕರಣಕೆ
ಸಲ್ಲುದಿವನೆ ಪ್ರಸಾದ ದೇವರ
ನಲ್ಲಿ ಸೂಚಿಸುತಿಹನು ಪೂರ್ವದಿ ಬಂದ ಪದ್ಧತಿಯ ॥ ೫೧ ॥

ನಾಮಕರಣದ ಶ್ರೇಷ್ಠ ನಿಯಮವ
ಕಾಮಿಗಳು ಮನ್ನಿಸರು ತಾತ್ವಿಕ
ಸೋಮಧರಮತಿವಂತರಿದನಂ ನಿಜದಿಯೊಪ್ಪುವರು ॥
ನೇಮದಾಶ್ರಯ ನೀಡಿದಾ ಗುರು
ವ್ಯೋಮ ಮಾರ್ಗಕೆ ಕಂತಕಾಗಿಹ
ತಾಮಸಿಕ ಪಾರ್ಟಿಗಳ ರಚಿಸುವ ದ್ರೋಹಿಗಳು ತುಂಬ ॥ ೫೨ ॥

ಚೇಟಿಯಿಂದೆತ್ತುತಿಹ ಪದ್ಧತಿ
ಮೇಟಿಯೆನ್ನದುದೀಕ್ಷೃತಿಯ ಫಲ
ದಾಟದೊಳು ಕತ್ತೆಯದು ಬಂದಿರಲೇನು ಒಮ್ಮಾತವೇ ॥
ಸಾಟಿಯಾಗುವದೇನು ಗುರುವರ
ನೋಟ ಶಕ್ತಿಯ ನಾಮಕರಣದು
ಕಾಟತರದೆಂದೆಂದು ಕಿಂತುರೆ ತಾಮಸಿಯ ಕಾಟ ॥ ೫೩ ॥

ತಪ್ಪದಿಹ ದಿನಮಾನದೀಗಿನ
ಕಪ್ಪೆಗಳ ಕುಣಿತಂತೆ ದಿನಕೊಂ
ದೊಪ್ಪ ಪರಿಪರಿನುಡಿವ ಕುವಿಚಾರಿಡಿದ ಮಂಗಗಳು ॥
ಸಪ್ಪುಗಿನ ಮುಖಮಾಡಿ ಸಮಯಕೆ
ಯೊಪ್ಪು ದಕ್ಷಿಣೆ ಸಲಿಸಿ ಸಾಧಿಸು
ತಿಪ್ಪ ತಿಪ್ಪಿಯ ಹೆಂಡಿ ಹುಳಗಳ ಕೊರತೆಯೇನಿಲ್ಲ ॥ ೫೪ ॥

ರೋಗಿ ರೋಗದ ಸ್ಥಿತಿಯು ರಸಗುಟಿ
ಯೋಗಿ ಬಲ್ಲನು ಮಾತ್ರ ಸಸಿಹದ
ಭೋಗಿ ತಿಳಿಯನು ಬಲ್ಲ ಬಲ್ಲರು ಮಾತ್ರ ಮಠಗಳದ ॥
ಭಾಗಗಳನಪಹರಿಸುವಾ ಕೃತಿ
ಯೋಗ ಪೂರ್ಣರಲಿಂದು ಕಂಡಿರ
ಲಾಗ ಚಿಂತಿಸುತಾನು ಗತಿಸುವದಲ್ಲ ಎದುರಾಗಿ ॥ ೫೫ ॥

ತತ್ವನರಿಸಲು ಒಪ್ಪದಿರೆ ನಿಜ
ತತ್ವದಾ ಸಿದ್ಧಾಂತವನು ಭಂ
ಗತ್ವವದು ಬರದಂತೆ ಬುದ್ಧರು ಯೋಚಿಸಲುಬೇಕು ॥
ತತ್ವ ಸಂಪದ ಮಠದ ಮಾಧುರಿ
ಸತ್ವ ಚಿರದುಳಿವಂತೆ ಲಕ್ಷವ
ನಿತ್ಯವಿಟ್ಟಿರಬೇಕು ವರಗುರು ಪೀಠ ಶಿಷ್ಯಾಳಿ ॥ ೫೬ ॥

ಗುರುಮಠವು ಧಾರ್ಮಿಕದುದೆನ್ನದೆ
ಹರಣ ಮಾಡುವ ಕೃತಿಯ ಪಾತ್ರದು
ಸರಿದು ಕೊರೆಯುವ ಗೊರಲಿಕ್ರಿಮಿ ತತ್ಪಾತ್ರ ಬಿಡದಂತೆ ॥
ಹಿರಿಮೆ ರೇಶಿಮೆ ವಸ್ತ್ರಗಂಬಳಿ
ಸುರುಳಿಯೊಳು ತಾ ಪುಟ್ಟತಿನ್ನುವ
ಕಿರಿಯ ಪುಳು ನುಸಿಯೊಲು ಕಾಡುವರಿಂತು ಪ್ರತ್ಯಕ್ಷ ॥ ೫೭ ॥

ಮಠಕೆ ನಿಜಮರಿಯೋರ್ವ ತತ್ಪದ
ದಿಟವ ತಿಳಿದೂ ಗೂಗಿಜನಗಳು
ಮಠಕೆರಡುಮರಿ ಇರಲೆನುವವರು ಮಗಳಿಗೆರಡು ವರ ॥
ದಿಟದಿ ಜೋಡಿಸಿ ಮದುವೆ ಮಾಳ್ಪರೆ
ನಟನೆ ನಿತ್ಯದ ನಾಗ ಸೋಗಿನ
ಕುಟಿಲ ಕಾರಸ್ಥಾನ ಪುರುಷರಿಗೇನು ಕೊರತಿಲ್ಲ ॥ ೫೮ ॥

ಇರುಮಠಕೆ ತಾನ್ಗೋರ್ವನಿರೆ ಬದಿ
ಇರುವ ಹಿರಿಮೆ ನಿರಂಜನ ಮಠಕೆ
ಎರಡನೆಯ ಮರಿ ಬಿಡುತೆ ಹಸ್ತಾಕ್ಷರವ ಮಾಡುತಿಹ ||
ಪರ ನಿರಾಭಾರಿಗಳ ಘನ ಗುಣ
ಸರಿಯೆನದು ತನ್ನಂತೆಯನ್ಯವ
ನರಿಯಲಾ ಕೈಲಾಸ ಭಿನ್ನಹವೆಂದ ಸರ್ವಜ್ಞ || || ೫೯ ||

ಪದ್ಧತಿಯ ನೋಡದಿಹ ಕೆಲಜನ
ಪೆದ್ದತನದಿಂ ಕೆಡಸುತಿಹರೈ
ಇದ್ದುದೀ ನಿಜ ಸಂಪ್ರದಾಯವನಳಿದು ತಮ್ಮನುವ ||
ಕದ್ದು ಕತ್ತಿಗೆ ತಾವೆ ಕಾವಿಯ
ನೆದ್ದಿ ತೊಡಿಸುತೆ ಮರಿಯ ಮಾಡುತ
ಲೆದ್ದ ಹದ್ದಿನ ಗುಣದ ಮಾನವರಿಂದು ಪ್ರತ್ಯಕ್ಷ || ೬೦ ||

ತತ್ವಕದು ವಾದವದು ಬರಿಯದ
ವಿತ್ತಕದು ಸರಿಯಲ್ಲವೆಂಬುವ
ಸತ್ವ ತಿಳಿಯದ ವೇಷಡಂಬಕರಿಂದು ಬೊಗಳುತಿಹ ||
ನಿತ್ಯ ಕೇಳಿರಲಿತ್ತ ಗುರುಕುಲ
ತತ್ವಭಾಸುರ ನುಡಿದ ಪರತರ
ತತ್ವಒಪ್ಪುವ ಸಮ್ಮತದ ವಟುನಾಮಕರಣವನು || ೬೧ ||

ಆದರೇನು ಆದಾವ ಕರ್ಮವೊ
ಸಾಧುವರ ಮೈಲಾರ ಬಸವನು
ಹೋದ ದಿನದಿ ಪ್ರಸಾದ ದೇವರಿಗಾದ-ಹುಲಿಘಾಯ ||
ಆದ ಘಟನೆಯ ನೆನಪಿಡಿಯುತ ವಿ
ಷಾದದಿಂದಾಕ್ಷೇಪ ವೆತ್ತಿದ
ಸಾಧುವಲ್ಲವು ಹುಳವು ಮುಟ್ಟಿದ ವಸ್ತು ಪೂಜೆಗದು || ೬೨ ||

ಸರಿಯೆನದಭಿಪ್ರಾಯವಿಡಲದು
ಭರಿತಗಣ ಶರಣಾಳಿಗದು ಚಕಿ
ತರಿಯೆ ವರಗುರುಹಸ್ತ ಮುಟ್ಟಿದುದೆಲ್ಲ ಪಾವಿತ್ರ್ಯ ||
ಭರಿಸುವದುವೆಂತೆಂಬುದನು ತಾ
ಮರೆತು ನುಡಿದೆಂಬುದನು ತಿಳಿಯಲು
ಸರನೆ ತಪ್ಪಿನದರಿವು ಮೂಡುತ ಪಡೆದ ಪಶ್ಚಾತ್ತಾಪ || ೬೩ ||

ಸದ್ಗುಣಿಗೆ ಪ್ರತ್ಯುತ್ತರಾಡಿದೆ
ಚಿದ್ಗುರುವಿಗೆದುರಾಡಿದೆನು ಅಸ
ಮದ್ಗುರುವಿನಡಿ ತಪ್ಪನೆಸಗಿದೆನೆಂದು ಮರಗುತಿರೆ ॥
ಸದ್ಘನತೆಯ ಮಹಾಂತ* ವಟುನುಡಿ
ಸದ್ಗತಿಗೆ ಗುರುಕೃಪೆಯೆ ತಾರಕ
ಸದ್ಘನತೆ ಸ್ತೋತ್ರವದೆ ಎನೆ ಶರಣರಿಗೆ ಸೂಚಿಸಲು ॥ ೬೪ ॥

ನೀತಿ ವಿದ್ಯಾಭ್ಯಾಸ ಮಾಡಿಸು
ವಾತ, ಮೂಢಗೆ ದಾರಿ ತೋರಿಸು
ವಾತ, ಚಿಕ್ಕವನಿರಲು ಹಿರಿಯನೆನುತಲಿ ಮನ್ನಿಸುವ ॥
ಮಾತು ಅಂಗೀರಸನ ಸುತ ಪ್ರ
ಖ್ಯಾತ ವಿದ್ಯಾವಂತನಿಗೆ ತ
ತ್ತ್ವಾತ ಕಕ್ಕಗೆ† ಕಲಿಸಿದಾ ನುಡಿಯಂತೆ ಮನ್ನಿಸಿದ ॥ ೬೫ ॥

ತಾನೆ ಮಾಡಿದ ತಪವ ಕ್ಷಣದೊಳು
ಮೇನಕೆಯ ಕಾರಣದಿ ತಪ್ಪಿರ
ಲೇನು ಮಾಳ್ಪುದು ಮತ್ತೆ ಮಾಡಿದನಾತ ವಿಖ್ಯಾತ ॥
ತಾನೆ ಯೋಚಿಸಲಾರದಯೆ ತಂ
ತಾನೆ ನುಡಿಯಲು ಖೇದಗೊಳ್ಳುತ
ತಾನೆ ಸ್ತುತಿಸಿದ ಮತಿಗಮಂಗಳನಳಿಸುದಕೆನೀತ ॥ ೬೬ ॥

ಶ್ರೀ ಗುರುವೆ ಸತ್ಕ್ರಿಯೆಯದಾಗರ
ಯೋಗೀಶ್ವರ ಸುಜ್ಞಾನ ಪದದಲಿ
ಬೇಗದೆನ್ನಯ ಮತಿಗೆ ಮಂಗಳ ಯಾಚಿಸುತನವನು ॥
ರಾಗದಿ ನಿರಂಜನದ ಗುರುಗಳ
ಯೋಗ ಬೋಧದ ಭಾಗ ತ್ರಿವಿಧ ಸ
ರಾಗದಿಂ ತನ್ಮೂಲಕಂ ಪ್ರತಿಪಾದಿಸಿದನಿಂತು ॥ ೬೭ ॥

ಸ್ತುತಿಯ ಗೈಯ್ಯುತ ಸಾಗಿದನು ರಸ
ಗತಿಯ ಸಾತ್ವಿಕ ಕಾವ್ಯ ತ್ರಿವಿಧಿಯ
ತತಿಯಕ್ರಮಗತಿವಿಡಿದು ವಿವರಣ ವಿಷಯ ಬೆಡಗಿನೊಳು ॥
ಜೊತೆಯದಾ ಬಿನ್ನಾಣ ಬಿಡುತಂ
ಗತಿಯು ಛಂದದ ಬೀಗ ಬಂಧುರ
ಮತಿಯ ಮುಂದೋಡಿಸಿದ ಮಧುರಾಗರ್ಭ ತತ್ವಾಂಗ ॥ ೬೮ ॥



*ಬಾಲಲೀಲೆ ಮಹಾಂತ ವಟುಗಳು †ಮನು-೨/೧೫/೧. ೨೫೨.

*ದೇಶಿಕನೆ ಪರಮುದನುಭಾವೋ
ಲ್ಲಾಸಕನೆ ಸಂಕಲ್ಪಗಳ ನಿಜ
ನಾಶಕನೆ ತ್ರೈಮಲದ ಚಕ್ರ ನಿರಾಸಕನೆ ಗುರುವರನೆ ॥
ಭಾಷೆ ತಪ್ಪುತೆ ಚರಣಸನ್ನಿಧಿ
ಘಾಸಿಯಾದೆನು ಮನಕೆ ಮಹತರ
ನೀಶ ಸಂತತಿ ಕರ್ತನೆಂದೆರಗುವೆನು-ಕೃಪೆಯಾಗು ॥ ೧೯ ॥

ಕೆರೆಯೊಳಗೆ ನುಡಿಗೊಮ್ಮೆ ಮಾರ್ನುಡಿ*
ಭರತ ತೆರ ನೀ ಹೊಕ್ಕು ನುಡಿಸಿದ
ಪರಿಯೊಳಾ ನುಡಿದೆನ್ನ ಕೃತಿಮತಿ ಮರೆತು ಕರುಣದಲಿ ॥
ಭರಿತ ಗರ್ಭದ ಸ್ವಾನುಭಾವದ*
ಪರಿಯನಾನೇನ್ ಬಲ್ಲೆನೈ ಹರ
ಗುರುವೆ ನೀನೇ ಪೊಕ್ಕು ನುಡಿಸಿಹುದಂತೆ ನಾನುಡಿದೆ ॥ ೨೦ ॥

ಆವ ಜಾತಿಯ ಜಾಲದಿ ಬಿದ್ದಿರ
ಲಾವನಿರೆ ಕೈವಿಡಿದವನೆ ಪರ
ದೇವ ಪರತರ ಪಾವನಾತ್ಮಕ ಗುರುವೆ ಕೃಪೆಯಾಗು ॥
ಭಾವ ಭೇದವನಳಿದು ನಿಜತಮ
ಭಾವ ನೀತಿಯ ಮಾರ್ಗ ಪೇಳಿ ಸ್ವ
ಭಾವ ನಿಶ್ಚಿತಗೊಳಿಸುವಂತಹ ಗುರುವೆ ಕೃಪೆಯಾಗು ॥ ೨೧ ॥

ದೊರೆಯೊಲಿದ ಬಡವಂಗೆ ಬಂಧುರ*
ಧರೆಯ ಮನ್ನಣೆಯುಂಟು ಮಹತರ
ಗುರುವೆ ನೀನೊಲಿದಿರುವ ಶರಣಂಗಾರು ಸರಿಯುಂಟು ॥
ಪರಮ ಶ್ರೀ ಗುರು ಗೆಳೆಯ* ಸತ್ಯ
ಶರಣ ಮಾಯಾಪಾಶ ಹರಿಯುವ*
ಕರುಣೆ ಶ್ರೀ ಗುರುತಾಯಿ ನೀನೆನಗೀಗೆ-ಕೃಪೆಯಾಗು ॥ ೨೨ ॥

†ನೆಲದ ಮರೆಯ ನಿಧಾನ ನೋಡದೆ
ಫಲದ ಗರ್ಭದ ರುಚಿಯ ರುಚಿಸದೆ
ಶಿಲೆಯ ಗೂಢದ ರನ್ನ ಪುಷ್ಪದ ಮರೆಯಗಂಧವನು ॥
ಲಲಿತ ಕಾಷ್ಠಾಗ್ನಿಯನು ತಿಳಿಯದೆ
ಯುಳಿದ ತನುಕಲೆ ನೋಡುತಾಡಿದೆ
ಬಲ ಚಿದೈಶ್ವರ್ಯ ಚಿರಸುಖಿ ಗುರುಮೂರ್ತಿ ಕೃಪೆಯಾಗು ॥ ೨೩ ॥

*ಗು-ಕ-ತ್ರಿ-೩, ೧೩, ೧೫, ೨೫, ೨೬, ೭೬. †ಅಕ್ಕನ ವ-೧೦೫,

*ಶಿರಣಿಯ-ಕ್ರಿಮಿ ತನ್ನ ಸ್ನೇಹದಿ
ಯಿರಿಸುತಾನೇ ನೂಲಿನಿಂ ತಾ
ಭರಿಸಿ ಸಾಯುವ ಸ್ಥಿತಿಯು ನನ್ನತಿ ಸ್ಥಿರತೆ ಕಳೆಯುತಲಿ ॥
ಕರುವನಗಲಿದ ಹಸುವು ಲಕ್ಷಿತ
ವಿರಿಸುವಂತೆಯೆ ಕುಂಜರದು ಕುಲ
ಕರಿವವೊಲು ಬಾ ಕಂದ ನನ್ನೆಡೆ ಎನುತೆ-ಕೃಪೆಯಾಗು || ೭೪ ||

ಪಿಂಡ ಪಿಂಡಜ್ಞಾನ ಸಂಸಾ
ರಾಂಡ ತಿಳಿಮೆಯ ತೀರ್ಥ ಮತಿಗಳ
ಗಂಡ ತಿಮಿರ ಪ್ರಚಂಡ ಪ್ರತಿಭಾಭಕ್ತವತ್ಸಲನೆ ॥
ಕುಂಡ ನೋಡದೆ ಬೀಳುತಿಹುದನು
ಕಂಡು ಸುಮ್ಮನೆ ನೋಳ್ಪುದೇನದು
ಕಂಡು ಕೈಪಿಡಿದೆತ್ತಿದಯ್ ಶ್ರೀದೇವ-ಕೃಪೆಯಾಗು || ೭೫ ||

ಭಕ್ತಿಮತಿ ಬಸವಣ್ಣ ಜೀವನ
ದುಕ್ತಿ ತಿಳಿವುದು ಎಡಹಿದಾಕ್ಷಣ
ಮುಕ್ತಿದಾಯಕ ಪ್ರಭುವು ತಿಳಿವುತ ಮುದ್ದಿಸದೆ ಇಹನೇ ॥
ಮುಕ್ತನಲ್ಲವು ನೀನೆಯೆನ್ನುತೆ
ರಕ್ತಿಯಿಂ ಬೇಡುವೆನು ಕ್ಷಣದಾ
ಸಕ್ತಿಯಿಂದೆತ್ತಲ್ಕೆ ಮುಕ್ತನು ಶೀಘ್ರ ಕೃಪೆಯಾಗು || ೭೬ ||

ಪುಸಿಯದಿಂ ನಿಜದೆಡೆಗೆ ವಿಸ್ಮಯ
ವಿಷಯದಿಂ ವಿಷಧರನೆಡೆಗೆ ಮೇಣ್
ಎಸೆವದಮೃತ ತತ್ವದೆಡೆ ಕರೆದೊಯ್ವ ಸದ್ಗುರುವೆ ॥
ಮುಸಕು ಭಾವನೆಯುಳಿದ ಲಿಂಗದ
ಭಿಸಿತ ಸತ್ವವುಧರಿಗೆ ಮಾನ್ಯದ
ರಸದ ನಿಜಶಿಷ್ಯರಿಗೆ ಹೃದಯಾರಾಧ್ಯ-ಕೃಪೆಯಾಗು || ೭೭ ||

ನಿನ್ನ ನಡೆ ನುಡಿ ನನ್ನದಾಗಲಿ
ನಿನ್ನ ಗತಿಪಥ ಮುಂದೆನಾನಿರ
ಲೆನ್ನದಾಪೇಕ್ಷೇನಿರದು ಶ್ರೀ ಜಾಣ ನಿನದೆನಲೆ ॥
ನಿನ್ನದು ಸಮಸ್ತಯತೆ ದೇವರ
ಧನ್ಯ ಮಾಳ್ಪನೆ ಭಾವ ಪ್ರೇರಕ
ನಿನ್ನ ಸಮಸೀಂ ನನ್ನ ಬೇಡಿಕೆ ಗುರುವೆ-ಕೃಪೆಯಾಗು || ೭೮ ||

*ಅಕ್ಕನ ವ ೩೨

ಆರರಿಯದಿಹ ಬಯಲ ನಿಲವಂ
ತೋರಿ ಕರದಲ್ಲಿಟ್ಟ ಗುರುವೇ
ನೀರು ಕ್ಷೀರದ ತೆರದಿ ಗುರುಶಿಷ್ಯರೊಳು ಮೊದಲಾರೋ ॥
ತೋರದೆನಗದು ನೀರಡಿಸು ತಾಂ
ನೀರ ನೀರೆಂದಂತೆ ನನ್ನಗತಿ
ನೀರರಿತ ಹೆತ್ತಪ್ಪ ಹರುಷದ ಗುರುವೆ ಕೃಪೆಯಾಗು ॥ ೭೯ ॥

ಗಂಧ ಚಿರತಮ ಬಂಧು ಲಿಂಗಾ
ನಂದ ಗುರುವೇ ನುಡಿದೆ ಮದ ತೆರ
ದಿಂದೆಯಾಕ್ಷಣ ಹೊಂದಿ ಮಾವುತ ಗುರುವೆ* ಕೃಪೆಯಾಗು ॥
ಹೊಂದಿ ಟೆಂಗಿನಕಾಯಿ ಮೇಲದು*
ಕಂದ ನಾನಿರೆ ಕೆಳಗೆ ಶ್ರೀ ಕರ
ದಿಂದೆ ಕುಡಿಸೈ ಸತ್ಯ ಚಿರರಸ ಬಂಧು-ಕೃಪೆಯಾಗು ॥ ೮೦ ॥

ಮಾತು ಬಯಲೊಳು ಬಯಲುವಾದರು*
ರೀತಿರದ ಕಿಡಿ ಮಾತು ಮರೆಯದು
ರೀತಿ ಬಯಲೊಳಗೆ ತನು ಬಯಲಾಗುವಾ ಮುನ್ನ ॥
ಖ್ಯಾತ ಗುಣ ಸಂಪ್ರೀತ ಘಟಿಸಿ ವ
ಮಾತಿನ ತನಃಮನ ದಹಿಸುತಿದೆ ನಿ
ಮ್ಮಾತ್ರೆ ಸಿಂಚನವೊಂದೆ ಗುರುಸಂಪ್ರೀತ-ಕೃಪೆಯಾಗು ॥ ೮೧ ॥

ಸೋಲದೆ ಗುರುರಾಯ ಸೋಲಿನ*
ಮೇಲು ಸುಖನಿನಗಯ್ಯಾ ಸೋತೆನು
ಸೋತು ಗೆದ್ದಿಹ ಸುಖವು ಬೇರೆನೆ-ತಂದೆ ಕೃಪೆಯಾಗು ॥
ಮೇಲೆನಿಪ ಒಡಲಾಗ್ನಿಯಂ ನಿ
ಮ್ಮೊಳಗಿನ ಕಮನೀಯವಿರುವ ಸು
ಶೀಲದಿಂ ಶಾಂತಿರಿಸಲೆಂದೇ ಸುಳಿದೆ-ಕೃಪೆಯಾಗು ॥ ೮೨ ॥

ಗಾಳಿಗ್ಹಾರಿಸುವಾ ಪತಂಗದ
ನೂಲು ಸೂತ್ರರೆ ಬಾಲದೃಷ್ಟಿಯ
ಮೇಲೆ ಪಡೆಯದೆ ಹಾರದೈ ಭವಭಾರಿಯರಿಯುವರೇ ॥
ತೇಲುವಾ ನಾವೆಯಿರೆ ಕಾಯದ*
ತೇಲು ಸದ್ವಿದ್ಯಾಂಗ ಕಲಿಸಿರೆ
ಖಾಲಿಯಾಗಿಹ-ಕಾಯಯಾರಿಂಗೆ-ಸುಳಿದು ಕೃಪೆಯಾಗು ॥ ೮೩ ॥

*ಗು. ಕ. ಶ್ರೀ. ೪೦, ೫೦, ೬೦, ೬೩, ೬೮.

ಭೂಮವಿದ್ಯಾ ಸತ್ಕಾಮಿನಿಯು ನಾಚಿ
ಭೂಮ ರಸಿಕತೆಗಾಮಿ ನೀ ಸ
ದ್ಧಾಮೆ ನಾಯಕಿಗಂತು ಸದ್ಬೋಧಕ ಸುನಾಯಕನೀ ॥
ಧೀಮ ಸಚ್ಚಿದಸಂಗಸುಧೆ ನಿ
ಸ್ಸೀಮ ನೋಟದ ಬೃಕುಟಿಯೊಳು †ನಿ
ಷಾಮಿ ಪ್ರಣಯಿನಿಯೆಂದೆ ನೆಲೆ ನಿರ್ಮೋಹಿ ಕೃಪೆಯಾಗು ॥ ೮೪ ॥

ತಗಣೆ ತಗೆದರೆ ತೊಗಲು ತಗೆವರೆ
ಸಗಣೆ ಸಿಡಿದರೆ ಪಟವ ಸುಡುವರೆ
ಸೊಗಸು ಶಿಶು ಹಿಟ್ಟೆಲ್ಲ ಕದಡಿರೆ ಕಿಡಿಯಕಾರುವಳೇ ॥
ಮಿಗಿಲದಾಶ್ರಯ ಧರೆಯುರಿದೊಡಾ
ಸೊಗಸುಬಾರದು ದೂರುದೆತ್ತಣ
ನಗುತಲಾ ಗಂಗಾವಶರಣಂಗೊಳಿಸು-ಕೃಪೆಯಾಗು ॥ ೮೫ ॥

ಆಲಿಸೆನ್ನಯ ಬಿನ್ನಪವನುರೆ
ಲಾಲಿಸೆನ್ನಯ ಬಿನ್ನಪವಸಲೆ
ಪಾಲಿಸೆನ್ನಯ ಬಿನ್ನಪವಬಲು ಮೊರೆಯ ಕೇಳಿಸದೆ ॥
ಬಾಲಮತಿಯುತ ಚಿದ್ವಿಲಾಸದ
ಲೋಲ ತೊಟ್ಟಿಲ ಶಿಶುವು ಶಬ್ದದ
ಸಾಲು ತಿಳಿಯುತ ಲಾಲಿಸೈ ಶ್ರೀ ಗುರುವೆ ಕೃಪೆಯಾಗು ॥ ೮೬ ॥

ವೀರಶೈವದ ಕಾಮಧೇನುವೆ
ವೀರದೇಶಿಕ ಚನ್ನಬೋಧಕ
ಸಾರದನುಭವ ಸಹಪರಾಗ ಪ್ರಸಾದಪದಬಂಧ ॥
ನೇರ ಸದ್ಗುರು ಸನ್ನಿಧಿಯೆ ಸುವಿ
ಚಾರ ಚಿರದನುಭೂತಿ ಸುಸ್ವರ
ಧಾರೆಯಾಲಿಸಿ ಕರಗಿ ತಾ ಹೊರಬಂದ ಸಾನಂದ ॥ ೮೭ ॥

ಅರಳಿಸುವ ರವಿ ಹೊರಬರಲು ಕೈರವ
ಶರಣ ಮುಚ ಮುಖವರಳಿ ನಮಿಸುತೆ
ಪೊರೆ ಸದಗುರುವೆ ಕರರುಹದಿರವೆ-ಗದ್ಗಧದ ನುಡಿಗೆ ॥
ಕರುಳರಳಿ ಕರದೆತ್ತಿ ಧರ್ಮಾ
ಚರನು ಜ್ಯೋತಿರ್ಲಿಂಗ ತುಂಗನು
ಕರುಣದಿಂ ಮೈದಡವಿದಾಗಲೆ, ನಯನ ಹನಿಯಾಯ್ತು ॥ ೮೮ ॥

† ಗು. ಕ. ತ್ರಿ. ೬೫, ೬೮.

ಶಾಂತ ಸತ್ಯಾದೂಢ್ಯಪಾದಾ
ಕ್ರಾಂತ ಕುಲ ಪರಿಪಾಲನಿಧಿ ನಿರ್
ಭ್ರಾಂತ ನಿತ್ಯಾನಂದ ಜ್ಞಾನೋದ್ಧಾರ ಗುರುವರನು ||
ಚಿಂತನದ ಶರಣಂಗೆ ಸದ್ಗುರು
ಕಾಂತ ಜ್ಞಾನೋತ್ಪತ್ತಿ ಪ್ರಭೆಯ ಮ
ಹಾಂತ ಬೋಧ ಪ್ರಸಾದ ಶರಣಗೆ ತತ್ವತಿಳಿಸುತಲಿ || ೮೯ ||

ಮಂದಮತಿಯುಳ್ಳವರು ದೋಷವ
ಹೊಂದಿ ಮಾಡುವರುಂಟು ತಿಳಿದವ
ರಿಂದ ತಪ್ಪಾಗುವದು ಚಕಿತೈ ಆಯ್ತು ನಿನ್ನಿಂದ ||
ಹೊಂದುತಾ ನಿಜದಂತರಂಗದ
ಗಂಧದಷ್ಟಾವರಣ ಸ್ಥಿತಿಯನು
ಹೊಂದಿ ಯನುಭವಿಯಾಗಿಯಾಡಿದೆ ಸಲ್ಲದಾಸ್ವರವ || ೯೦ ||

ಫಲದೊಳಡಗಿದ ಗೌಪ್ಯರಸದೋಲ್
ನಿಲವನಷ್ಟಾವಕ್ರನಾ ಹೊರ
ಚಲುವನೇ ಕಂಡವರು ನಕ್ಕಂತಾಯ್ತು ನಿನ್ನನುಡಿ ॥
ಸುಳಿದ ಮಾಯೆ ಪ್ರಪಂಚಮರವೆಯು*
ನಳಿಯುವದು ಸಂಸ್ಕಾರದಿಂದದೆ
ತಿಳಿಯಲಾರದೆ ನುಡಿದೆ ನಿನ್ನಂಥವನೆ ಚಕಿತೆನಗೆ || ೯೧ ||

ಗಡಿಗೆ ಸುಡದಲೆ ಒಡಿದು ನೋಡಲ
ದೊಡೆಯದಿಹದೇ ಹೊರಗಿನಾ ದೋ
ಷೋಡಲ ಲಕ್ಷಿಷ ದೃಷ್ಟಿಯದು ಚಾರ್ವಾಕ ಸಮವಾಯ್ತು ||
ಹುಡುಕಲದು ಹುಳಕಡಿದ ಕುಡಿದಿಹ
ಕಡಲಹವೆ ಫಲ ಕ್ಷೀರವೆಲ್ಲವು
ನಡೆದಿಹುದ ಪ್ರತ್ಯಕ್ಷ ಜಂಗಮ ತತ್ವ ತಿಳಿದಿರಲಿ || ೯೨ ||

ಟಿಂಗಿನೊಳಗಿನ ತಿರಳಳಿದು ಬಹಿ
ರಂಗ ಪರತೆಯ ಭುಂಜಿಪುದೆ ಹೊರ
ರಂಗ ದತ್ತಿಯ ಫಲದ ಒಳಕ್ರಿಮಿಗಂಪು ಸಮ್ಮತವೇ ॥
ಕಂಗಳಿದು ಕಂಡಿಹುದ ನೋಳ್ಪುದು
ಸಂಗಮನ ಶರಣಾಳಿ ಲಿಂಗ ಚಿ
ದಂಗ ಲಕ್ಷಿತರಂತು ಗಣದ ತ್ರಿಭಂಗಿಗೇನೆನುವಿ || ೯೩ ||

* ಚ. ಬ ವ- ೪೧

†ಇಷ್ಟಲಿಂಗವ ಸವಿಯುತಿಹ ಸಂ
ತುಷ್ಟಿ ಶರಣಗೆ ಶಂಕೆಬರದದು§
ಕಷ್ಟ ಕರಣಾದಿಗಳಿಡಿದು ವರ್ತಿಸುವ ಪರಿಯೇಕೆ ॥
ಸ್ಪಷ್ಟ ಕುರುಹದು ರೂಪದಿಂ ಹೊರ‡
ದೃಷ್ಟಿಗದು ಕಾಣುತಿರೆ ಮಹ
ನಿಷ್ಠೆ ಸುಜ್ಞಾನಾಂಜನವ ಹಚ್ಚುತ್ತ ನೋಡೆಂದ ॥ ೧೪ ॥

ಭಾವವದು ತಾನಲ್ಲಿ ನಿರ್ಮಲ *
ಭಾವಕನು ತಾನಾಗಿ ಇರುತಿಹ
ದೇವನಿಗೆ ತನುಭಿನ್ನತೆಯ ಬಡಮತಿಯ ಕಥನೇಕೆ ॥
ಕೇವಲದ ಕುರುಹನ್ನೆ ಪೂಜಿಪ
ಜೀವಿ ತೆರನಂತಾಯ್ತು ನಿನ್ನತಿ
ಭಾವಭರಿತಗೆ ಬಂದಿತೇಕೋ ಚರ್ಮಲಕ್ಷ್ಯವದು ॥ ೧೫ ॥

ಜ್ಯೋತಿಯೊಳಗಿನ ಜ್ಯೋತಿಯಾಗುತ
ಮಾತಿನೊಳಗಿನ ನೀತಿಯಾಗುತ
ಮಾತು ಮನವು ಮಹಾ ಘನದಿ ನೆಲೆಗೊಂಡಿರಲು ಪರಮ ॥
ಖ್ಯಾತ ಶರಣನು ಅವನೆ ತಿಳಿದಿರ
ಲಾತನಿಗೆ ಭ್ರಮೆಯೆಂತು ಇಹುದೈ
ರೀತಿ ಶರಣಂಗಾವ ಭ್ರಮ † ಶರಣಪ್ಪ ಕೇಳೆಂದ ॥ ೧೬ ॥

ಶ್ವಾಸಪರಿಮಳವಿರಲು ಪುಷ್ಪದ
ಹಾಸಿಗೇಕದು ಜಂಗಮನ ಸ್ಥಿತಿ
ಭೂಷಣತೆ ಮನಗಂಡವಗೆ ಹೊರನೋಟವೇಕಯ್ಯಾ ॥
ಲೇಸೆನಿಸುವಾ ವಸ್ತುಗಳ ಸಹ
ಸೂಸುಗಂಧವನೊಪ್ಪುವರು ಬಾಧೆ
ಸೋಸಿ ಸಂದೇಹಿಸರು ತುಂಬಿರೆ ತುಳುಕದೆನಿ ☐ ತಯ್ಯಾ ॥ ೧೭ ॥

ಕೃತಿ ಪರೀಕ್ಷಕ ನೀನೊ ಮುಂದಿನ
ಗತಿ ನಿರೀಕ್ಷಕ ನೀನೊ ಸಂಕುಳ
ಶ್ರುತಿ ನಿರೀಕ್ಷಕ ನೀನೊ ನಾನೋ ತರಳಹೇಳಯ್ಯಾ ॥
ಶ್ರುತಿ ನಿರೀಕ್ಷಣೆಯೆನ್ನ ಮಾಳ್ಪುದೆ
ಶ್ರುತಿ ನಿರೀಕ್ಷಕ ನಾನೆನುವ ಸ
ನ್ಮತಿಯ ತಿಳಿಯದೆ ನುಡಿಯ ಸ್ಫೋಟನೆಯೇಕೆ ಕಂದಯ್ಯಾ ॥ ೧೮ ॥

† ಚ.ಬ.ವ. ೫೭೪, § ಚ.ಬ.ವ. ೫೫೧, ‡ ಚ.ಬ.ವ. ೫೫೮.
* ಚ.ಬ.ವ. ೫೫೮, † ಚ.ಬ.ವ. ೫೫೦, ☐ ಅಕ್ಕನ-ವ-೨೪೩.

ಬೇರು ಎಲೆ ಮರ್ದನದಿಯೌಷಧ
ಸಾರ ರುಜೆ ಕಳೆವಂತೆ ಕೃಪೆ ಸಂ
ಸ್ಕಾರದಿಂ ತ್ರಿವಿಧಾಂಗ ಶುದ್ಧೀಕರಣವಹುದಲ್ವೆ ||
ಧಾರೆಯೊಳು ರಸಬ್ರಹ್ಮ ಸೂಕ್ಷ್ಮತೆ
ಸೇರಿಕೊಂಡಿರುವಂತೆ ಗುರು ಸುವಿ
ಚಾರ ಬೋಧಸ್ನಾನದಿಂ ಪರಿಶುದ್ಧಿಯಹುದಲ್ವೆ || ೯೯ ||

ಗುರುಕರುಣೆಯಿಂ ಪ್ರಕೃತಿಭಾವನೆ
ಹರಿಯುತಲ್ಲಿಯೆ ಸುಕೃತಿಭಾವನೆ
ಸುರಿದು ಸಂಸ್ಕೃತಿ ಬದ್ಧ ಶೋಧಿಸುತೆದ್ದ ಸ್ಥಿತಿಹೊದ್ದ ||
ಸರಳ ಸರಳತೆ ಸಿದ್ಧ ಸೇವನೆ
ಭರಿತ ದೃಢತೆಯೊಳೆದ್ದ ಗಂಭೀ
ರಿರವ ಮಾನಸ ಸರಸಸಾಗರಮೆದ್ದ ಮಧುಬದ್ಧ || ೧೦೦ ||

ಪಣತೆ ಕಲೆಕಲೆಯಿಂದ ಕೂಡಿರೆ
ಗಣತೆಗದು ಬರದಿಹದೆ ಜ್ಯೋತಿಯ
ಕಣಕಣತೆ ಹೊರಸೂಸುತಂಥವ ಕಳೆಯದಿಹದೇನು ||
ಅನಿತು ಶಶಿಕಲೆ ಭರಿತವಿರೆ ಜಗ
ಜನಕೆ ತೋಷವ ನೀಡದಿಹದೇ
ಗಣಿತ ಮೌಖಿಕ ಗೊರಲಿಡಿದ ಶ್ರೀಗಂಧ ಎಣಿಕೆಇದೇ || ೧೦೧ ||

ಒಡಲು ಗರ್ಭದುವನ್ನ ಪೋಷಣೆ *
ಯೊಡಲು ಜಲಮಲ ಭೋಗ ನಿದ್ರೆಯ
ದೊಡಲು ಪಿಂಡೋತ್ಪತ್ತಿ ಪತಗತಿ ಪ್ರಕೃತಿರತಿ ಭ್ರಾಂತಿ ||
ವ್ಮಡ ಗುರುಕರದಿ–ಪುಣ್ಯ ಪೋಷಣೆ
ಬೆಡಗು ಸುಜಲಂ ಯೋಗನಿದ್ರೆಯ
ದೊಡಲು ಜ್ಞಾನೋತ್ಪತ್ತಿಯುಪರತಿಯೇಳ್ಗೆ ಶಿವಶಾಂತಿ || ೧೦೨ ||

ದೀಪದಿಂ ದೀಪವದು ಜನಿಸಿರೆ
ಲೋಪದೋಷಗಳೇನು ಕಾಣವು
ದೀಪದಿಂ ದೀಪಾಗಿ ತೋರ್ಪುದು ಮಾಪನಿರುವಂತೆ ||
ಶ್ರೀ ಪರಮದೇವನೊಳಿಟ್ಟಹು †
ದಾ ಪವಿತ್ರತೆ ಭಾವವನ್ನೇ
ತಾಪಸೋತ್ರಮ ಗುರುವಿನೊಳಿಡಲು ಬರದು ಸಂಶಯವು || ೧೦೩ ||

* ಸಂಸ್ಕಾರ–ಮುನ್ನುಡಿ–p–೨೨ † ಶ್ವೇತಾಶ್ವತರ–[illegible] ಸ. ಶಿಖಾಮಣಿ ೧೧/೨೪.

ಕೃಪೆಯುಗುರಿ ತನುಶುದ್ಧಿ, ಶುದ್ಧತೆ
ತಪದಗುರಿ ಶುಭಸಿದ್ಧಿ ಸಿದ್ಧತೆ
ಸಫಲ ಗುರಿಯು ಪ್ರಸಿದ್ಧಿ, ಸಿದ್ಧಿಯು ಕಾಮನೆ ವಿರಹಿತಂ ||
ತಪದ ತಪ್ತತೆಯೊಳಗೆ ಹೊಳೆದಿಹ
ಸುಫಲ ತೃಪ್ತಿಯ ತೀರ್ಥ ಕೀರ್ತಿಯು
ವಿಫುಲ ತನ್ನಿಂ ತಾನೆ ಪ್ರಸರಣವೆಂದೆ ನಿಶ್ಚಯಿಸು || ೧೦೪ ||

ತತ್ವಪ್ರಿಯ ನೀನಿರಲು ಜ್ಯೋತಿಯ
ನಿತ್ತೆ ನೈಜ ಶುಭತ್ವ ನಿನಗಂ
ಚಿತ್ತವಿಟ್ಟೇ ಕೇಳ್ದೆಯಲ್ಲವೆ ಕಂಪನತಿಗಳೆದು ||
ಮತ್ತೆ ಬರದಂತಿರಲಿ ಸಂಶಯ
ಸತ್ತೆ ಹೋಗಲಿ ಮರಳಿ ಚಿಗುರದ
ಚಿತ್ರಭೆಯು ಸುತ್ತೆಲ್ಲ ಹರಡಲಿ ನಿನದೆನಲು ಶರಣ || ೧೦೫ ||

ಶ್ರೇಷ್ಠ ನಿನ್ನಯ ಬೋಧ ಭ್ರಾಂತಿಯ
ನಷ್ಟ ಮಾಡಿತು ಹರ್ಷ ಹೊನಲಿತು
ಬಿಟ್ಟನುಡಿ ಮರೆತಂತುವರಿಸಿದೆಯಾವಕಾಲದೊಳು ||
ಸ್ಪಷ್ಟ ಮರೆಯೆನು ಹೃದಯ ಸಂಭ್ರಮ
ಸೃಷ್ಟಿ ಶ್ರೀಕರ ಸ್ಪಷ್ಟ ನಿರುಪಮ
ನಿಷ್ಠೆಯಿಂ ತಿರುತಿರುಗಿ ನೆನೆವೆನು ಪಾದವೇ ಸಾಕ್ಷಿ || ೧೦೬ ||

ಗುರುವೆ ನೀ ನೊಲಿದಾತ ಕುಲಜಂ
ಗುರುವೆ ನೀ ನೊಲಿದಾತ ಜಲಜಂ
ಗುರುವೆ ನೀ ನೊಲಿದಾತ ವಂದಿತ ಪರಮ ಜಂಗಮನು ||
ಗುರುವೆ ನೀ ನೊಲಿದಾತನೆ ಸದಾ
ಗರಿಮೆ ನೀನೆಯವಂ ದೃಢತೆಯಾ
ಗುರುತರದ ಸಂಸ್ಕಾರ ಶ್ರೀವರ ಕ್ಷಮಿಸು ಕ್ಷಮಿಸೆಂದ || ೧೦೭ ||

ಬಸವ ಬಸವನೆ ಪ್ರಭು ಪ್ರಬುದ್ಧನೆ
ಬಸವ ಬಸವನ ಚಿರ ಚಿದಂಗನೆ
ಬಸವ ಬಸವನ ಚಿರ ಸದಂಗನೆಯೆನುತ ಕಂಪಿಸಲು ||
ಬಸವಲಿಂಗನ ಅರಿಕೆ ತಿಳಿದಿಹ
ಬಸವ ಪ್ರೀಯನ ಹೃದಯವರಳುತ
ಬಸವಲಿಂಗನೆ * ಬಾಯೆನಲು ತಾ ಬಸವ ಸಂತುಷ್ಟಿ || ೧೦೮ ||

* ಗು-ಕ-ತ್ರಿ-೩೩೨.

ಮೇಲು ನೋಟದು ಕೆಳಗೆ ಕೆಳಗಿನ
ಸೋಲು ನೋಟದು ಮೇಲೆ ಮಗ್ಗುಳ
ಮಾಲೆ ಭೂಷಿತ ಕಿರಿಮಹಾಂತರ ನೋಟರೀರ್ವೆಡೆಗೆ ||
ಸೋಲು ಸೋಲೆನದಾಯ್ತು ಸಂಗಮ
ಶೀಲ ಸದ್ರಸವಾಯ್ತು ಗ್ರಹಣದ
ಬಾಲಳಿದ ಶಶಿ ತರಣಿ ಪ್ರಭೆ ತೇಜಾಯ್ತು ಗುರುಕುಲದಿ || ೧೧೯ ||

ಸತ್ಯ ಸುಖದಾದರ್ಶ ಸೂಕ್ತಿಯ
ಭೃತ್ಯನೊಳು ಭರಿತಾಗಿ ಬಂಧುರ
ಸತ್ಯಶಿವಮಯ ಸುಂದರಾಂಗಣವಾಗಿ ಸಮ್ಮಿಲನ ||
ತಥ್ಯವದು ಮತಿ ಹೃದಯ ವಿಕಸನ
ಸ್ತುತ್ಯಕದುವೆ ಕಾರಣಾಯ್ತದು
ಹೃತ್ಕಮಲ ಲಕ್ಷಿತನ ಲಕ್ಷದಿ–ಬಸವಲಿಂಗಾದ || ೧೧೦ ||

ಶುದ್ಧವಹುದಂಕಲಗಿಯಡವೀ
ಸಿದ್ಧ ಚರಣಾಶ್ರಯದಿ ಸ್ಥಾಪಿಸ
ಲೆದ್ದ ಪುರ ಮರೆಗುದ್ದಿ ಮಠವಿದುಯಡವಿಸಿದ್ಧೇಶ ||
ಬದ್ದಿದಕೆ ಗುರುವಂಶದೊಳು ಕ್ರಮ
ಬದ್ಧ ಗುರು ಗುರುಪಾದ ಕೃಪೆಯಿಂ
ದೆದ್ದ ಗುರು ನಿರುಪಾಧಿ ಕೃತಿಯೋಳ್‌ಗೆಂಟನೆಯ ಸ್ಥಲವು || ೧೧೧ ||

ಅಂತೂ ಸ್ಥಲ ಲಕ್ಕಂ ಪದ ೧೧೧ ಕ್ಕಂ ಒಟ್ಟು ೪೨೭ ಕ್ಕಂ
ಮಂಗಲಂ.

ಓಂ

# ಒಂಬತ್ತನೆಯ ಸ್ಥಲ

ಸೂಚನೆ—

ಸ್ಪಷ್ಟ ತಿಳಿಸಿದ ಅರ್ಚನಾರ್ಪಣ
ನಿಷ್ಠೆಯನುಭವ ವಿವರ ಬೋಧದು
ಶ್ರೇಷ್ಠದನುಭವಿ ಚನ್ನವೀರ ಮಹಾಂತಕ್ರಮದಿಂದ ||

ಭೀಡ ಜಿಲ್ಹೆಯ ನಿಸರ್ಗ ರಮ್ಯತೆ
ಕಾಡು ಕಪಿಲಾಧಾರ ಕ್ಷೇತ್ರದ
ಕೋಡಿ ಶಿವಗಂಗಾ ಪ್ರಪಾತದ ಮಹಮಹಂತನಿತು ||
ನಾಡೆಯಷ್ಟಾವರಣ ನಿಷ್ಠೆಯ
ಜೇಡಿ ನುಡಿಯುತಭಂಗ ಬರೆದಿಹ
ನಾಡೆ ಮನ್ಮಥ * ಪರಮ ಶಿವಯೋಗಿಯನು ಸ್ಮರಿಸುವೆನು || ೧ ||

ಹೊಂಗಿರಣ ಹೊರಸೂಸಿ ಹಸಿರಿನ
ರಂಗಿಡಿದ ರಾಗಿಣಿಯ ತೇಜಕೆ
ಸಂಗಮನ ಸಿರಿಯಂತೆಯರಳಿದ ಬಿಲ್ಪಸಂಪಿಗೆಯ ||
ಸಂಗಿಡಿದ ಸುಮದುಂಬಿ ಮುದ್ದಿಸು
ತಂಗವಿಸಿ ಕೊಂಡಿರುವ ರಜರುಚಿ
ರಂಗಧರ ತಾಂಬೂಲ ಶೋಭೆಯದಂಗ ಪಂಖಗಳು || ೨ ||

ತರುಮರಾದಿ ರಸಾದಿ ನವರಸ
ವಿರೆ ಸ್ವರಾದಿ ಪ್ರಭಾತ ಗೀತೆಯ
ಪರಿ ಪಿಕಾದಿಂಚರದ ಪ್ರಾತಃ ಸ್ಮರಣೆ ಸೂಕ್ತಿಸುಧಾ ||
ಸರಣಿಡಿದ ಶೃಂಗಾರಿಣಿಯವೊಲು
ಭರಣಿಡಿದ ರಸರಾಣಿ ಪ್ರಿಯಪದ
ಚರಣದೆಡೆಗೆ ಪ್ರಮೋದೆ ಮೂಢಣದಿಂದೆಯಾಗಮನ || ೩ ||

---

* ಶ- ಚರಿತಾಮೃತ- p೬೪೫.

ಧರ್ಮಗುರುಕುಲ ಪಂಥದುಜ್ವಲ
ಧರ್ಮಿ ಗುರುವರ ಚನ್ನವೀರನ
ಮರ್ಮ ಮಂಥನ ಬೋಧ ಚಿಂತನ ಶಿಷ್ಯಭಕ್ತನದು ॥
ಕೂರ್ಮ ಕೂರ್ಮದ ಶಿಶುವ ಪೋಷಣೆ
ಮರ್ಮ ಸ್ನೇಹದ ಸುಧೆಯ ಸಂಗವು
ಧರ್ಮ ಧರ್ಮಿಯ ಸ್ಥಿತಿಯ ತಿಳಿಮೆಯು ಜಡರಿಗಳವಲ್ಲ ॥ ೪ ॥

ಬೋಧಿ ವೃಕ್ಷದದಡಿಯೆ ಬುದ್ಧನಿ
ಗಾದ ಮತಿ ಮಹದೇವಿಯಕ್ಕನಿ
ಗಾದ ಯೋಗವ ಚನ್ನಬಸವನ ಜ್ಞಾನಯಿಲ್ಲಿರಲು ॥
ಬಾಧೆ ತೋರದ ಸಾಧು ಸನ್ಮತಿ
ವೇದಿಯಾಗುತ ಹೊರಡುತಿರೆ ತವು
ಗಾದವನುಭವ ಬರೆದು ಶಿವಕವಿಯಾದರೈಕೆಲರು ॥ ೫ ॥

ವೀರಶೈವದ ತತ್ವಸಾಗರ
ಪಾರ ಸೂಕ್ಷ್ಮತೆಯನುಭವದ ಸಂ
ಸ್ಕಾರದಿಂ ಪರಿಶುದ್ಧರಾಗಿ ಪ್ರಬುದ್ಧರಾಗುತಲಿ ॥
ನೇರವಾಗದ್ವೈತಿಯಾಗದೆ
ಚಾರು ಸಹಜಾನುಭವಿಯಾಗುತ
ಧಾರೆ ಹೊರಟಿರೆ ಚನ್ನವೀರನು ಕಂಡು ಸಂತೃಪ್ತಿ ॥ ೬ ॥

ಧ್ವನಿ ತರಂಗದು ಬಡಿದು ಕಣಕಣ
ಝುನಿತವಾಗಿರುವಂತೆ ಗುರುಕುಲ
ಘನತೆ ಹರಡಿ ಶಿವಾನುಭವಿಯ ಖ್ಯಾತಿ ಸ್ಥಿತಿ ಜ್ಯೋತಿ ॥
ವಿನಯದನುಭವಿ ಶಾಂತವೀರಗೆ
ತನಿಯಕ್ರಮ ಸದ್ಬೋಧ ಗೋಷ್ಠಿಯ
ಗಣಗಣಂಗಳಿಗೆಲ್ಲ ತಿಳಿಸಲು ಹೇಳಿ ಶಿವಯೋಗಿ ॥ ೭ ॥

ಭಕ್ತರಾ ಭಿನ್ನಹದ ಭಾವಕೆ
ಯುಕ್ತ ಪೂರೈಸುತ್ತೆ ಸಹಜತೆ
ಯುಕ್ತದಾಚರಣವದು ಪರಿತಿಳಿಸುತ್ತೆಯಿರುತಿರಲು ॥
ಶಕ್ತವರ ಮತಿಯೋರ್ಮೆಯಾಗವು
ವ್ಯಕ್ತಿ ತುಂಗೆಯ ತೀರದಲ್ಲಿಯ
ಭಕ್ತನೆಲೆ ಕೃಷಿಕಾಯಕದ ಪುರಬನ್ನಿಮಟ್ಟಿಗದು ॥ ೮ ॥

ಬಂದಿರಲು ಸಂಗತಿಯು ನಿಟ್ಟನ
ಸಂದಣಿಗೆ ತಲುಪಲ್ಕೆ ಪದ್ಮದ
ಗಂಧ ಭೃಂಗನು ಭಾವನೆಯು ಋಗ್ವೇದದೊಳು ನುಡಿಯು ||
ಹೊಂದಿರುವ ಕಥೆ ಪಕ್ಷಿ ಹುಮ್ಮಾ
ತಂದೆ ತಾಯಿಯು ಸ್ಮರಣೆ ಸೂತ್ರದಿ
ಯಿಂದೆ ಮರಿತಮ್ಮಡೆಗೆ ಸೆಳಕೊಳ್ವಂತೆ ಶಿವಯೋಗಿ || ೯ ||

ಸೆಳೆಯುತಿರಲದು ಕಳೆಯುಸದ್ಗುಣಿ
ಬಳಗ ಪಾದಾರ್ಚನೆಯ ಸೇವೆಯು
ಸುಳುವಿನೊಳು ಸಂತೃಪ್ತಿಪಡಿಸುತೆ ದಿವ್ಯವ್ಯಕ್ತಿತ್ವ ||
ಬೆಳಕಿನೊಳು ಪರಮಾನುಭವಸುಖ
ಸುಳುವಿನೊಳು ಚನ್ನಪ್ಪನೊರ್ವನು
ಸುಳಿದು ಶಿಷ್ಯತ್ವವನು ಗ್ರಹಿಸುದಕೆದ್ದ ಮನಶುದ್ಧ || ೧೦ ||

ಶ್ರೀಗಳ ನೆರಳಿಡಿಯುತೆ ಬಂದಿರ
ಲಾಗ–ನಾಯ್ಕನ ಹಳ್ಳಿ ಕೇಂದ್ರಕೆ
ಯೋಗಿಗಳ ಹಿಂದಿಂದೆ ಸಿದ್ಧಿಗಳಂತೆ ಕರುವಂತೆ ||
ರಾಗ ರಂಜನ ಶಾಮು ಮುರಳಿಯು
ಯೋಗಸ್ವರಕೆ ತರಂಗಯಮುನೆಯು
ಳಾಗಮಿಸುವೊಲು ರಾಧೆ ಮಧುರೊಲು ರಾಮನೆಡೆ ಭರತ || ೧೧ ||

ಮುಂದೆ ಗುರು ಪರಶಿವನ ರೂಪಿರೆ
ಹಿಂದೆ ಹರ್ಷಿಣಿ ಛಾಯೆಗತಿಯಾ
ನಂದದೈಕ್ಯ ವಿಶಿಷ್ಟ ಲಾಕ್ಷಣಿಕತೆಯ ಲಾಲಿತ್ಯ ||
ಹೊಂದುವಂತೆಯೊ ಶಬರಿ ಶಂಕರ
ವೃಂದದಂತೆಯೊ ಶರಣ ಸತಿಯಾ
ನಂದ ಹೊಂದಲು ಬಂದ ಮನ ಶ್ರೀಮಂತ ಧೀಮಂತ || ೧೨ ||

ಬರುತಲಿರ್ದ ವನಾಂಗ ಮಧ್ಯದಿ
ಬರುವದಂ ಹುಲಿಹುಲ್ಲೆ ತಿಂತಿಣಿ
ಗುರುಸಹಿತರಿಂತಿವರ ಕಂಡಿಹ ಚಿತ್ರ ಭಾಗವತ ||
ಗುರು ಬೃಹಸ್ಪತಿ ಶಿಷ್ಯನುದ್ಧವ *
ಬರಲು ನವಿಲು ರನಾಥ ಗೋಪಿಕೆ
ಮುರಲಿ ಹೇಳಿಕೆ ತಿಳಿವ ನಿಜರುಚಿ ಸಮತೆ ಮಧುಭಾವ || ೧೩ ||

* ಭಾಗವತ– ೧೧/೨೩/೭

ಶಾಂತಸುಖದಾಯಕನ ದರ್ಶನ
ಶಾಂತಿಯೊಳು ಸೌಂದರ್ಯದಾತ್ಮಿಯ
ಕಾಂತಿ ಸುಖ ಬಸವಣ್ಣನೆಡೆ ಹೊರಟಂಥ ಸಿದ್ಧನೊಲು ||
ಶಾಂತಿಯಿಂದೇಕಾಂತರಸದ ಪ್ರ
ಶಾಂತ ಧರ್ಮದ ಪ್ರೀತಿಶಾಂತನ
ಶಾಂತಿಯಾಶ್ರಮದೊಳಗೆ ಪದವಿಡಲಿತ್ತ ಚನ್ನಪ್ಪ || ೧೪ ||

ಕಿರಿಮಹಾಂತನು ಬಸವಲಿಂಗನು
ಗುರುಕುಲದ ಪ್ರಭೆ ಶಾಂತವೀರನು
ಹರುಷದಿಂದಿವರೆಲ್ಲ ಕಂಡಿಹ ಫಲವೆ ತನ್ನಿರವ ||
ಭರಿತನಾದನು ಕುಂದುತರದಿಹ
ದಿರವು ಸರ್ವರಿಗೆಲ್ಲ ಸಂತಸ
ದಿರಿಸುವದು ಗುರುಷನಿಹ ಪದಕರ ಚಾಚಿ†ಕೂಡ್ರದಯೆ || ೧೫ ||

§ ಆಸನೆತ್ತರವಿರದ ಕೆಳಗಿನ
ದಾಸನದಿ ಕೂಡ್ರುವನು ಗುರುವಿನ
ಭಾಷೆಯಣಕಿರದಂಥ ನಡೆ ಗುರುಸಿಂದೆಯಾಲಿಸದ ‡ ||
ಸ್ವಾಸ ತನ್ನದು ಗುರುವಿನೆಡೆಗದು
ಬೀಸದಂತಿರೆ ಕೂಡ್ರುವನು ಜೊತೆ
ಭೂಷಣಾಗಿಹ ಸೇವೆಯಿಂ ಗುರುವಿದ್ಯೆ ಹೊಂದಲಿಕೆ⊡ || ೧೬ ||

ಶುದ್ಧ ಸಿದ್ಧರ ಶರಣ ಸಂಗವು
ಬದ್ಧರವರಿಗೆಯೀಗ ರಾಜಿಸು
ತಿದ್ಧ ಜನ ಗುರುಧನವ ಕಧಿಯುವ ರೀತಿಯುವನಲ್ಲ ||
ಕದ್ದವಗೆ ಕ್ರಿಮಿ ಜನ್ಮವೆಂಬುವ*
ಶುದ್ಧನುಡಿ ಮನುಸ್ಮೃತಿಯ ಘೋಷಣ
ವಿದ್ದು ನಂಬದ ನಾಯಿಗಳ ಸೋಗೇನು ಕಡಿಮಿಲ್ಲ || ೧೭ ||

ಸೇರುತಲಿ ಗುಂಗಾಡು ತೆರದಲಿ
ಕ್ರೂರಿ ಸ್ವಾರ್ಥತೆ ಸಾಧಿಸುತ ಹೊರ
ದಾರಿ ಹುಡುಕುವ ದ್ರೋಹಿಗಳದಂತಲ್ಲ ಶರಣಾಳಿ ||
ಸೇರಿರುವ ಚನ್ನಪ್ಪನಿಗೆ ನಿಜ
ದಾರಿ ಮರ್ಮವ ಶರಣ ಜೀವನ
ಧಾರೆ ನೈಜದಿ ಶಾಂತವೀರರಿಂದೆ+ ಶ್ರೀಕಾರ || ೧೮ ||

† ಮನು ೨/೧೯೮, § ದೀಕ್ಷಾ-೧/೮೨, ‡ ಮನು ೨/೨೦೦,
⊡ ಮನು -೨/೨೧೮ *ಮನು ೨/೨೦೧ +ಕ್ಷ ಜಾ ೩೦೨-೩೦೩.

ಮಾಂಸಮಯ ತನುವಳಿದು ಮನುಮಯ
ವಂಶಿಯಾದನು ಚನ್ನವೀರರ
ಹಂಸ ಸ್ಥಿತಿ ಪರಮಾಂಶದೊಳು ಶ್ರೀ ಕರದಿಸಂಜಾತ ॥
ವಂಶಿವಾದವನಾದ ನಿರುಪಮ
ಹಂಸನೊಳು ಸಂಬಂಧಿಯಾಗಿಹ
ವಂಶಿಕರ ಪೂರ್ವಾಂಗ ನಿರಸನ ಸ್ಥಿತಿಯು ಸಹಜಹುದು ॥ ೧೯ ॥

ಇಂತಿವರ ಸಾನಿಧ್ಯ ಸುಧೆಯಿರ
ಲಂತುಪೂರ್ಮೆಯ ಗೋಷ್ಠಿ ಮೊದಲಿಡ
ಲಂತುವಷ್ಟಾವರಣ ವಿವರಣ ತಿಳಿಸಬೇಕೆನಲು ॥
ಕಾಂತಕಂಗಳ ಹೃದಯುವರಳುತ ಪ್ರ
ಶಾಂತದಿಂ ತತ್ವಾಂಗ ಬೋಧಿಸು
ತಿಂತು ಸಕ್ರಮಿ ಚನ್ನವೀರ ಶಿವಾನುಭವಸವಿಯು† ॥ ೨೦ ॥

ವೀರಶೈವರು ತತ್ವ ಪುರುಷರು
ವೀರಶೈವಗೆ ಬೇಕು ಸ್ಪಷ್ಟತೆ
ಧಾರೆಯಷ್ಟಾವರಣ ತಿಳಿವುದು ಶರಣ ಸಾಧಕರು ॥
ಮೇರು ಪಂಚಾಚಾರವಲ್ಲದೆ
ಧೀರನೊಪ್ಪುವನಾರು ಸ್ಥಲಗಳ
ಸಾರನರಿವುದು ಮೊದಲುವಷ್ಟಾವರಣ ಕ್ರಮದಿಂದೆ ॥ ೨೧ ॥

ಸ್ಪಷ್ಟ ಕೇಳ್ಳೈ ವಿವರ ಸಂಖ್ಯಾ
ಪ್ರಷ್ಟದಷ್ಟಮದಂಕಿ–ಬಹುವಿಧ
ಸ್ಪಷ್ಟ ಸೂಚಿಸುತಿಹುದು ದಿಶೆ ದಿಕ್ಪಾಲಕರು ಸಿದ್ಧಿ ॥
ಅಷ್ಟ ಭೋಗ ತನುಗಳು ಯೋಗದು
ಅಷ್ಟವಿಧದರ್ಚನೆಯು ಮದಗಳು
ವಷ್ಟಗುಣಪರಿ–ತಿಳಿಮೆ ಮಯಶಕ್ತಿ§ ಸಂಖ್ಯೆ ಸಹ ॥ ೨೨ ॥

ಬೌದ್ಧ ಧರ್ಮದಿ ಸಹಿತನಿಯಮಗ
ಳಿದ್ದು ಪಾಲಿಸಿದವನೆ ಬೌದ್ಧನು
ಶುದ್ಧದಷ್ಟಾಂಗಿಕದಕ್ಷ ಮಾರ್ಗದ ಶಾಶನಿಹುದಿಲ್ಲಿ ॥
ಶುದ್ಧ ಧಾರಣ–ಸಂಕಲಪ ನುಡಿ
ಬದ್ಧ ಕರ್ಮಿದು ಶುದ್ಧ ಜೀವನ
ಶುದ್ಧ ಕಾಯಕ ಶುದ್ಧ ಸ್ಮೃತಿ ಪರಿಶುದ್ಧ ತದ್ಧ್ಯಾನ‡ ॥ ೨೩ ॥

† ಪ್ರ ಚಾ, ೩೦೨ ೩೦೩, § ಗಣಪ–ಪ ೨೮, ‡ ಧಮ್ಮಪದ–೧೪/೩.೧೪;೨೦/೧.

ಅಂತೆ ತಿಳಿವುದು ವೀರಶೈವರು
ಪಿಂತುವನುಭವ ಧರ್ಮಶಾಸ್ತ್ರದಿ
ಕಾಂತಿ ತಿಳಿವುದು ಅಂಗದಷ್ಟಾವರಣ ಸಾಧಕರೆ ||
ಶಾಂತಿ ಶರಣರ ಸಂಗದೊಳು* ಪ್ರ
ಶಾಂತ ಭಕ್ತಿಯ ಬೀಜ ತೋರ್ಪುದು
ಶಾಂತ ಗುರು ಬಲ ಸಂಧಿಯಾಗಲು ಶಿವಪ್ರಸಾದಹುದು || ೨೪ ||

ಮಳೆಗೆ ಕಂಬಳಿ ಹೊತ್ತಿರುವವೊಲು
ಚಳಿಗೆ ಪದರಿನ ಹೊದಿಕೆ ಮೇಣದು
ಸುಳಿವ ಶಸ್ತ್ರದ ರಕ್ಷಣಕೆ ತನುಕವಚದಂತಿಹುದು ||
ಬೆಳೆಯು ಕುಳಿಕುಲ ಭ್ರಾಂತಿ ಲೌಕಿಕ
ಸೆಳೆಗೆ ಸಿಲುಕದ ಹಾಗೆ ಮಾಳ್ಪ
ಚಲುವದಷ್ಟಾವರಣ ಸಾಧನ ಸಾಧಕಗೆ ಶ್ರೇಷ್ಠ || ೨೫ ||

ಪರಶಿವನ ಸತ್‌ಚಿತ್ತ ಆನಂ
ದರಿಯುವದು ಗುರುಲಿಂಗ ಜಂಗಮ
ಸರಿಯೆ ಪರಿ ತೋರಿರಲು ಭೌತಿಕ ಪೃಥ್ವಿ-ತೇಜಾದಿ† ||
ಪರಿಣಮಿಸುತಲಿ ಅನ್ನ ಜಲ ಮಣಿ
ಸರವು ಭೂತಿಯು ಶಬ್ದ ರೂಪದಿ
ಪರಿಯ ಪ್ರಾಕೃತವಾಗಿ ತೋರಿರೆ ಪರಮ ಗುರುದೃಷ್ಟಿ || ೨೬ ||

ಬೀರಲು ಪದಾರ್ಥವು ಪ್ರಸಾದವು
ನೀರ ಪಾದೋದಕವು ಭೂತಿಯು
ಮೇರು ಗುಣದ ವಿಭೂತಿ ಮಣಿರುದ್ರಾಕ್ಷಿ§ ಶಬ್ದವದು ||
ಚಾರು ಮಂತ್ರವು ಪರಿಣಮಿಸಿ ಕುಲ
ಸೇರಿ ಸರಪಳಿ-ಪುಷ್ಪಮಾಲೆಯ
ಹಾರದೆಂಟರ ನೆಂಟತನರಸವೇರಿ ಕ್ರಮಸಾರಿ || ೨೭ ||

ಅಂಗ ಪ್ರಾಣವಿದಾತ್ಮ ಮೂರಿವು
ಅಂಗಗಳು ಒಂದಿರದೆ ಮತ್ತೊಂ
ದಂಗ ತೋರದು ಇವುಗಳೈಕ್ಯತೆ ತೀರ್ಥ ಸೌಖ್ಯವದು ||
ಅಂಗದಷ್ಟಾವರಣ ತ್ರಿವಿಧದ
ಇಂಗಿತವ ತನುವಿಂದ ಸಾಧನೆ
ಸಂಗಸಾಧಿಸಲಾಗ ಸಾಧ್ಯ ಪ್ರಸಾದ—ಪ್ರಕ್ರಿಯತೆ || ೨೮ ||

*. ಬ. ವ. ೮೮೧ ೫೨೫, † ವಿ. ಧಾ. ೩. ೧ ೫೮೪, § ಬ. ವ. ಚಿತ್ರಾಗಾಂಗಾದಿ.

ಮೂಲತಿಳಿವುದು ಮೊದಲು ಗುರುಪಥ
ಶೀಲ ಗುರುವೇ ಸಾಧನೆಲ್ಲಕೆ
ಮೇಲು ಕೊನೆ ಪರ್ಯಂತ ದೃಷ್ಟಾದೃಷ್ಟಿ ಸೂತ್ರಾತ ||
ಶೂಲಸಮುಸ್ಥಿತದಾಶೆ ಭ್ರಾಂತಿಯು
ಮಾಲೆಗವ ಮಹಕಾಲಕಾಲನು
ಸಾಲ ಭ್ರಮರಹಿತಾತ್ಮಾ ಕರುಣಾರಸಾತ್ಮ ವಿದ್ಯಾತ್ಮ || ೨೯ ||

ಬಯಲನರಿವಲು ಗುರುವು ಗುರುತರ
ಬಯಲ ಭಾವನೆ ನೆಲಿಸುತಿಹನೇ
ಬಯಲ ನಂಬಿಸಿ ಬಯಲಮಾಡುವ ಸೂತ್ರಧಾರಿವನು ||
ನಯನ ಸನ್ನೆಯ ತಿಳಿವು ಬಯಲದು
ಬಯಲ ಭಾವನೆ ಸೂಚನದು ನಿಜ
ದುಯಿಲು ಸಹಜನಲೀನು ಕಾಣದ ಗಂಧ ಸುಳ್ಳೀನು || ೩೦ ||

ಗುರು ಗುರುತ್ವದ ಗರಿಮೆ ಗಂಭೀ
ರರವ ಪೂರ್ಣರಬೇಕು ಶ್ರೀಗುಣ*
ಚರಿತ ಸುಜ್ಞಾನಾಂಬನ ಭರಿತ ಸತ್ಯದೆಡೆ ಮಿಡಿತ ||
ನಿರುತ ಕತ್ತಲೆ ಕಳೆವ ಲಕ್ಷ್ಯದ
ಕುರಿತೆಯನುಭವಲೀನ ಲಿಂಗಾಂ
ಗೆರಡಶಿವನೇ ಒಡೆಯನ್ನೈ ಪಿಂಡಾಂಡ ಬೆಳಗುವನು || || ೩೧ ||

ನುಡಿಯು ನ ಗುರೋರಧಿಕವೆಂಬುದು
ದೃಢ ಗುರುವಿನ ಮಹತ್ವ ಸೂಚನ
ನುಡಿಯು ಕೆರೆಗದು ಪ್ರೇರಣೆರದಿರೆ ನುಡಿಯದೇನನ್ನು ||
ನಡೆ ನುಡಿಯ ನಿಜ ಸಾಮರಸ್ಯದ
ಕುಡಿಗೆ ಕಾರಣರಾರು ಯೋಚಿಸಿ
ಪಿಡಿದು ಚರಣಾಮೃತವ ಸತ್ಯದಿ ಧರಿಸಬೇಕೆಂದ || ೩೨ ||

ಹೊರಗೊಳಗು ತತ್ವಾರ್ಥ ತಿಳಿದಂ
ತಿರುವ ನಿಜದಾಚಾರವುಳ್ಳನ
ಚರಣದಿ ತನು ತೃಣವನಿಡಲು ಸರ್ವಾಂಗ ಲಿಂಗವದು ||
ಹರನೆ ಸಾಕ್ಷಾತ್ ಗುರುಸ್ವರೂಪನು
ಪರಮ ಶಿವ ಸಿದ್ಧಾಂತ ಪ್ರಜ್ಞನು
ಗುರುವೆ ಶಿಷ್ಯರ ಮನದ ಮಲಿನವ ಕಳೆವ ಮಡಿವಾಳ || ೩೩ ||

* ದೀಕ್ಷಾ-೧/೩೯-೪೩

ಗುರುಕರುಣೆ ಸದ್ಭಕ್ತಿಯಿಂದದು
ಗುರುನುಡಿಯ ಪಾಲಿಸಲು ಅಮರನು
ಸರಳ ತೋರುವ ಗುರುವು ಕಾಣದ ಶಿವನಿಗಿಂತಧಿಕ ||
ಕರುಣೆಯಿಂ ಸಂಸ್ಕಾರ ಕೊಡಲಾ
ಸುರಿಸುವದು ತಂಬೂರಿ ಸಮತನು
ಸುರುವದಿದು ಓಂಕಾರ ಘಂಟಾನಾದ ರಸಮೋದ || ೩೪ ||

ವಿನಯದಿಂ ಹೈನವದು ಕಿಂಕರ
ತನದಿ ಸತ್ಕೃಪೆಯಹುದು ಇದ್ದಲಿ
ಯನಲದಿಂ ಪರಿಶುಭ್ರಭಸ್ಮದು ಸಾಕ್ಷಿಯನುಭವವು ||
ಅನಿತರ ಶಿಲೆ ಶಶಿಯಿಂದೆ ಶೈತ್ಯವ
ನುಣಿಸುವದು ಸಲೆ ಸೂರ್ಯಕಾಂತದು
ಕಣಕಿಡಿಯುವದರಿಂದಹುದು ಗುರುವಿಂದೆ ನರಹರನು || ೩೫ ||

ತುಂಗಮಯನಿಂ ದೀಕ್ಷೆ ಮೂರನು
ಯಂಗ ತ್ಯಾಗಾಂಗಾದಿವಿಡಿದೇ
ಲಿಂಗತ್ರಯವಿಡಿದಂಗವದು ಮೂರೇಳು * ತೆರನಾಗಿ ||
ಅಂಗವಿಸಿಕೊಂಡಿರಲು ಸ್ಥಿತಿಯು
ತ್ತುಂಗ ದೇಹವೆ ದೇಗುಲೆಂಬುವ †
ಸಂಗಮನ ಪ್ರಿಯಭಕ್ತ ಬಸವನ ನುಡಿ ನಿರೀಕ್ಷಿಸಿರಿ || ೩೬ ||

ವರಸು ಶಿಷ್ಯಗೆ ಹಸ್ತತಾಗಲು
ಹುರಿದು ಪೋಪುದು ಪೂರ್ವ ಮಲತ್ರಯ §
ಗುರುವೆ ಜನಕಂ ಜನನಿ ಬಂಧುವುಯೆಂಬ ದೃಢತೆಯೊಳು ||
ಕರದಿರಿಸಿದಾ ಲಿಂಗವಗಲದೆ
ಯಿರುತಿಹನು ಪತಿವ್ರತೆಯ ತೆರನಿಂ
ಸಿರಿಯು ಸರ್ವರಿಗಾಗಿರಲಿ ಮಹಲಿಂಗ ಮಹಿಮೆಯಿದು || ೩೭ ||

ಶ್ರೀ ಗುರುವಿನಡಿ ಶಿಷ್ಯ ಪ್ರಾರ್ಥಿಸ
ಲಾಗ ಸತ್ಕಲೆ ಮೂರ್ತಿಯವಗೆ ಸು
ರಾಗದಿಂದಾತ್ಮೀಯ ಭಾವದಿ ಶಾಂತ ಪಡಿಸುತಲಿ ||
ತ್ಯಾಗಿಯನ ವೈದಡವಿ ನಗುತಲಿ
ಭೋಗಮಯ ತನುಶುದ್ಧಗೊಳಿಸು
ತಾಗ ಮನಕುಪದೇಶ ಗೈಯ್ಯುತ ಲಿಂಗ–ನವಲಿಂಗ || ೩೮ ||

---

*ಸಂಸ್ಕಾರ-ಪಿ ೨೩.೩೬ ೧೦೧, ಚ.ವ.ಬ ೯೦೭, † ಬ.ವ.೮೨೦, § ದೀಕ್ಷಾ ೧೪೯

ಸಂಗತಿಯ ತಿಳಿದಿರಲಿ ಗುರುಪದ
ತುಂಗ ಸ್ಥಾನಕೆ ಶೋಭಗೊಂಡುರಿ
ಲಿಂಗದೇವನ ಜೊತೆಗೆ ಗ್ರಹಿಸಿರಿ ತುಂಬ ನಂಬಿಡಿದ ||
ಲಿಂಗದೇವನು ಕೊಟ್ಟಕಲ್ಲವ
ಲಿಂಗವೆಂದೇ ಪಡೆದ ಪೆದ್ದ–ಪ
ದಾಂಗ ತಿಳಿಯುತ ಮುಂದೆ ಶರಣರು ದ್ವಿತಿಯದಾವರಣ || ೩೯ ||

ಲಿಂಗಕದು ಪರಿಭಾಷೆಯ ಗಣಿತ
ರಂಗನುಡಿ ವೇದಾಂಗ ವಿವರದು
ಸಂಗ ಸಚರಾಚರದ ಸೃಷ್ಟಿ ಲಯಕಿದು ಮೂಲವದು ‡ ||
ಲಿಂಗಕದು ಪರವಸ್ತು ತ್ರಿವಿಧದ
ಲಿಂಗವೇ ಕರಸ್ಥಲಕೆ ಶೋಭಿಸು
ತಂಗವೆಲ್ಲವ ಲಿಂಗ ಮಾಳ್ಪಾ ಮಹಿಮೆಯುಹುದಿಲ್ಲ || ೪೦ ||

ಕುರುಹು ಶಿಲೆಯದು ಚಂದ್ರಕಾಂತದು
ವಿರಲಿದುವು ಸರಿ ಪಂಚಸೂತ್ರದಿ
ಭರಿತ ಪಿಡಿದಿರೆ ಲಿಂಗ ಲಕ್ಷಣವಹುದುಯೆಂದೆಂಬ ||
ಗುರುವು ತೋರಿಸಿದಂಥದೇ ನಿಜ
ಪರಮ ಲಿಂಗವಿದೆಂದು ಶ್ರುತಿಮತಿ
ವಿರಲು ಪೇಟೆಯ ಕಲ್ಲು ಕಟ್ಟಿರೆ ಕಂಟಕದುವೆಂದ || ೪೧ ||

ಲಿಂಗವದು ಸ್ವಯಪೂರ್ಣ ಪ್ರಭೆ
ಲಿಂಗದಂಬರದೊಲು ತಂಬಿಗೆ
ಯಂಗಣದಿ ಪರಿಶೋಭೆಗೊಂಡಿಹ ದೀಪಕಿರಣಸಮ ||
ಂಗಳೊಳು ನಭಚಿಕ್ಕದಾಗುತ*
ರಂಗದೊಳು ತೋರ್ಪಂತೆ ಪರಶಿವ
ಲಿಂಗ ಹೃದಯದ ಹಸಿತ ತೋರಿರಲಾತ್ಮ ಕುರುಹವದು || ೪೨ ||

ಪಶ್ಚಿಮಾಗ್ರದೊಳಿರ್ಪ ಸ್ಪಟಿಕದು
ಚಿತ್ಕಳೆಯದಾ ಭಾವಲಿಂಗವ
ಸತ್ಕಳೆಯದಿಂ ಮನಕೆ–ನೇತ್ರಕೆ ಕ್ರಮದಿರೂಪ್‌ಗೊಳಿಸಿ†
ನಿಶ್ಚಿತದಿ ಎಡಕರಕೆ ತರುತಿಹ
ಸ್ವಚ್ಛದಾ ನವಚಕ್ರ ಬ್ರಹ್ಮವ
ನಿಚ್ಚಳ ಸಮನ್ವಯುಗೊಳಿಸುವ ಪ್ರವೃತ್ತಿಪಡೆಯುದಕೆ || ೪೩ ||

‡ ಸಿ ಶಿಖಾಮಣಿ ೬/೩೬ *.ಶಿ ದರ್ಶನ ಪಿ ೧೩, † ತಿರುಳು ಪಿ ೨೩.

ಮೊಗ್ಗೆಯದು ಬಿರಿದಾಗ ಸಾದ್ಯಹು
ದೊಗ್ಗುವಾ ಮಕರಂದ ವೇದ್ಯದು
ಹಿಗ್ಗಿ ಗುರುಕೃಪೆಯಿಂದೆ ತನ್ನೊಳಗಿನದೆ ಚೈತನ್ಯ ||
ಅಗ್ನಿ ಪ್ರಭೆ ಮೇಲಾದ ಕುರುಹವ
ಮೊಗ್ಗೆ ಪಡೆಯಲು ಸಾದ್ಯ ನೋಟದ
ಸುಗ್ಗಿ ಮಾಟದ ಕೂಟ ಸಮರಸ ಇಷ್ಟಲಿಂಗದೊಳು || ೪೪ ||

ಸಿರಿಯಿರಲು ಸಿರಿವಂತ ವರಗುಣ
ಧರಿಸಿರಲು ಗುಣವಂತ-ಕರದಲಿ
ಇರಿಸಿರಲು ನಿಜಲಿಂಗವಂತನು ನಂಬು ನಂಬಿಗೆಯ ||
ಇರದವಗೆ ಭವಬಂಧನ ಮುಖ ಮುಃ†
ಕಃರವಳಿದು ನೋಡಬಹುದೇ ದುರ್
ಮರಣ ದೂರದು ಇಷ್ಟಲಿಂಗದಿ ಇಂಗಿತಾರ್ಥಗಳು || ೪೫ ||

ಕುರುಹ ಪೂಜಿಸಲಾಗ ಅರುಹದು
ಅರುಹ ಮರೆಯುತ ಕುರುಹ ಪೂಜಿಸು
ತಿರುವ ಕ್ರೀ ಸರಿಯೆನದು ಅರಿವಿಗೆ ಕುರುಹು ಸಾಧನವು ||
ಸರಿಯೆ ನಯನದ ಕಸರುಕಾಣಲು
ದರಪಣವು ಬೇಕಯ್ಯ ಪ್ರಭೆಗದು
ತರಲ ತೈಲದು ಬತ್ತಿ–ದೀಪೋಜ್ವಲಿತವಾಗಲದು || ೪೬ ||

ಚಿಂತಿತಾರ್ಥವನೀವ ಕುರುಹದು
ಶಾಂತತೆಯ ಭರಿಸುವದು ನಾದದಿ
ಭ್ರಾಂತಿಯಳಿಸುತ ಕಾಂತಿಗೊಳಿಸುತ ಬಿಂದು ಕಲೆಯೊಳಗೆ ||
ಇಂತು ನಿಜವಿರಲಿಂತು ಕಾಣದ
ಚಿಂತಿತಾ ಕಲ್ಪಿತದ ವಸ್ತುಗ
ಳಂತು ಕೊಡುವವು ತೃಪ್ತಿ ನೀಡದ ನುಡಿಯು ಬರಿ ಬಳಕೆ || ೪೭ ||

ಸಾಗರೊಂದಲಿ ಸ್ನಾನ ಸಾಕದು
ಯೋಗದೊಳು ಪರತರದ ಹಿರಿಮೆಯ
ಯೋಗಬೇಕದು ಹಲವು ದೃಷ್ಟಿಯಕಿಂತ ಕರದಿಷ್ಟ ||
ಯೋಗಲಿಂಗದ ಪೂಜೆ ಸಾಲದೆ
ಸಾಗಿ ಬಹು ವರತಿಗಳ ನೋಡದೆ
ಹೋಗಿಯೊಂದನೆಯೊಳತೋಡಿರೆ ನೀರು ನಿಮಗಿಹುದು || ೪೮ ||

† ಶತಕತ್ರಯ ೧/೨೩.

ದೃಷ್ಟಿಯಂತೆಯೆ ಸೃಷ್ಟಿ ಇರುವದು
ದೃಷ್ಟಿಯಿಂ ಘನಲಿಂಗ ಪ್ರಾಪ್ತಿಯು
ದೃಷ್ಟಿ ಇಷ್ಟದೊಳಿಟ್ಟು ಸಾಗಿರೆ ಶ್ರೇಷ್ಠ ಲಿಂಗಾಂಗಿ ||
ಕಷ್ಟವಾಗುತ ಪ್ರಾಪ್ತಿಯಾದರು
ನಿಷ್ಠೆಯಿಡೆ ತನುದಣಿದರೇನದು
ಸ್ಪಷ್ಟಮನ ಕುಣಿ ಕುಣಿದು ಕಂಗಳ ತಣಿಯುತಿರಬೇಕು || ೪೯ ||

ಇಷ್ಟಲಿಂಗದಿ ತೀರ್ಥವೆಲ್ಲವು*
ಶ್ರೇಷ್ಠ ಸಿದ್ಧಿಯು ಸಹಿತ ತಾ ಹೊರ
ದೃಷ್ಟಿಡಿದ ನಿಜ ಪೂಜೆ ಪೂರ್ಣಿರಬೇಕು ತಿಳಿವೆಯೊಲು ||
ಇಷ್ಟಲಿಂಗವ ಧರಿಸಿದವನಿಗೆ
ನಷ್ಟವದು ಕುಲ ಸೂತಕಂಗಳು
†ಕಾಷ್ಠದೊಳನಲ ಜನಿಸಿದೊಡುಳಿಯದದು ಪ್ರತ್ಯಕ್ಷ || ೫೦ ||

ಕುರುಹುವಿಡಿದೇ ಕುರುಹುಗೆಡುವಾ
ಪರಿಯು ಸಾಧನದೊಳಗೆ ಮುಳುಗುತ
ಇರುವುದ್ವೈ ತಾನಾಗಿ ತತ್ಸನು ತಾನೆ ಶಿವನಹನು ||
ಸರಸ ನೋಟದ ಕೂಟ ಸಮರಸ
ಭರಿತ ಕುಂಭದ ಬಟ್ಟೆ ಬರಿಪ್ರಭೆ
ಹೊರತು ಮತ್ತೇನುಂಟು ತನ್ನ ರತಿಸುಖ ತನಗತ್ತ || ೫೧ ||

ನಾಭಿ ಮೇಲದು ಲಿಂಗಧಾರಣ
ಶೋಭೆಯದು ಸೌಭಾಗ್ಯ ಜ್ಞಾನದ
ಲಾಭವದು ಶ್ರುತಿ ಘೋಷ ದೀಕ್ಷಾಬೋಧೆ‡ ಸಾಧಾರ ||
ನಾಭಿ ಕೆಳಗಡೆ ಧರಿಸಿದೊಡೆ ಸ
ಲ್ಲಾಭ ಸಿಗದದು ತಿಳಿಯಿರೈ ದು
ರ್ಲಾಭ ಮಹ ಪಾತಕವು-ಶಾಸನ ಮನ್ನಿಸಿರೆ ಶ್ರೇಷ್ಠ || ೫೨ ||

ಪರರ ಬೇಡದ ಸುಕೃತಿ ಸತಿವೃತಿ
ಶರಣು ಭಾವಿತ ಸುಳ್ಳುವಿರಹಿತ
ಸಿರಿಯು ಸ್ವಮತ ಪ್ರೀತಿ, ಷಡ್ವಿಧವಿಂತು ಗುಣವಿರಲು||
ಕರದಿ ಕಕ್ಷೆಯೆ ಉರದಿ ಶಿರದೊಳು
ಸುರಸ ಜಿಹ್ವೆಯೊಳು ಅಮಳ್ಯೆಕ್ಯದಿ
ಧರಿಸಬೇಕದು ಲಿಂಗ ಆರುವಿಧಾಚರಣೆ ತಿಳಿದು || ೫೩ ||

*ದೀಕ್ಷಾ ೧/೬೧.೬೨ †ದೀಕ್ಷಾ ೧/೧೧೬–೧೨೨ ‡ಅದೇ ೧/೨/೨೩.

ಲಿಂಗ ಪೂಜಕ ಲಿಂಗದಾಕೃತಿ
ಲಿಂಗಮುಖ ಜಂಗಮವೆಯೆನ್ನುತ
ಲಿಂಗ ನೋಟದ ತೃಪ್ತಿ ಜ್ಞಾನದ ಕೂಟ ಸಂತೃಪ್ತಿ ||
ತುಂಗ ಪರಶಿವಯೋಗ ಸಿರಿಯ
ಷ್ಟಾಂಗ ಯೋಗಕ್ಕಿಂತ ಸುಲಭದು
ಲಿಂಗ ಧಾರಣ ಸ್ಥಾನ-ಧಾರಕನಿರವ ತಿಳಿರಿದನು || ೫೪ ||

ಗುರುವು ಲಿಂಗದ ಜನಕ ಶಿಕ್ಷಕ
ಪರಿ ಪರೀಕ್ಷಕ ಜಂಗಮನು ಪರ
ತರದ ಲಿಂಗದ ಪ್ರಾಣವಯ್ಯ ಇವರೆರಡು ನಯನ ||
ಇತಲೆರಡು ಗುರಿಯೊಂದೆ ದೃಷ್ಟಿಯು
ಪರದೆರಡು ಸ್ವರವೊಂದೆ ಶ್ರವಣದು
ಎರಡುದಂತದ ಪಂಕ್ತಿಯಿರೆ ರಸಕ್ರೀಯೆ ಸರಳೊಂದು || ೫೫ ||

ತನುವ ಗುರುವಿಗೆ ಮನವ ಲಿಂಗಕೆ*
ಮನದಿಯೊಪ್ಪಿಸಿ ಬಿಡಲು ಮೂರನೆ
ಧನವ ಜಂಗಮಗಹುದು ನಿಜದಾಚರಣೆ ಮೈಗೂಡಿ ||
ಘನತೆ ಹೊಂದಿರುವಂಥ ಮಹಿಮನು
ಮನೆಗವನೆ ಬಂದಿರಲು ಅರ್ಚನೆ
ಯನು ಮರೆತು ತಾನವನ ಮನ್ನಿಸಬೇಕು ಅತಿಥಿಯನ || ೫೬ ||

ಬಾಲ ಕ್ರೀಡಾಲೋಲನಿರೆ ಮುದ
ಲಾಲಿಸುವಳಾಗಮಿಸಲಾಟದ
ಜಾಲಳಿಯುತವಳಪ್ಪಿ ನಿಜ ಸಂತೃಪ್ತಿಪಡುವಂತೆ ||
ಲೋಲಸಿಲ್ಲದ ಸಮಯದರ್ಚನ
ಲೋಲನಿರಲವಳೆಂತು ಮೂಳ್ಪಳು
ಪಾಲ ಜಂಗಮ ಬರಲು ಲಿಂಗಾರ್ಚನೆಯು ಸರಿಯೆಂತು || ೫೭ ||

ಗರಿಮೆ ಗುರುವರ ಲಿಂಗಜಂಗಮ
ರಿರವು ಕರಣಾದಿಗಳ ಶುದ್ಧಿಗೆ
ಸರಿಯೆ ಮುಖಗೆಯಾಗಲವರೊಳು ಮೂರನೆಯ ಮಹಾಂತ ||
ಚರಣ ಮನ್ನಿಸಬೇಕು ತಪ್ಪಿರೆ
ಹಿರಿಮೆ ಪ್ರಭುವಾಗಮನ ಸಮಯದಿ
ಬರದೆ ಮರುಗಿದ ಬಸವನಂತಾ ಘಟಿಸಬಾರದದು || ೫೮ ||

* ಬ-ವ ೨೦೪, ೨೦೬.

ತಿಳಿಯೆ ಜಂಗಮರಿರವ ವರಾಬಗೆ
ಯೆಣೆಳಗೆ ಲಕ್ಷಿತ ಜಂಗಮನು ಸ್ವಯು
ತಿಳಿಯೆ ಜನಕಲ್ಯಾಣಕದು ಸಂಚರಿಪನೇ ಚರನು ॥
ಒಳ ಹೊರಗುಭಯು ಭೇದವನಳಿದ
ನಿಲವ ನೀರಜ ನಿಶ್ಚಿತನೆ ಪರ
ತಿಳಿವುದಿದನೆ ಮಹಾಂತ ಘನತೆ ಪ್ರಶಾಂತ ಪ್ರಭುವಂತ ॥ ೫೯ ॥

ಚಿರ ವಸಂತ ಪ್ರಶಾಂತ ಪವನವ
ಸ್ವರ ಸುರುಳಿ ಜ್ಞಾನಾಂಗ ಪಂಥದಿ
ಯುರುಳುತಲಿ ಸ್ವಯು ಜಂಗಮಾದಿಯು ಸದುಭಕುತಿ ಜ್ಞಾನ ॥
ವಿರತಿಮಯ ಸದ್ರೂಪರಾ ತ್ರಯ
ಮೆರಗುಕಳೆ ಚಿದ್ರೂಪರಾ ಮಯ
ಸ್ಥಿರತೆ ಚಿರದಾನಂದರಾ ಮಹಲಿಂಗ ಮೂರ್ತಿಗಳು ॥ ೬೦ ॥

ತಾನೆ ಯಾರಾಧಿಸದೆಯುಂಗಗೆ
ಮಾನವಹ ಗುರುಲಿಂಗ ಜಂಗಮ
ತಾನೆ ಬರದು ಗುರುತ್ವ ಶುಭ ಸರ್ವಾಂಗ ಲಿಂಗ ನಿಲವು ॥
ತಾನೆ ಸಿಗದದು ಜಂಗಮತ್ವವು
ಹಾನಿಲಾಭವನಳಿದ ಸತ್ಕ್ರಿಯೆ
ಗಾಣುತಲಿ ಸಮರಸತೆಗೊಂಡಿಹ ಸ್ವೈಜ ಜಂಗಮತೆ ॥ ॥ ೬೧ ॥

ಶ್ರೇಷ್ಠತನ ನಿಂದಿಸದು ಜಂಗಮ
ತುಷ್ಟಿಯೇ ಚರಾಚರದ * ತೃಪ್ತಿಯು
ಶ್ರೇಷ್ಠಗಣ ಕರೆತಂದು ಮನ್ನಿಸುತಾರ್ಚನೆಯೇ ಶುಭವು ॥
ನಿಷ್ಠೆಯಿಂದಾಚರಿಸಿ ಪೂರ್ವದ
ಶ್ರೇಷ್ಠ ಪದವಿಯ ಪಡೆದ ನಿಜ ಸಂ
ತುಷ್ಟಿಯುವರ್ಕೈ ಮೇಣು ಬಸವಗೆ ಜಂಗಮನೆ ಪ್ರಾಣ ॥ ೬೨ ॥

† ಜಂಗಮಾರ್ಚನೆ ಮಾಟ ಕೂಡಲ
ಸಂಗಮನ ರಸಕೂಟವೆಂಬುವ
ಜಂಗಮಾರ್ಯರ್ಚನ ಪಂಥ ಪ್ರೇಮಿಯ ಹಣ್ಣು ಹರ್ಷನುಡಿ ॥
§ ಲಿಂಗ ಪೂಜಿಸಿ ಬಳಿಕ ಭಕುತನು
ಜಂಗಮಗೆಯುಳಕುವದೆ ಸರಿನುಡಿ
ಸಂಗತಿಯ ತಿಳಿರಯ್ಯ-ಬಲ್ಲಾಳಯ್ನ‡ ಚರಿತವನು ॥ ೬೩ ॥

---

* ಬ. ವ. ೫೬೨, † ಬ. ವ. ೧೭೭, § ಬ.ವ. ೧೮೯, ‡ ಬ.ವ. ೧೯೫.

ಹಿರಿಮೆಯರಿವಾಚಾರದೆಂಗವಿ
ಸಿರುವ ಜಂಗಮುಗರ್ಪಿಸಲು ಸ್ಥಾ*
ವರದು ನೆನೆವುದು ಕಲ್ಲನಾಗರದೆಡೆಯು ಸಾಕಪ್ಪ ॥
ಸರಳ ನುಡಿಗಳ ತಪ್ಪದಿದ್ದರೆ
ಹಿರಿಮೆ ಮತ್ತೇನುಂಟು ನಿಜಮನ
ದೆರೆದು ಜಂಗಮಲಿಂಗ ವ್ಯಸನದು† ತುಂಬವಿರಲಪ್ಪ ॥ ೬೩ ॥

§ಬೇರಿಗದು ನೀರೆರೆಯಲಾ ಮೇ
ಲೇರಿ ಪಲ್ಲವಿಸಿತ್ತು ನೋಡಾ
ಚಾರು ಲಿಂಗದ ಬಾಯಿ ಜಂಗಮವೆಂದೆ ನಿಶ್ಚಯಿಸಿ ॥
ಕಾರಣಿಕ ಒಂದಿರಲು ಸಲ್ಲಿಸು
ತಾರು ಎನ್ನದೆ ತೃಪ್ತಿ ಪಡಿಸಿರೆ
ಧೀರಗದು ಫಲ ಹೇಡಿಗಲ್ಲಂ-ನಿಶ್ಚಯಿಸಿಕೊಳ್ಳಿ ॥ ೬೪ ॥

‡ಬತ್ತಿ ತೈಲುಂಬುತಲಿ ಜ್ಯೋತಿಯ
ಸುತ್ತ ಪಸರಿಸುವಂತೆ ಜಂಗಮ
ತೃಪ್ತಿಯಾಗಲು ಲಿಂಗಕದು ಸಂತೃಪ್ತಿ ನೋಡಾ ॥
ಎತ್ತ ನೋಡಲು ಬೆಳಗುತಿಪ್ಪಾ
ವಸ್ತು ವಜ್ರದು ಒಳಹೊರಗುಪ್ರಭೆ
ತತ್ವ ತನ್ನಿರವಂತೆ ಜಂಗಮನಿವನೆ ಸರ್ವಾಸ್ತಿ ॥ ೬೫ ॥

ಗುರುಗಳಾಗುವದಕ್ಕೆ ಲಪಲಪಿ
ಸಿರುವ ಜಂಗುಳಿಯುಂಟು ಜಂಗಮ
ದಿರವ ಸ್ಥಲಹೊಂದುದಕೆ ಮಹಗಣಭರಿತನಿರಬೇಕು ॥
ಹಿರಿಮೆ ಜಂಗಮ ತಾನೆಯಾದರು
ಬರುವ ಜಂಗಮವರ್ಯನಂ ತಾ
ನರಿತು ಪೂಜಿಸಬೇಕೆನುವ ನುಡಿ ಚನ್ನಬಸವನದು◻ ॥ ೬೬ ॥

ಆತ ಜಂಗಮನಿಂತು ಬಹಿರೊಳು
ಜಾತು ತಿಳಿದಿರಲಂತರಂಗದ
ಪ್ರೀತ ಜಂಗಮನಾವನೆಂಬುದು ನಿಜದಿ ನಂಬುವದು ॥
ಭೂತ ಪಂಚಕೆ ಇಂದ್ರಿಯಗಳಾ
ಮಾತು ಮನಮತಿಗೆಲ್ಲ ಸಾಕ್ಷೀ
ಭೂತ ಚೈತನ್ಯಕಳೆ ನಿಶ್ಚಯದಿಂದೆ ಗ್ರಹಿಸುವದು◻ ॥ ೬೮ ॥

*ಬ ವ. ೧೯೬, † ಬ.ವ ೨೬೨, § ಬ. ವ. ೪೨೦, ‡ ಗು.ಕ.ತ್ರಿ-೨೧೨, ◻ ಚ.ಬ.ವ.
೫೫೧, ◻ ಗು.ಕ.ತ್ರಿ. ೨೪೪.

ಇಂತು ಶ್ರೀ ಗುರುಲಿಂಗ ಜಂಗಮ
ನಂತರಂಗದಿ ಯಳವಡಿಸಿಕೊಳ
ಲಿಂತು ತಿಳಿಸಿದೆಯರ್ಚನಾರ್ಪಣವಂತುವನುಭವತೆ ||
ಶಾಂತಿ ಜಂಗಮನರ್ಚನೆಯ ಫಲ
ವಿಂತು ಪಾದೋದಕ ಪ್ರಸಾದಗ
ಳಿಂತು ಅರ್ಪಿಸಬೇಕು ಲಿಂಗಕೆಯಿದುವೆಯಾನಂದ || ೬೯ ||

ತುಂಗದಥಣಿಯ ಮುರಘ ಚರವರ
ಜಂಗಮಾರ್ಯನನ್ನಾದಾನಿಯ
ಮಂಗಲಾತ್ಮರ ಸ್ಮರಣೆ ಮಾಳ್ಪುದೇ ಭಕ್ತತನವು ||
ಲಿಂಗ-ಪಾದೋದಕಕೆ ಸರಿಯೇ
ಸಂಗಮನ ಶರಣೆಲ್ಲರಾ ಘನ
ದಂಗ ನಾಲ್ಕನೆಯಾವರಣ ತಿಳಿವುದು ಹೃದಯಿಡಿದು || ೭೦ ||

ನೀರಿನಲ್ಲಿ ಜಡತ್ವವಿರಲದು
ನೀರು ಪಾದೋದಕೆನಿಸದು ಜಲ
ಧಾರೆ ಕುಡಿಯಲು ಭವದ ಬಂಧನ ಹರಿದು ಹೋಗದದು ||
ಚಾರು ಜಂಗಮ ಪಾದಸ್ಪರ್ಶದಿ
ನೀರು ಚಿಜ್ಜಲವೆನಿಸಲದನೇ
ಸಾರಸಹಜಾಚರಣೆಯೊಳಗದು ಬಳಸಬೇಕದನು || ೭೧ ||

ಘನತೆಯಾನಂದವದು ನಿಜದಿಂ
ದನುಭವಿಪುದೆ ಶಿವಾನುಭವವಿದು
ತನಿಯ ಚಿಜ್ಜಲ ಜೀವನಕೆಯಾಧಾರವಿರುತಿಹುದು ||
ವಿನಯ ಜಂಗಮ ಪಾದಸ್ಪರ್ಶದಿ
ಹನಿ ಜಡತ್ವವ ಬಯಲುವಾಗುತ
ಘನತೆ ಮತಿಪ್ರದ ದೋಷನಾಶನ- ಕರ್ಮಭೇದನದು* || ೭೨ ||

ಸ್ಥಿತಿಯೆ ಬದಲಾಗುತಲಿ ಚಿಜ್ಜಲ
ಜೊತೆಗೆ ವ್ಯಾಧಿ ವಿನಾಶನಂ ಗುಣ
ತತಿಯ ಫಲಪ್ರದ ಮುಕ್ತಿದಾಯಕಕೆಲ್ಲಕಾಧಾರ ||
ಸತತವಿದರೊಳು ನಂಬಿರುವ ನಿಜ
ಮತ ಶರಣಪರಪದವಿಯಾಶೆಗೆ
ಮತಿಯ ಸೆಳಕದು ಸರ್ವರಿಗೆ† ಪಾದೋದಕವು ಲೇಸು || ೭೩ ||

* ವೀ ದಾ.ಸಿ- p ೪೬೯, † ಚ.ಬ.ವ. ೫೩೫.

ಪಾದ ತೀರ್ಥದಿ ಸರ್ವ ತೀರ್ಥಂ
ಪಾದ ತೀರ್ಥದಿ ಸರ್ವ ಕ್ಷೇತ್ರಂ
ಪಾದ ತೀರ್ಥದಿ ಸರ್ವ ಸ್ತೋತ್ರಂ ತನುಪವಿತ್ರೆಂದ ||
ಮೋದದಿಂ ಮಾರಯ್ಯನಾ ಪಾ
ದೋದಕವ ಸಿಂಪಡಿಸಲಾ-ಬದ
ಲಾದ ಹೇಮದ ಸತ್ಯ ಸಂಗತಿ ಮುದದಿ ತಿಳಿಯುವದು || ೭೪ ||

ಹಾನಿರದ ಸಲ್ಲಾಭ ದಶವಿಧ
ಶಾಣುತಿಹುದೈ ಕ್ರಮದಿ ಗ್ರಹಿಸಿರೆ
ಶಾನೆ ಸತ್ಫಲ ಕರುಣಿ ಸವಿನಯ ಸಮತೆಯೆಂಬುವವು ||
ತಾನೆಯನುಭವ ಮಾಡಿ ಕೊಂಡಿಹ
ಶ್ರೇಣಿ ಹೃದಯಾಂತರೊಳು ಸುಖ ಸ
ಮ್ಮಾನ ಪೂರ್ಣರೆ ನಾನು ನೀನೆದಡಳಿದು ತಾನಾದು || ೭೫ ||

ಸರತರದ ಗುರುಲಿಂಗ ಜಂಗಮ
ಕಿರಣದಿಂ ಸಂಪ್ರಾಪ್ತಿಯಹುದೇ
ವರಪ್ರಸಾದದು ಶುದ್ಧ ಸಿದ್ಧ ಪ್ರಸಿದ್ಧ ತಿಳಿಯುವದು ||
ಅರಿಯೆ ಶುದ್ಧ ಪ್ರಸಾದರೂಪಂ
ಸಿರಿಯು ಸಿದ್ಧ ಪ್ರಸಾದ ರುಚಿಯಂ
ವರಪ್ರಸಿದ್ಧ ಪ್ರಸಾದ ತೃಪ್ತಿಯು ನೀಡಿ ಸಂತೃಪ್ತಿ || ೭೬ ||

ಗುರುಪ್ರಸಾದದಿ ತನುವು ಸರಿ ಮುಂ
ದೆರಡರಿಂ ಮನಭಾವ ಶುದ್ಧಿಯು*
ವಿರಲು ಶರಣರ ಸಂಗದಿಂ ಸಾಧ್ಯವದು ತಿಳಿರೆಂದ ||
ಪರಿ ಪ್ರಸಾದದಿ ಮೃತ್ಯುದೂರದು
ಕರುಣ ಕೃಪೆಯದು ಕೀರ್ತಿ ಕೊಡುವದು
ಶರಣರಿಗೆ ಬಹುಮುಖ್ಯ ಮತ್ತೇನನ್ನೂ ಆಶಿಸನು || ೭೭ ||

ತಿಳಿ ಪದಾರ್ಥವು ಪ್ರಾಕೃತಿಕವೆನೆ
ಕಳೆ ಪ್ರಸಾದವು ಪರಮಾರ್ಥಿಕ
ತಿಳಿಯುದಿದನಂ ಜನನಿಯೆಂದೇ ಮೂಲತತ್ವವದು ||
ತಿಳಿಯುದನ್ನಂ ಬ್ರಹ್ಮಶ್ರುತಿಮತ†
ತಿಳಿಮೆಗದುಆಯ್ದುಕ್ಕಿ ಶರಣನ
ಹೊಳೆವದನುಭವಿ ಮರುಳಶಂಕರದೇವನಂ ಸ್ಮರಿಸಿ || ೭೮ ||

* ಛಾ-ಉ-ಪ ೭೨೬, ೭೬೫, † ತೈತ್ತಿರೀಯ ೩/೨.

ಹೇಮಕಾಮಿನಿಗಾಗಿಯಲ್ಲದ
ನಾಮ ಗಳಿಸುದಕಾಗಿ ತೋರದ
ನೇಮಿ ತಿಳಿವಿನ ತಿರುಳು ಮರೆಯದ ಶರಣ ಜೀವನವು ||
ರಾಮಣೀಯಕ ಸುಪ್ರಸಾದಿ ಸ
ದಮಯರವರು ನೆರಳದಂತೆ ಚಿ
ದಮೃತರು ನಿತ್ಯದನುಪಮ ಭೂಷಿತರು ಶರಣರರು || ೭೯ ||

ಬರುವದೇನೇ ಬರಲಿ ಬರಲದು
ಸರಳವನುಭವಿಸುತ್ತೆ ಸಾಗುವ
ಶರಣ ಸಂಕುಳವದಕೆ ಹರುಷ ಪ್ರಸಾದವೆನ್ನುವರು ||
ಮರೆತ ಕರ್ಮದ ಫಲವೆಯೆನ್ನುತೆ
ಸರಸ ಲಿಂಗದ ಸಂಗ ಸದ್ರಸ
ಸಿರಿಯ ಶೃಂಗಾರದೊಳು ಸಾಗಿದ ಮಹಪ್ರಸಾದಿಕರು || ೮೦ ||

ಈ ಪರಿಯ ಗ್ರಹಿಸಿರುವ ಶರಣರ
ಮಾಪನೆಯು ಕಠಿಣಹುದು ಕಾಯವು
ದೀಪದೊಳು ಒಳಹೊರಗು ಬೆಳಗುತಲಿಹನು ನಿತ್ಯದಲಿ ||
ಈ ಪ್ರಸಾದಕೆ ಕಾರಣಿಕರಾ
ಶ್ರೀ ಪದವ ಪೂಜಿಸಲು ಬೇಕದು
ಪಾಪ ಕಳೆಯುವ ಭಸ್ಮಮಣಿ ಮಹಮಂತ್ರ ಸಹಿತಾಗಿ || ೮೧ ||

ಅನ್ನದಾನ ಪ್ರಸಾದ ಮಹಿಮೆಗೆ
ಯನ್ನದಾನೀಶಂಥವರ ಚರಿ
ತಾನ್ನ ಶೋಭಿತವಿರಲು ತಾವಿದ ಸ್ಮರಣಮಾಡುವದು ||
ಬನ್ನಿ ಮುಂದೆ ವಿಭೂತಿ ಮಹತಿಯ
ನಿನ್ನು ತಿಳಿವುದಕಾರನೆಯದದು
ಮನ್ನಿಸುವರ್ಕೈ ದಾರ್ಶನಿಕರಾ ಧರಿಸುತ್ತೆ ನಿತ್ಯದೊಳು || ೮೨ ||

ವೀರಶೈವಗೆ ವಿಭೂತಿ ಮುಖ್ಯವು
ಸಾರಪದ್ಧತಿವಿಡಿದು ಧಾರಣ*
ಸಾರವಿದೆ ಸೋಪಾಧಿಕಂ ನಿರುಪಾಧಿಕಂ ಇರಲು ||
ನೇರ ಗೋಮಯ ಭಸ್ಮ ಪ್ರಥಮಂ
ಚಾರು ಚಿದ್ಭಸ್ಮವದೆ ದ್ವಿತಿಯದು
ಧಾರಣಕೆ ಹೊರಗಿನದು ಪ್ರಥಮಂ ದ್ವಿತಿಯದಾಂತರಿಕ || ೮೩ ||

* ದೀಕ್ಷಾ-೨/೮೧-೮೯.

ಪರಮ ಪೂಜ್ಯರ ಶಾಂತಿ ಚಿತ್ಕಳೆ
ಭರಿತವದೆ ನಿರುಪಾಧಿಕಂ ಗುರಿ
ಪರಿಣಮಿಸಿ ತ್ರಿಗುಣಳಿದ ಚಿದ್ಭಸ್ಮವು ಪ್ರಸಾದಿಕಗೆ ॥
ಧರಿಸುವಂಥ ವಿಭೂತಿಯೊಳಗಾ
ಧರಣಿಯೊಳಗಿನ ಸರ್ವತೀರ್ಥಂ
ಧರಿಸಿ ಮುಕ್ತರು ಭಸ್ಮಸ್ನಾನದಿ* ಶರಣ ಪುಂಗವರು ॥ ೮೪ ॥

ಪರಮ ಪ್ರಣವದ ಭಸ್ಮ ಕ್ರಿಮಿಹರ
ನಿರತ ಶರಣರು ಧರಿಸಲಾ ಬಹು
ಹರುಷ ಜಾಗ್ರತ ವಹಿಸಬೇಕದು ಚಲ್ಲದಲೆ ಕಣವ ॥
ಪರಮ ಕಣ ಸ್ಪರ್ಶದಲಿ ಶಬರನು
ಹರಗೆ ಮನ್ನಿತನಾದ ಸತ್ಯಂ
ಧರಿಸದವರನು ಮೆಚ್ಚನ್ಯೆ ಧರಿಸಿರಲು ಸಂತಸರು† ॥ ೮೫ ॥

ಶ್ರದ್ಧೆಯಿಂದದೆ ಫಣಿಗೆ ಮಂತ್ರ– ಸು
ಬದ್ಧ ಹಚ್ಚಲು ನಿತ್ಯವರ್ಧನ
ಬುದ್ಧಿ ಶಕ್ತಿಯು ಶೈತ್ಯಬಾಧೆಯು ಕಳೆದು ಕಂಗೊಳಿಪ ॥
ಮದ್ದು ಸಮವಿರಲದು ವಿಭೂತಿ ಸು
ಬದ್ಧ ಭಸಿತ ಸುಭಸ್ಮ ಕ್ಷಾರ ಶಿ
ಶುದ್ಧ ರಕ್ಷೆಗಳೈದು§ ಪೆಸರ ಪಡೆದು ಪ್ರಭಾವಿತವು ॥ ೮೬ ॥

ಭಸ್ಮದಿಂದಾಚಾರ ಶ್ರೀ ವಿಧಿ
ಭಸ್ಮದಿಂ ಸುವಿಚಾರ ಶ್ರೀವಿಧಿ
ಭಸ್ಮದಿಂ ಸಂಸಾರ ಭ್ರಾಂತಿಯ ಭಾವಸಂಹಾರ ॥
ಭಸ್ಮದಿಂ ಮನಸಿಜನ ಸುಟ್ಟಹ
ರಸ್ಮಿ ಭೂಷಿತಳವಳ ಚಕಿತಾ
ಕಸ್ಮಿಕತದ ಮಹದೇವಿ ನುಡಿ‡ ಪ್ರಭುವಿಂಗೆ ಪ್ರಭೆಹಾರ ॥ ೮೭ ॥

ತಿಳಿಯದಲೆ ಧರಿಸಿರಲಿ ನಿಜ ತಾ
ನಳಿದು ಕರಸ್ಪರ್ಶದಲಿ ಸರಿಸಲಿ
ಸುಳಿದು ಮಲಗಿರೆ ಬೇರೆಯವರೇ ತನಗೆ ಸ್ಪರ್ಶಿಸಲಿ ॥
ಹೊಳೆಯುತಿಹನವ ನಿತ್ಯ ಪಾಪದೊ
ಳಳಿದ ಶರಭನ ಹಣೆಗೆ ಸ್ನಾನದು
ತುಳಿದ ಪಾದದ ಭಸ್ಮ ಕಣದಿಂ ಮನ್ನಿತನು ಹರನಿಂದ ॥ ೮೮ ॥

* ಸಿ. ಶಿಖಾಮಣಿ ೭/೨೩, † ಬ. ವ ೭೪, ೮೫, ೮೮, § ಶಿ. ದರ್ಪಣ ಪದ ೪೮/೬,
‡ ೧೦೫, ▣ ಕೈ. ವ ೩/೧೨.

ಇನ್ನು ಕೇಳಿರಿ ಪೂಜ್ಯ ವಸ್ತುವ
ಮನ್ಯದಿಂ ಪೂಜಿಸುವ ಸಾಧನ
ಚನ್ನದಷ್ಟಾವರಣದೊಳಗೇಳನೆಯ ರುದ್ರಾಕ್ಷಿ ॥
ಮನ್ನಿಸಿದ ಬಸವಾದಿ ಗಣ ಸಂ
ಪನ್ನರಿಂ ಧರಿಸಿಹುದ ಮಣಿಸರ
ವನ್ನೆ ಧರಿಸುವ ಭಕ್ತರು ಸಂಗಮನೆ ತಿಳಿರಣ್ಣ* ॥ ೮೯ ॥

ಮಣಿಗೆ ಹಿನ್ನೆಲೆಯುಂಟು ತ್ರಿಪುರರ
ಹಣಿವ ಸಮಯದಿ ರುದ್ರನಯನದಿ†
ಹನಿಯ ಫಲ ರುದ್ರಾಕ್ಷಿ ಶರಣಸತಿಯಳ ಮೈದೊಡಿಗೆ ॥
ಮಣಿಗಳಿಗೆ ಜಂಗಮನ ಪಾದದ
ಹನಿಯ ಸಿಂಪಡಿಸಲ್ಕೆ ಸಹಜದಿ
ಮಣಿಗಳೊಳು ಮಹಶಕ್ತಿ ರುಜೆಗೌಷಧಿಯು ನಿಜವಾಗಿ ॥ ೯೦ ॥

ಇಂಥ ಮಹಿಮಾಂಭರಿತ ಮಣಿಸರ
ವಂಥ ಪದ್ಧತಿವಿಡಿದು ತಿಳಿಸಿರು
ವಂಥ ಶ್ರುತಿಸಿದ್ಧಾಂತದಾಗಮದೊಳಗೆ† ಕ್ರಮವಿಡಿದು ॥
ಅಂತೆ ಧರಿಸಿರೆ ಸಕಲ ಸೌಖ್ಯವು
ಸಂತಸವು ಶೋಭೆಯದು ಲಿಂಗಕೆ
ಶಾಂತಿ ಪ್ರಾಪ್ತಿಯು ಕಂಡವಗೆ ಯಘನಾಶ ಸ್ಪರ್ಶನದಿ ॥ ೯೧ ॥
ಧರಿಸಲಾ ಚಿದ್ಭಸಿತವದು 'ನಾ',

ಹುರಿದು ಬಿಟ್ಟರೆ ಯುಳಿದಿಹುದ ನೀ,
ಪರಿಯು ಚಿದ್ ರುದ್ರಾಕ್ಷಿ ಮಾಡಿರೆ ಸುಳಿವು ಸುಳಿಯದದು ॥
ಇರವ ಭೂಷಿತ ತಾನೆ ತನ್ನೊಳು
ನಿರತ ಸ್ವ ಸ್ವರೂಪಾನುಸಂಧಾ
ನಿರವೆ ಚಿದ್‌ರುದ್ರಾಕ್ಷಿ ಧರಿಸಿರೆ ರುದ್ರ ರೂಪಹನು ॥ ೯೨ ॥

ಧರ್ಮದರ್ಶನ ಮೂರ್ತಿಗಳು ಕ್ರಮ
ಧರ್ಮದಿಂದವರೆಲ್ಲ ಪ್ರೀಯರು
ಕರ್ಮದೊಳಗವರೆಲ್ಲ ಮರೆಯರು ಧರಿಸಿ ಮುಕ್ತರು ॥
ಧರ್ಮ ಪ್ರೀಯರೆ ಮುಂದೆಯಾಲಿಸಿ
ಧರ್ಮ ಚೇತನ ಬೀಜ ಮಂತ್ರದ
ಮರ್ಮ ಮಾಧುರಿ ಸೂಕ್ಷ್ಮತೆಯದನುವಿಂದೆ ಮನದಿಂದೆ ॥ ೯೩ ॥

* ಬ. ವ. ೯೬೦, † ಸಿ. ಶಿ. ೭/೪೬, ೪೭, ೬೧. ಶಿ. ದರ್ಪಣ ಪದ ೪೮/೭,

ಪರಮ ಪೂಜ್ಯರ ಶಾಂತಿ ಚಿತ್ಕಳೆ
ಭರಿತವದೆ ನಿರುಪಾಧಿಕಂ ಗುರಿ
ಪರಿಣಮಿಸಿ ತ್ರಿಗುಣಳಿದ ಚಿದ್ಭಸ್ಮವು ಪ್ರಸಾದಿಕಗೆ ||
ಧರಿಸುವಂಥ ವಿಭೂತಿಯೊಳಗಾ
ಧರಣಿಯೊಳಗಿನ ಸರ್ವತೀರ್ಥಂ
ಧರಿಸಿ ಮುಕ್ತರು ಭಸ್ಮಸ್ನಾನದಿ* ಶರಣ ಪುಂಗವರು || ೮೪ ||

ಪರಮ ಪ್ರಣವದ ಭಸ್ಮ ಕ್ರಿಮಿಹರ
ನಿರತ ಶರಣರು ಧರಿಸಲಾ ಬಹು
ಹರುಷ ಜಾಗ್ರತ ವಹಿಸಬೇಕದು ಚೆಲ್ಲದಲೆ ಕಣವ ||
ಪರಮ ಕಣ ಸ್ಪರ್ಶದಲಿ ಶಬರನು
ಹರಗೆ ಮನ್ನಿತನಾದ ಸತ್ಯಂ
ಧರಿಸದವರನು ಮೆಚ್ಚನೈ ಧರಿಸಿರಲು ಸಂತಸದು† || ೮೫ ||

ಶ್ರದ್ಧೆಯಿಂದದೆ ಫಣೆಗೆ ಮಂತ್ರ– ಸು
ಬದ್ಧ ಹಚ್ಚಲು ನಿತ್ಯವರ್ಧನ
ಬುದ್ಧಿ ಶಕ್ತಿಯು ಶೈತ್ಯಬಾಧೆಯು ಕಳೆದು ಕಂಗೊಳಿಪ ||
ಮದ್ದು ಸಮವಿರಲದು ವಿಭೂತಿ ಸು
ಬದ್ಧ ಭಸಿತ ಸುಭಸ್ಮ ಕ್ಷಾರ ಶಿ
ಶುದ್ಧ ರಕ್ಷೆಗಳೈದು§ ಪೆಸರ ಪಡೆದು ಪ್ರಭಾವಿತವು || ೮೬ ||

ಭಸ್ಮದಿಂದಾಚಾರ ಶ್ರೀ ವಿಧಿ
ಭಸ್ಮದಿಂ ಸುವಿಚಾರ ಶ್ರೀವಿಧಿ
ಭಸ್ಮದಿಂ ಸಂಸಾರ ಭ್ರಾಂತಿಯ ಭಾವಸಂಹಾರ ||
ಭಸ್ಮದಿಂ ಮನಸಿಜನ ಸುಟ್ಟಹ
ರಸ್ಮಿ ಭೂಷಿತಳವಳ ಚಕಿತಾ
ಕಸ್ಮಿಕತದ ಮಹದೇವಿ ನುಡಿ‡ ಪ್ರಭುವಿಂಗೆ ಪ್ರಭೆಹಾರ || ೮೭ ||

ತಿಳಿಯದಲೆ ಧರಿಸಿರಲಿ ನಿಜ ತಾ
ನಳಿದು ಕರಸ್ಪರ್ಶದಲಿ ಸರಿಸಲಿ
ಸುಳಿದು ಮಲಗಿರೆ ಬೇರೆಯವರೇ ತನಗೆ ಸ್ಪರ್ಶಿಸಲಿ ||
ಹೊಳೆಯುತಿಹನವ ನಿತ್ಯ ಪಾಪದೊ
ಳಳಿದ ಶರಭನ ಹಣೆಗೆ ಸ್ನಾನದು
ತುಳಿದ ಪಾದದ ಭಸ್ಮ ಕಣದಿಂ ಮನ್ನಿತನು ಹರನಿಂದ || ೮೮ ||

* ಸಿ. ಶಿಖಾಮಣಿ ೭/೨೩, † ಬ. ವ ೭೪, ೮೫, ೮೮, § ಶಿ. ದರ್ಪಣ ಪದ ೪೮/೬,
‡ ೧೦೫, [illegible] ಕೈ. ವ ೩/೧೩

ಇನ್ನು ಕೇಳಿರಿ ಪೂಜ್ಯ ವಸ್ತುವ
ಮನ್ಯದಿಂ ಪೂಜಿಸುವ ಸಾಧನ
ಚನ್ನದಷ್ಟಾವರಣದೊಳಗೇಳನೆಯ ರುದ್ರಾಕ್ಷಿ ॥
ಮನ್ನಿಸಿದ ಬಸವಾದಿ ಗಣ ಸಂ
ಪನ್ನರಿಂ ಧರಿಸಿಹುದ ಮಣಿಸರ
ವನ್ನೆ ಧರಿಸುವ ಭಕ್ತರು ಸಂಗಮನೆ ತಿಳಿರಣ್ಣ * ॥ ೮೯ ॥

ಮಣಿಗೆ ಹಿನ್ನೆಲೆಯುಂಟು ತ್ರಿಪುರರ
ಹಣಿವ ಸಮಯದಿ ರುದ್ರನಯನದಿ†
ಹನಿಯ ಫಲ ರುದ್ರಾಕ್ಷಿ ಶರಣಸತಿಯಳ ಮೈದೊಡಿಗೆ ॥
ಮಣಿಗಳಿಗೆ ಜಂಗಮನ ಪಾದದ
ಹನಿಯ ಸಿಂಪಡಿಸಲ್ಕೆ ಸಹಜದಿ
ಮಣಿಗಳೊಳು ಮಹಶಕ್ತಿ ರುಜೆಗೌಷಧಿಯು ನಿಜವಾಗಿ ॥ ೯೦ ॥

ಇಂಥ ಮಹಿಮಾಂಭರಿತ ಮಣಿಸರ
ವಂಥ ಪದ್ಧತಿವಿಡಿದು ತಿಳಿಸಿರು
ವಂಥ ಶ್ರುತಿಸಿದ್ಧಾಂತದಾಗಮದೊಳಗೆ† ಕ್ರಮವಿಡಿದು ॥
ಅಂತೆ ಧರಿಸಿರೆ ಸಕಲ ಸೌಖ್ಯವು
ಸಂತಸವು ಶೋಭೆಯದು ಲಿಂಗಕೆ
ಶಾಂತಿ ಪ್ರಾಪ್ತಿಯು ಕಂಡವಗೆ ಯಘನಾಶ ಸ್ಪರ್ಶನದಿ ॥ ೯೧ ॥
ಧರಿಸಲಾ ಚಿದ್ಭಸಿತವದು 'ನಾ',

ಹುರಿದು ಬಿಟ್ಟರೆ ಯುಳಿದಿಹುದ ನೀ,
ಪರಿಯು ಚಿದ್ ರುದ್ರಾಕ್ಷಿ ಮಾಡಿರೆ ಸುಳಿವು ಸುಳಿಯದದು ॥
ಇರವ ಭೂಷಿತ ತಾನೆ ತನ್ನೊಳು
ನಿರತ ಸ್ವ ಸ್ವರೂಪಾನುಸಂಧಾ
ನಿರವೆ ಚಿದ್‌ರುದ್ರಾಕ್ಷಿ ಧರಿಸಿರೆ ರುದ್ರ ರೂಪಹನು ॥ ೯೨ ॥

ಧರ್ಮದರ್ಶನ ಮೂರ್ತಿಗಳು ಕ್ರಮ
ಧರ್ಮದಿಂದವರೆಲ್ಲ ಪ್ರೀಯರು
ಕರ್ಮದೊಳಗವರೆಲ್ಲ ಮರೆಯರು ಧರಿಸಿ ಮುಕ್ತಹರು ॥
ಧರ್ಮ ಪ್ರೀಯರೆ ಮುಂದೆಯಾಲಿಸಿ
ಧರ್ಮ ಚೇತನ ಬೀಜ ಮಂತ್ರದ
ಮರ್ಮ ಮಾಧುರಿ ಸೂಕ್ಷ್ಮತೆಯದನುವಿಂದೆ ಮನದಿಂದೆ ॥ ೯೩ ॥

* ಬ. ವ. ೯೬೦, † ಸಿ. ಶಿ. ೭/೪೬, ೪೭, ೬೧. ಶಿ. ದರ್ಪಣ ಪದ ೪೮/೭,

ಭಸಿತ ಮಣಿ ಸ್ಥೂಲಾಂಗ ತೊಡಿಗೆಯು
ಅಸಲು ಸಿರಿ ಸೂಕ್ಷ್ಮಾಂಗ ಮಂತ್ರವು
ಕುಸುಮ ಗಂಧದ ಸೂಕ್ಷ್ಮದಂತೆಯೆ ಹೃದಯದಾಭರಣ ॥
*ಅಸಮಲಿಂಗದ ದಿವ್ಯತಮ ನಿಜ
ಪೆಸರು ಷಣ್ಮಂತ್ರವನೆ† ಗುರುವರ
ನುಸುರಿಹುದೆ ಗ್ರಹಿಸುವದು ದೇವತೆ ನಾಮವೇ ಮಂತ್ರ || ೬೪ ||

ಧರಿಸುವದೆ ನಿಜ ತಂತ್ರವ ಶುದ್ಧೈ
ಶರಣ ಸಂಸ್ಕೃತಿ ಭವ್ಯ ಸತ್ಕೃತಿ
ಯಿರಲು ಜೀವನದುಸಿರು ಮನುಮಯವಾಗಬೇಕಪ್ಪ ॥
ತರುಣಿ ಪತಿಶುಭನಾಮ ಗೌಪ್ಯದು
ಸುರುವ ತೆರ ಮಹ ಮಂತ್ರವಂ ತಾ
ಗುರುಮುಖದಿ ತಿಳಿಯುತ್ತ ದೀಕ್ಷಾಬದ್ಧನಾಗುತಲಿ || ೬೫ ||

ಮಂತ್ರವಕ್ಷರವೆನದು ಸಗುಣತೆ
ಮಂತ್ರಪ್ರಣವದಿ ನಿರ್ಗುಣದ ಸ್ಥಿತಿ
ಮಂತ್ರವಿದು ತಿಳಿದುಪ್ಪ ಹೆತ್ತುಪ್ಪವದೆ ತಿಳಿಯೊಪ್ಪ ॥
ಮಂತ್ರವೇ ಲಿಂಗಮಿತಿ‡ ಘೋಷಣ
ತಂತ್ರದೊಳು ಲಕ್ಷಾರ್ಥ ಭೂಷಣ
ಮಂತ್ರ ತಿಳಿವುದು ತತ್ವಮಸಿ ಸಹಿತಾಗಿ ಕ್ರಮವಾಗಿ || ೬೬ ||

ಸನಿಹವಿರುತಿರೆ ಕೂಗಿ ಕರೆವರೆ
ಗುಣ ಗುಣ ತೆರವ ಕೇಳಿ ಸನ್ನೆಯ
ದನುವ ಬರುವವನಂತೆ ಧನಗೌಪ್ಯಂತೆ ಸ್ಥಿತಿಯಂತೆ ॥
ಮನೆಯ ಕಿಡಕಿಯದಿಂದೆ ಕಿರಣಗ
ಳನಿತು ಬಂದಂತೋಲು ಜಪ ನಿಜ
ದೆಣಿಕೆ ನೀರವವಿರಲಿ ಗುರಿಯಜಗಣ್ಣ ಶರಣ ಪರಿ || ೬೭ ||

ತೊರೆಗೆ ತೆರೆ ಭೂಷಣವು ಮೇಣದು
ಕೆರೆಗೆ ಕಮಲ ವಿಭೂಷಣಾಗಸ
ಸಿರಿಗೆ ಶಶಿವರ ರಸನೆಗದು ಶಿವನಾಮ ಭೂಷಣವು ॥
ಕರುಣೆರಸ ಸತ್ಕೃತಿಗೆ ನಾಟ್ಯದ
ಭರಣಿಗದು ಗತಿತಾಲ ಭೂಷಣ
ಸ್ವರಕೆ ಮುಕ್ತರು ನರಕಿಗಳು ಸಾನಂದ ಮುನಿಯಿಂದ || ೬೮ ||

* ಶಿ. ದರ್ಪಣ ಪದ ೪೧/೪. † ಸಿ. ಶಿಖಾಮಣಿ ೪/೭೮-೨೪, ‡ ಶಿ. ದರ್ಶನ-ಪು-೪೮.

ನಾಮ ಸ್ತುತಿಸಲು ನಿನ್ನ ಕೃಪೆಯದು
ನೇಮದಾತನ ಸಮಯ ಸಕ್ರಮ
ಗಾಮಿಗದು ಸಲ್ಲಾಭ-ಜಪಯಜ್ಞೋಸ್ಮಿ ಗೀತೆ ನುಡಿ ||
ಸೋಮಧರ ಮಂತ್ರವನು ಮೌನದಿ
ನೇಮ ದೃಢತೆಯುವಿಡಿದು ಜಪಿಸಲು
ಸೋಮಧರ ತಾನಾಗುವನು ತಿಳಿದಿಂತು ನಂಬುತಲಿ || ೯೯ ||

ಹೊರಗಿನಷ್ಟಾವರಣ ತಿಳಿಸಿರೆ
ಅರಿಯಲಂತರ್ಮುಖದಿ ತಿಳಿಯ
ಅರಿವೆ ಗುರು, ವನುಭವವೆ ಲಿಂಗದು ಕರಗಡಾನಂದ ||
ಅರಿಯೆ ಜಂಗಮ ಸತ್ಕ್ರಿಯಾ ನಿರ
ತಿರೆ ಸುತೇಜ ಭಸಿತ ಪ್ರಶಾಂತತೆ
ಭರಿತ ದೃಷ್ಟಿ ಶಿವಾಕ್ಷ ಜಪಿಸುವ ಮನವೆ ಚಿನ್ಮಂತ್ರ || ೧೦೦ ||

ಗುರುಕೃಪಾಮೃತ ಚಿರದನುಗ್ರಹ
ನರಿಯುವದು ಪಾದೋದಕ ಪ್ರಸಾ
ದರಿಯಲಂತಃರ್ಮುಖದಿಯಷ್ಟಾವರಣ ಸಿದ್ಧಾಂತ ||
ಸರಿಸಮನ್ವಯ ಸುಖದಿಯಿರುವಗೆ
ಬರುವ ಬಾಧೆಗಳೇನು ತೋರವು
ವರ ವಿಲಕ್ಷಣ ಸೌಖ್ಯ ಸಂಗಮ ತೃಪ್ತಿ ಸಿದ್ಧಾಂತ || ೧೦೧ ||

ಇನಿತು ಮತ್ತಿನ್ನೇನು ಹೇಳಲಿ
ಘನತೆ ಹೇಳಲೆ ಹೇಳಲೆನಿಸದು
ಕೊನೆಗೆ ಪರಿಪಕ್ವತೆಯು ಲಭಿಸಿರೆ ಲಕ್ಷ್ಯ ಹೊರಗೇಕೆ ||
ಹೊನಲು ಪರಶಿವಯೋಗ ಸಾಧಿಸಿ
ಘನತೆ ಹೊಂದಿರಿಯೆನುತೆ ಜಂಗಮ
ಘನ ಗುಹೇಶ್ವರ ಲಿಂಗ ಸುಖದಲಿ ಮೌನವಾದವನು || ೧೦೨ ||

ಇಷ್ಟು ಕೇಳುತಲಿರ್ದ ಪದ ನಿಜ
ನಿಷ್ಠೆಗೊಂಡಿಹ ಶರಣಸಂಕುಳ
ಸೃಷ್ಟಿ ಜೀವನ ಗಂಧಗೌರವ ಪಡೆದವರ ಸ್ಮರಣೆ ||
ಬಿಟ್ಟು ಬಿಡದಂತಿವರು ಮಾಡಿರೆ
ದಿಟ್ಟ ಸದ್ಗುರುವರ್ಯ ಕಾಣುತ
ತುಷ್ಟಿಗೊಳ್ಳುತಲಿರ್ದ ಒಳಹೊರದೃಷ್ಟಿ ರಸವೃಷ್ಟಿ || ೧೦೩ ||

ಅಂತೆಯಷ್ಟಾವರಣದನುಭವಿ
ಸಿಂತು ಪರಿಪೂರ್ಣಾಗಿ ನಡೆಸಿಹು
ದಂತವರ ನಡೆಸುವರ ನಡೆದಿಹರಿವರ ಸ್ಮರಿಸುವೆನು ॥
ಇಂತು ಪುರಹಾವೇರಿ–ಯಥಣಿಯ
ನಂತಪುರ–ಮೈಸೂರ–ಸುತ್ತೂರ
ಕಾಂತಿ ಚರಣ ಮಹಾಂತರ ಸಹಿತ ಅನ್ನದಾನೀಶ ॥ ೧೦೪ ॥

ಶುದ್ಧವಹುದಂಕಲಗಿಯಡವೀ
ಸಿದ್ಧ ಚರಣಾಶ್ರಯದಿ ಸ್ಥಾಪಿಸ
ಲೆದ್ದ ಪುರಮರೆಗುದ್ದಿ ಮಠವಿದುವಡವಿಸಿದ್ಧೇಶ ॥
ಬದ್ದಿದಕೆ ಗುರುವಂಶದೊಳು ಕ್ರಮ
ಬದ್ಧ ಗುರು ಗುರುಪಾದ ಕೃಪೆಯಿಂ
ದೆದ್ದ ಗುರುನಿರುಪಾಧಿ ಕೃತಿಯೋಳ್ ಒಂಬತ್ತನೆಯ ಸ್ಥಲ ॥ ೧೦೫ ॥

**ಅಂತೂ ಸ್ಥಲ ೯ ಕ್ಕಂ ಪದ ೧೦೪ ಕ್ಕಂ ಒಟ್ಟು ಪದ ೫೩೨ ಕ್ಕಂ**
**ಮಂಗಲಂ.**

ಓಂ

# ಹತ್ತನೆಯ ಸ್ಥಲ

**ಸೂಚನೆ-**

ಪರಮ ಪಂಚಾಚಾರ-ಸಾತ್ವಿಕ
ಭರಿತ ಸದ್ಗುರು ಚನ್ನವೀರನ
ಕರುಣ ಪಡೆದನು ಹೊಳಲಿನಾ ಲಿಂಗಪ್ಪ ಸದ್ಗುಣಿಯು* ||

ನಿಜಕೆಯನುಭವಸಾರಗೀತಾ
ನಿಜ ತಿಳಿಗೆ ಕೈವಲ್ಯ ಪದ್ಧತಿ
ಸುಜನರಿಗೆ ಸಾಂಗತ್ಯ ಪರಮಾನುಭವ ಬೋಧೆಯದು ||
ರುಚಿರ-ಚಿಂತಾಮಣಿ ಪ್ರಕಾಶಿಕೆ
ನಿಜ ಸುಭಾಷೆಯು ಒರೆದ ಸತ್ಕವಿ
ನಿಜಗುಣಿಯು ತತ್ವಾಂಗ ಸುಧೆಯನು ಭರಿಸಿ ಸಾಗುವೆನು || ೧ ||

ಭಕ್ತಿ ನಿಷ್ಠೆಯ ಕಂಡು ಮೆಚ್ಚುವ
ವ್ಯಕ್ತಿ ಶರಣರಭಾನು ಬಸವನ
ಸೂಕ್ತಿಯಿಂ ಸುಜ್ಞಾನ ಸುರಿಸುವ ಶಕ್ತಿ ಸಂಪನ್ನ ||
ಯುಕ್ತಿಯೊಳಗಾಸಕ್ತಿ ಪರಮ ವಿ
ರಕ್ತ ಭೂಷಿತ ಚನ್ನವೀರನು
ಭಕ್ತರೆಡೆ ಸಂಚರಿಸಿ ಭಕ್ತಿಯ ಬೀರಿ ಬರುತಿರ್ದ || ೨ ||

ನೆಲೆ ನಿರೂಪಣ ಸರಳದನುಭವಿ
ಚಲುವದಿಶೆ ಶುಭವಾರವೆನ್ನದೆ
ಚಲನ ಹಗಲಿರುಳೆನ್ನದೇ ಶಕುನಾಂಗ ನೋಡದಯೆ ||
ಬಲುಮೆ ಬಂಧುರ ಭಾಷ್ಯ ಭೂಷಣ
ನೆಲೆಯನರಿಯುವ ಹಕ್ಕು ಲಲನೆಗೆ
ಬೆಲೆಯಕೊಡಬೇಕೆಂದು ಬೋಧಿಸಿ ಸಿದ್ಧ ಬರುತಿದ್ದ || ೩ ||

---

* ಚ. ಶಿ. p ೫೪.

ಹೋದೆಡೆಗೆ ಬಂದೆಡೆಗೆ ನೋಡಿರೆ
ಹಾದಿ ತುಂಬಿದ ಭಕ್ತ-ಲಿಂಗಪ್ಪ
ಮೋದ ಮಂಗಳ ಮುಖವು ಮಧುರತೆ ಭಸ್ಮರುದ್ರಾಕ್ಷಿ ||
ಸಾರ ಸ್ವರ ವಚನೋಕ್ತಿ ಚಿಂತನ
ಸಾಧನದ ಶೃಂಗಾರದಿರವನು
ಮೋದ ಮನುಜರಿಗೆಲ್ಲ ವಿದ್ಯೆಯ ಬಲಿಸಿ ಬರುತಿರ್ದ ||೪||

ತೆಲುಗು ತಮಿಳ ಕಲಿಂಗ ಕುಂತಲ
ನೆಲದಿ ಬಂದಿಹ ಶರಣ ಮಂಟಪ
ದೊಲುಮೆಯಂತೆಯೆ ಚನ್ನವೀರನ ಗುರುಕುಲಕೆಯಂದು ||
ಫಲವನರಿಯಲು ಫಲದಕಂಗಳ
ಚಲುವನೆಡೆ ಮನವಿಟ್ಟು ಬರುತಿಹ
ಹೊಳೆವ ರವಿ ಕಿರಣಾಳಿ ಕಂಡಿರೆ ಹೃದಯ ಹರುಷಂದು ||೫||

ಶರಣ ಹೃದಯುದ ಹೊನಲು ಹರುಷದ
ಸರಣಿ ವಚನೋಪನಿಷದಗಳಾ
ಸುರುಳಿಯಂ ಹರಡಿಸಿದ ಪುರಮಾತೆಯರ ವೃಂದಕ್ಕೆ ||
ಧರಿಸಿ ಲಿಂಗವ ಬಿಡದೆಯರ್ಚನ
ವಿರಿಸಿಯಗಲದ ಭಾವ ಬೆಳಗಿಸಿ
ಗುರಿಯ ಮುಟ್ಟಿಸಲವರನಾ ನೀಲಾಂಬಿಕಾಸಮತೆ ||೬||

ತತ್ವದೆಡೆ ಮರಳಿಸುತೆ ವೃಂದಕೆ
ಮತ್ತೆ ಸುತರಿಗೆ ಬೋಧಗಲಿಸುವ
ಗತ್ತ ರುಚಿಸಂಪತ್ತ-ಕಂಡ ನಿಜತ್ವ ನಿಲುಮೆಯನು ||
ಚಿತ್ತವಿಡಿಯುತ ಬಸವಲಿಂಗನ
ತತ್ವಪದಗಳ ಭಾವ ಭಾವಕ
ಚಿತ್ತ ಚಿರ ಚಿನ್ನಾದದೊಳು ಚಿಲ್ಲಿಂಗನಿರುತಿಹನು ||೭||

ಲೋಕ ಪರಲೋಕಗಳ ಬಹು
ತೇಕ ತೋರಿಸಿ ಯಜ್ಞ ಮಾಡುವ
ಮೂಕ ಪಶುಗಳ ಹತ್ಯ ಮಾಳ್ಪ ಪುರೋಹಿತರ ಜಾಲ ||
ಕಾಕುವೇದ ಪುರಾಣಕದು-ಪಶು
ಬೇಕೆನಲು ಛೀ ಎನುತೆ ಶಾತ್ವಿಕ
ಪಾಕ ಬಿಡಿಸುತೆ ಶರಣರನುಭವ ವಚನ ಬೆಂಬಲಿಸಿ* ||೮||

* ಬ. ವ. ೫೭೨, ೫೩೩, ೫೭೪.

*ಹಾಲನೇಮವ ಹಿಡಿಸುತಲಿ ಮೇಣ್
ಕಾಲನಂಜಿಕೆ ತಿಳಿಸುತಲಿ ಸಹ
ಲೋಲೆಯೂರ್ವಸಿ ರಂಭೆ ಸ್ವರ್ಗ ಕುಬೇರನೈಶ್ವರ್ಯ ||
ಜಾಲಮಾತಿನ ಮಾಲೆ ಬೀಸುತ
ಕಾಲ ಕಳೆಯುವ ಕುಳಿಯ ವಿಷಕೃತಿ
ಲೋಲರಿಗೆ ಛೀಮಾರಿ ಹಾಕುತ ಶೀಲಬರುತಿರ್ದ || ೯ ||

ವಿರತನಿರುವಿಕೆ ನಿರತ ಬೋಧಕ
ಚರಿತ ಚಲುವಿಕೆ ಶಾಂತಿಯಿರುವಿಕೆ
ಮೆರಗು ಮಾಲಿಕೆ ಸ್ಥಿತಿಯ ಸೌಖ್ಯತೆ ಕ್ಷೀರಮಧು ಬೆರಿಕೆ ||
ಸರ ತರಂಗಕೆ ನೊರೆಯಸುರುಳಿಕೆ
ಸ್ವರದ ಸರಿಗಕೆ ತಾಳಮೇಳಕೆ
ಹಿರಿಯ ಹೊಳಲಿನ ಪುರಕೆ ಬರುವಿಕೆಯವರಿಗೆಲ್ಲರಿಕೆ || ೧೦ ||

ಭಕುತಿಯಿಂ ಸತ್ಕರಿಸಿ ಚರಣಕೆ
ಸಕಲ ಸೇವೆಯ ಸಲಿಸಿ ಬಳಿಕ ಗು
ರುಕುಲ ಯೋಗಕ್ಷೇಮ ಚಿಂತನ ನಡೆಯುತನುಭಾವ ||
ಸಕುಶಲದಿ ವಿವರಿಸಲು ಪರಿಸರ
ಭಕುತರಿಗೆ ಸಂತಸವ ತಂದಿರೆ
ಸುಕೃತಿಮತಿ ಲಿಂಗಪ್ಪನೆಂಬವ ಶೀಲ ಸದ್ಭಾವಿ || ೧೧ ||

ಜ್ಯೋತಿಯವರೆಂದೆಂಬ ಹೆಸರಿನ
ಖ್ಯಾತನಾಮಿಗಳಿವರು ಸಂಸ್ಕೃತಿ
ರೀತಿ ಜಂಗಮಲಿಂಗ ಪ್ರೇಮಿಗಳಾಗಿ ಸಾಗಿರಲು ||
ಈತನಾ ಸತಿ ಮರಣ ಹೊಂದಿರ
ಲೀತ ಬಾಳುವೆ ಬಂಧನದಿ ನಿಜ
ದೀತ ಬಿಡುಗಡೆಯಾಗಿಯುರವತ್ಮೂರು ಶೀಲಮತಿ || ೧೨ ||

ತೈಲ ನಿಷ್ಕಾಸನದ ಕಾಯಕ
ಶೀಲದಿಂನಡೆಸುತ್ತಲಿರೆ ಶ್ರೀ
ಲೋಲ ಚರಪರ ಜಂಗಮಾರ್ಯನ ಕೃಪೆಯ ಸಾನಿಧ್ಯ ||
ಕಾಲಕಳೆಯದೆ ಪಡೆದು ಕೆಲದಿನ
ಲೋಲನಡಿ ಲಿಂಗಾಂಗಯೋಗದ
ಹಾಲುರುಚಿ ದಿವ್ಯತೆಯ ಸಮನಿಸಿಕೊಂಡ ಸಚ್ಛೀಲ || ೧೩ ||

* ಬ ವ. ೨೩೨.

ಹೊಂದಿ ಕೆಲದಿನ ಶರಣ ಸಂಗತಿ
ಗಂಧವಂ ಮೈಗೂಡಿಸುತೆಯಾ
ನಂದದಿಂ ಸವಿಯುಣ್ಣುತಿಹ ಗೋಷ್ಠಿಯೊಳು ಮುಂದಿರುತೆ ||
ನಂದಿಪ್ರಿಯ ಲಕ್ಷಿತನ ಲಕ್ಷ್ಯದಿ
ಹೊಂದಿಕೊಂಡಿರಲೊಂದು ಸಮಯದಿ
ಮುಂದೆ ಪಂಚಾಚಾರ ವಿವರವ ತಿಳಿಸಬೇಕೆನಲು || ೧೪ ||

ವೀರಶೈವಾಚಾರ ಚಿನ್ಮಯ
ಸಾರ ಸದ್ಗುರು ಸಾಧು ಜಂಗಮ
ಧೀರವರವೀರೇಶ ಮಹಿಮಮಹೇಶ ಜಗಪೋಷ ||
ಚಾರು ಷಣ್ಮುಖಮಂತ್ರ ಮೂರುತಿ
ಘೋರ ಕೀರ್ತಿ ಸ್ವರೂಪ ನಿಷ್ಕಳ
ಮೂರವಸ್ಥೆಯ ಸಾಕ್ಷಿವರ್ಯನು ಬೋಧಿಸಿದನಿಂತು || ೧೫||

ಬಳ್ಳಿಗದು ಹೂಕಾಯಿ ಹಣ್ಣುಗ
ಳುಳ್ಳ ಮಿಡಿಕುಡಿಯಂತೆ ಶೋಭೆಗ
ಳುಳ್ಳ ಕುಟಿರಾಂಗಣದಿ ಹರ್ಷಿತ ಶರಣ ಪದ್ಮಾಳಿ ||
ಉಳ್ಳ ಋತುವು ವಸಂತ ಬೇಗೆಗೆ
ಸಳ್ಳಳನೆ ಘನ ಬಿಂದು ಮುಕ್ತಾಂ
ಗುಳ್ಮಹಾಂತ ಕುಟೀರದಾಂಗಣ ಪೂರ್ಣ ಶರಣಗಣ || ೧೬ ||

ಸತ್ಯವಾದಾಚರಣೆಯಲ್ಲಿಯೆ
ಸಿತ್ಯ ನಡೆದಿರಲವರ ಧರ್ಮದು
ಸತ್ಯದಿಂ ರಕ್ಷಣೆಯ ಮಾಳ್ಪುದು ಶ್ರೇಯಸಹಿತಾಗಿ ||
ಸ್ತುತ್ಯ ಶಿಕ್ಷಾಚಾರವಿರಲದು
ಸತ್ವ ತಪವೆನ್ನುವರು ಶರಣರು
ತಥ್ಯದಾತಪ ಸುವ್ಯವಸ್ಥಿತ ಸ್ಥಿತಿಯೆ ಆಚಾರ || ೧೭ ||

ಮುನ್ನ ಮುನಿ ಸಂಸ್ಕೃತಿಯ ಮತಿ ಸಂ
ಪನ್ನನಾಗಿರೆ ಬಾಧೆಯೇನದು
ಮನ್ಯನುಡಿಯಾಚಾರ ಪ್ರಥಮೋ ಧರ್ಮ ಸೂಕ್ತಿಗಳು ||
ಮಾನ್ಯರೆಲ್ಲರು ಒಪ್ಪುವಾ ಸ
ನ್ಮಾನ್ಯ ನಿಯಮಾಚಾರ ಬದ್ಧರಿ
ಖಿನ್ನತನ ಬರದೆಂತು ಚಿಂತನದಿಂದೆ ನಿಶ್ಚಯಿಸಿ || ೧೮ ||

ಜಾತಿ ವಿವಿಧ ಪ್ರಕಾರವಿರೆ ಪಥ
ಮಾತು ಅವರರಿವಂತೆ ಧಾರ್ಮಿಕ
ಜ್ಯೋತಿಯುರಳುತ ಹೃದಯು ಒಪ್ಪಿರೆ ಸಾಕು ಸಹಿತಾಗಿ ||
ಆತ ಕ್ರಮು ಪಿಡಿದಿರಲು ಹೃದಯುದ
ಮಾತು ಮಾಣಿಕ್ಯಗಳೆ ಸಾಕ್ಷಿರ
ಲೋತು ಗುಣಪ್ರಾಧಾನ್ಯ ಪಂಚಾಚಾರ– ತಿಳಿ ಪ್ರಾಣ || ೧೯ ||

ಶರಣರಾಚಾರ್ಯಕ್ಕೆ ಸತ್ಕ್ರಿಯೆ
ಸರಳ ಶಬ್ದು ಪಯೋಗಿಸಿಹರ್ರೈ
ಪರಮು ದೀಕ್ಷಾಜನ್ಯದಪ್ರಾಕೃತದ ತಾತ್ವಿಕತೆ ||
ಪರಿಯೆ ಲಿಂಗಾಚಾರ ಸಾಧನ
ಸಿರಿಗೆ ಸ್ವಾತಂತ್ರ್ಯತೆಯು ನೋಡಾ
ಪರಮು ಪದ್ಧತಿಬದ್ಧನಾದರೆ ಶೋಭೆಗೊಳ್ಳದದು || ೨೦ ||

ಕೇಳಿ ಸೌಮ್ಯರೆ ಪ್ರಾಣವಿದು ಜಗ
ಬಾಲಕೆಲ್ಲಕೆ ಪ್ರಿಯವು ಸಕ್ರಮು
ಶೀಲದ್ವೈದಿವೆ ಕಾರಣೇಳ್ಗೆಗೆಯಿಹವು ದೃಢತೆಯನು ||
ತಾಳಿ ಸಾಗಿರಬೇಕು ಲೌಕಿಕ
ಗಾಳಿಯೊಳು ಆರದಿಹ ಪ್ರಣತೆಯ
ವೋಲು ಭಾವನೆ ಮೂಡಿರಲು ಪುರುಷಾರ್ಥಸರಳಹುದು || ೨೧ ||

ತನುವಿನೊಳು ಹುಸಿ ತುಂಬುದಲ್ಲದೆ
ಮನದೊಳಗೆ ವಿಷಯಾದಿಗಳು ಇರೆ
ಮನೆಯೊಡೆಯು ಮನೆಯೊಳಗೆ ಎಂತಿಹನೆಂಬ ವಚನಾಂಗ*
ಘನತೆಯಿಂ ಯೋಚಿಸಿರೆ ಶರಣರ
ವಿನಯು ಮನ ಘನ ಸ್ಥಿರತೆ ನೈತಿಕ
ಮಣಿಹವನೆ ಮೈಗೂಡಿಸಿರೆ ತತ್ವಾಂಗ ಫಲವೆಂದ || ೨೨ ||

ಲಿಂಗಗುಣಗಳನೆಲ್ಲ ಸಾಧಕ
ನಂಗದೊಳು ಬರಮಾಡಿಕೊಳ್ಳುದೆ
ತುಂಗಲಿಂಗಾಚಾರ ಲಕ್ಷಣವೆಂದ ಚನ್ನಬಸವ ||
ಲಿಂಗ ಧರಿಸುತಲನ್ಯದೈವದ
ಸಂಗಿ ತಾನಾಗದಲೆಯಿರ್ಪುದು
ಲಿಂಗಪತಿ– ಸತಿ ಸಾಮರಸ್ಯಾದಿ ಹೊಂದುತರಳುವದು || ೨೩ ||

---

* ಬ. ವ. ೯೭.

ವೃಕ್ಷವಂ ವಟಬೀಜ ನುಂಗಿಹ
ಲಕ್ಷ್ಯ ಮೇಣಾಂಬರವು ಪರಿ ಸಹ
ಜಾಕ್ಷಿಯೊಳಡಗಿಹುದಂತೆ ಲಿಂಗದ ಮಧ್ಯ ವಿಶ್ವವಿದು ||
ಸೂಕ್ಷ್ಮದಿಂದಡಗಿಹುದ ಸಿರಿ ಪ್ರ
ತ್ಯಕ್ಷ ನಕ್ಷೆಯ ಪಿಡಿದ ಶರಣರು
ಪೇಕ್ಷಿಸದೆ ಸಾಗಿಹರು ಲಿಂಗಾಚಾರಿಗಳೆನಿಸಿ || ೨೪ ||

ಲಿಂಗ ಶಬ್ದ ವಿಚಾರ ಬಹುಶ್ರುತಿ
ಯಂಗ ಸೂಚಿಸುತಿಹವು ವಿವಿಧ ಸ್ಥ
ಲಾಂಗದೊಳು ಪರಬ್ರಹ್ಮ ಸಹಜಿರಲಿದಕೆ ಬಯಲೆಂಬ* ||
ತುಂಗ ವಿವಿಧ ಸುನಾಮ ವಿರೆ ನಿಜ
ದಂಗ ಬೋಧನೆಯೊಂದು ತಿಳಿವುದು
ಲಿಂಗ ನಿಷ್ಠಾಚಾರಕೆ ಸದಾಚಾರ ಶೋಭಿತವು || ೨೫ ||

ಈ ಸದಾಚಾರದೊಳು ನೀತಿಯ
ಭಾಷೆ ಸೂಚಿಸುತಿಹುದು ಇರುವಿಕೆ
ದೇಶ ಸಂತತಿಗೆಲ್ಲ ಹಿತವಾಗಿರಲು ಬೇಕಯ್ಯಾ ||
ತೋಷ ಲಿಂಗಾನುಭವಿಯೊಪ್ಪುವ
ಭಾಷೆ ನಡೆಯಂ ಕಂಡು ಪರಮತ
ರಾಶಿಗಳ ಮನ ಹೌದೆನುವ ನಿಜಸ್ಥಿತಿಯೆ ಕೃತಿವಿರಲಿ || ೨೬ ||

ಈ ಸ್ಥಿತಿಯು ತನಗನ್ಯರಿಗೆ ಸಹ
ಯೋಗವಾಗಿರಬೇಕು ಸಂತಸ
ಯಾಗ ಸಮ ಸಹವೃಷ್ಟಿ ಚೇತನ ಜೊತೆ ಸಮುಷ್ಟಿಯದ ||
ಯೋಗ ಚೇತನ ಹಿತದೊಡನೆ ಸಹಿ
ತಾಗಿ ಭಾವನೆ ತುಂಬಿರಲು ಶುಭ
ಯೋಗವೆಲ್ಲ ಸಮಾಜ ಪ್ರಾಣಿಗೆ † ದರ್ಪಣಾಗಿರಲಿ || ೨೭ ||

ಹಿಂದಿನಾ ಸುಜ್ಞಾನಿಗಳ§ ಸಾ
ನಂದ ಬುದ್ಧನ‡ ಸಹಿತ ಶರಣರು
ಹೊಂದಿದನುಭವ ಸೂತ್ರಸಂಗಮ ತಥ್ಯ ತಿಳಿದಿಂದನೆ ||
ಗಂಥ ಶೀಲಗಳುಂಟು ಬಹುತರ
ಹೊಂದಿಹುದದುದ್ಧೇಶವಿದನೇ
ವೃಂದ ಪದ್ಧತಿ ಪಾಲಿಸಲು ಹೆಚ್ಚಳತೆ ಮತ್ತೇನು || ೨೮ ||

---

* ಷ. ಜ್ಞಾ. ಸಾ. ಮುನ್ನುಡಿ ೧೩೪, † ಚ. ಬ. ವ. ೪೫,
§ ಮನು. ೧೦೦/೧೨೮, ‡ ಧಮ್ಮ - ೪/೧೨-೧೪; ೬/೯, ೧೬/೯.

ನೂಲಿನೆಳೆಸಹರಂಗ ಸುಂದರ
ಮಾಲೆಯಿರಲೇನಂತೆ ಮನಹರ
ಶೋಲ ಸೌಗಂಧತೆಯು ಇರದಿಹ ಪುಷ್ಪವೇಕಯ್ಯ ||
ಜಾಲವೆಂತಿರೆ ಹರಿದು ಹೊರಡುವ
ಶೀಲ ಪೀಠದ ಸಮತೆಯಾವುದು
ಕಾಲಕಳೆಯದು ಬರಿಯ ಭೋಗದ ಭಾಗದೊಳಗವರು || ೨೯ ||

ಮಾಡಿತಾ ಗುರುಲಿಂಗ ಜಂಗಮ
ಕೋಡಿಗದು ನಿಜ ನೀತಿ ನಿರ್ಮಲ
ಗೂಡಿಯಾಚಾರದೊಳು ಪರಹಿತ ಸತ್ಯ ಸರಿತಾಗಿ ||
ನಾಡೆ ಸನ್ಮತಿ ಚನ್ನಬಸವನ
ತೀಡುವಾ ನುಡಿ ರೂಢಿಯೊಳಗೋ
ಡಾಡಿ ಜೀವಿಸಬೇಕು ಭೋಗಾಶೆಯನು ಹೊರದೂಡಿ || ೩೦ ||

ಆವದಾಪೇಕ್ಷೆಗಳು ಇಲ್ಲದೆ
ಯಾವುದಾದರು ಕಾಯಕಿರಲದು
ದೇವಗರ್ಪಣ ದೃಷ್ಟಿಯಿರಬೇಕೆಂದ ಮುರಲಿಧರ* ||
ಆವುದದು ನುಡಿಯಿರಲಿ ಶರಣರ
ಭಾವಫಲವ ಪ್ರಸಾದರೂಪದಿ
ಭಾವಿಸುವದಾಪೇಕ್ಷೆಯಿರಬೇಕೆಂದ ಬಸವಣ್ಣ || ೩೧ ||

ಲಿಂಗಕೆಂದೇ ನೆನೆವೆ-ಕಾಯಕ
ಲಿಂಗಕೆಂದೇ ಕೂಡುವೆನು ಧನ
ಲಿಂಗಕದುವೆ ಪದಾರ್ಥಸರ್ವಂ ಎಂದು ಕಾಮಿಸುವೆ ||
ಅಂಗಗುಣಗಳನಳಿದ ನಿಷ್ಕಾ
ಮಾಂಗಿಯಾಗಿಯೆ ಸಾಗುವಾ ವಚ†
ನಾಂಗ ಸಾಕ್ಷಿಯೆ ಸೂಕ್ಷ್ಮ ಕೈಕೊಂಬಿರಲು ಮತ್ತೇನು || ೩೨ ||

ಶೀಲ ಪುರುಷನ ಗತಿಯುಯಿಲ್ಲಿರೆ
ಹಾಲು ಸುರಿವುದು ಚರಣಸನ್ನಿಧಿ
ಲೋಲವೃಂದ ಪುನೀತರಾಗುವರಯ್ಯ ಇವರಿಂದ ||
ಮೇಲೆ ಪೂಜಿತಗೊಂಡು ಶಾಂತತೆ
ಲೋಲ ಬೆಳಗುವ ಶುಭ್ರಹರಗಿರಿ
ಯೋಲು ಕಾಣುವ ಎತ್ತನೋಡಿದಡತ್ತ ಅನುವಿಂದ || ೩೩ ||

* ಗೀತಾ ೧೮/೩೦, † ಬ.ವ. ೬೫೦.

ಭಾಷೆ ಬಸವನ ಸೂಕ್ತಿ ನೋಡಿರಿ
ದೋಷ ರಹಿತ ವಿಚಾರ ಮಂಥನ
ರಾಶಿಯೊಳಗಿಹುದಾ ಸದಾಚಾರ ಸದುಭಕ್ತಿರದ ||
ಹೇಶಿಗಳನವನೊಲ್ಲನೆಂಬುದ
ಘೋಷಣೆಯ ತಿಳಿಯುವದು ಮೇಲ್ ಪರಿ
ಸೂಸುತಿಹುದುತ್ಪನ್ನ ಶೀಲಾದಿಗಳ* ಸಹಿತಾಗಿ || ೩೪ ||

ಲಿಂಗ ಸಂಗಿಯು ತನ್ನ ರೀತಿಯೊ
ಳಾಂಗಣದಿ ಜೊತೆಗೆಲ್ಲರಂ ಶಿವ
ಸಂಗಮ ಸ್ವರೂಪಿಗಳ ಭಾವಿಸಿ ಭೇದ ಮಾಡದಯೆ ||
ಲಿಂಗಮಯವೆಂದೆಂಬ ಭಾವನೆ
ಯಂಗವಿಸಿಕೊಂಡಿರುವದಾ ನಿಜ
ದಂಗವೆ ಶಿವಾಚಾರವೆಂಬುದು ತಿಳಿಯಬೇಕೆಂದ || ೩೫ ||

ಲಿಂಗಮಯವೆಂದೆಂಬ ರುಚಿ ಸ
ರ್ವಾಂಗ ಸಮಯಾಚಾರಿ ಧ್ಯೇಯದ
ಲಿಂಗಿ ಶಿವಲಾಂಛನದ ಮೂರ್ತಿಗೆಯರ್ಥಪ್ರಾಣಾದಿ ||
ಭಂಗವಿಲ್ಲದೆ ಆರ್ಪಿಸುವ ನಿ
ಷ್ಠಾಂಗ ಪೂರ್ಣರೆ ನಟನೆಯೆನಿತಿರ
ಲಂಗದು ಶಿವಾಚಾರ ಲಕ್ಷಣವೆಂದು ತಿಳಿಯುವದು || ೩೬ ||

ಗೆದ್ದ ಶಿವ ಭಾವೈಕ್ಯದಿಂ ಸಂ
ಬದ್ಧ ಶರಣರ ನಿಲವ ಸಾಧಿಸು
ತೆದ್ದ ವೃಂದಪ್ರಸಿದ್ಧಗಣ ನೀವಾಗಿರಿ ಪ್ರಸಿದ್ಧ ||
ಶುದ್ಧ ಶರಣರ ಸಂಪ್ರದಾಯದಿ
ಒದ್ದನಾಗಿರಲವನು ಎಂದಿಗ-
ಬದ್ಧ ನಡೆಯನು ನುಡಿಯ ಪಿಡಿಯನು ಕಡೆಯತನಕವನು || ೩೭ ||

†ಇವನು ಯಾರಿವರಿವರು ಯಾರಿವ
ರಿವರು ಯಾರಿವರೆಂದೆನದೆ ನ
ಮ್ಮವರೆ ಇವರಿವರೆಂಬ ಹೃದಯದ ಹರ್ಷ ನುಡಿಯಾಳಿ ||
ಸವೆಯದಿಹ ಕಹಿಗಾಣದಿಹ ಹೊಗೆ
ಕವಿಯದಿಹ ಬಡವಾಗದಿಹ ನಗೆ
ನಿವಹದೊಳು ಬರದಿಹುದ ಸರಗತಿಯಿರಲಿ ಶರಣಾಳಿ || ೩೮ ||

* ಶಿ [illegible] ೧೮೦, † ಬ. ಪ್ರ. ೯೨.

ಮರುಳಕಂಡ ಕನಸಿನ ಪರಿಯೊಳು
ಕರಿಯು ಕನ್ನಡಿಯೊಳಡಗಿದೊಲು
ಚರಿತಮಯನೇ ಲಿಂಗಜಂಗಮ ಮೆಚ್ಚುವಂತವನೂ ||
ಹೊರಗೆ ಬಳಕೆಯಿರದಾ ಭಾವನೆ
ಹರಿಯುತಲಿ ಶಿವಭಾವ ಬೆಳೆದಿಹ
ಗುರಿಯ ಸಾಧಿಸಲಿಕ್ಕೆ ಹೆಣಗುವನವನೆ ಶಿವಾಚಾರಿ || ೩೯ ||

ಮೊದಲಿನಾಚಾರ ತ್ರಯವೆಲ್ಲವ
ಹದದಿ ಜೀವನ ಕೊನೆಯವರೆಗು
ಸದರದಾಚರಿಸುವ ಪ್ರತಿಜ್ಞೆಯೆ ತಿಳಿ ಗಣಾಚಾರ ||
ಮದದಿ ಗತಿಸುವ ಭವಿಗಳನು ತಾ
ಮಧುರದಿಂ ಸುಗುಣಿಗಳ ಮಾಳ್ಪದೆ
ವಿಧಿವೃತ ಗಣಾಚಾರವೆಂಬುದನರಿಯುವದು ಸತ್ಯ || ೪೦ ||

ಧರ್ಮಮೂರ್ತಿಗಳಲ್ಲಿ ನಿಷ್ಠೆಯು
ಧರ್ಮಗ್ರಂಥಗಳಲ್ಲಿ ಶ್ರದ್ಧೆಯು
ಮರ್ಮ ತನ್ನಂಗದೊಳು ನೆಲೆಗೊಳಿಸುತ್ತೆ ಸ್ಥಿರವಾಗಿ ||
ಧರ್ಮಕದು ಅವಮಾನಬರಲದು
ಮರ್ಮ ಸತ್ಯಾಸತ್ಯದಿಂ ದು
ಷ್ಕರ್ಮಿಗಳ ಮರ್ಧಿಸುವ ತನಗಾಗದಿರೆ ಬಹುದೂರ || ೪೧ ||

ಗತಿಸುವದು ಶಪಿಸುವದು ಶಾಶನ
ಗತಿಯೊಳವಧರಿಸುತ್ತೆ ಸಂಪದ
ಸ್ಥಿತಿಯೊಳಗೆ ದುರ್ಬುದ್ಧಿ ನಾಶಕ ಮಾರ್ಗ ಪಿಡಿದಿರುವ ||
ಗತಿಯೆ ಶ್ರೇಷ್ಠದು ಭವಿಯಕುಲಕೃತಿ
ಮತಿಯೆ ಸನ್ಮತಿ ಮಾಳ್ಪಮಹಪಥ
ಮತಕೆ ತನ್ನನೆ ತಾನೆಯರ್ಪಿಸಿಕೊಳ್ವನು ಭಾವಿ || ೪೨ ||

*ಒಲ್ಲೆನಯ್ಯಾ ಬಲ್ಲೆನಯ್ಯಾ
ಬಲ್ಲೆ–ನಿಮ್ಮವರಲ್ಲದವರಂ
ಒಲ್ಲೆ–ಜಗವೆಲ್ಲರಿಯಲವನ ನಾನೊಲ್ಲೆಯೆಂಬುಕ್ತಿ ||
ಬಲ್ಲ ತನದ ಪ್ರತಿಜ್ಞೆ ನುಡಿಗಳ
ನೆಲ್ಲ ಲಕ್ಷಿಸುತಿರಲು ಬಸವನ
ನೊಳ್ಳೆಯಂತಃಕರಣ ಸ್ಥಿತಿಯಗಾಣುತಲಿ ನೀವು || ೪೩ ||

* ಬ. ವ. ೭೧೧.

ಯೋಚಿಸಲು ನಮಗಿಲ್ಲಿ ನೆನಪದು
ಮಾಚಿದೇವನ ನಿಷ್ಠೆ ನೈಜತೆ
ಸೂಚನದ ಜೊತೆನೋಡಿ ಭಗವದ್ಗೀತೆ* ಪ್ರತ್ಯಕ್ಷ ॥
ನೀಚತನವಳಿಯದಿಹ ಸ್ವಾರ್ಥತೆ
ಯಾಚೆ ಧ್ಯೇಯತೆಯಿರಲಿ ಸಂಶಯ
ದಾಚೆ ಪಥದೊಳು ತನ್ನ ತಾನರ್ಪಿಸುವ ಸ್ಥಿತಿ ಬರಲಿ ॥ ೪೪ ॥

ಕೇಳಿ ಸಹನಾವವತು ಸಹನೌ—
ಸಾಲುಪನಿಷದ ಸಿರಿ ಸಮಸ್ವರ
ಮಾಲೆ ಗಣನೆಯ ಸೂಚನಿಡುತಿಹವೆಲ್ಲ ಸೌಗಂಧ ॥
ನಾಳೆನದ ಕಾರ್ಯಾಂಗಕೌಶಲ
ಮೇಲು ಮಧುಮಯ ಬಾಳು ಬೆಳಕದು
ಹಾಳುಗೆಡುವಂತಿಡದ ಯತ್ನವೆ ಹೃದಯ ದೃಢತೆಯದು ಭೃತ್ಯಾಚಾರ ॥ ೪೫ ॥

ಧರಮದಾಚರಣೊಳಗೆ ಅಹಮಿಕೆ
ಬರುತಲಿರೆ ಸಹಜತೆಯು ಬಾರದು
ಪರಮ ಧರ್ಮಾಚಾರಿಯಾಗನು ಕಿಂಕರತ್ವದಲಿ ॥
ಗುರುವು ಜಂಗಮ ಭಕ್ತರಾರಿರೆ
ಧರಿಸಬೇಕೈದನೆಯ ಭೂಷಿತ
ನಿರತ ಭೃತ್ಯಾಚಾರ ಬಂಧುರ ಭಾವ ಕ್ರಿಯೊಳಗೆ ॥ ೪೬ ॥

ಸಲ್ಲಲಿತ ವಚನಾಂಗದೊಳಗಿನ
ಒಳ್ಳೆನುಡಿ–ಎನಗಿಂತಕಿರಿಯರು†
ಇಲ್ಲವೆಂಬುವ ನುಡಿಯ ನಿರ್ಮಲ ಕರುಳರಿಯಬೇಕು ॥
ಬಲ್ಲವರ ಸೇವೆಯೊಳು ಕಾಯದು
ಕಲ್ಲುವಾಗಿರೆ ಭಾವ ಪಕ್ವತೆ
ಪಲ್ಲವಿಸಿ ಫಲಗಂಧ ಸ್ಥಿತಿಯಾಲಸಿಗೆ ಬರದೆನಿತು ॥ ೪೭ ॥

ವಿನಯ ಸದ್ಗುಣ ಭಾವಕದು ಫಲ
ಘನತೆ ಮತ್ತದರಿಂದೆ ಬರದದು
ವಿನಯ ಸಹಜೊತೆ ಧೈರ್ಯಸಹಜೊತೆ ಸದಭಿಮಾನತೆಯು ॥
ಮುನಿಮಹತಿ ಗುರುಲಿಂಗ ಜಂಗಮ
ಘನಚರಣದಡಿ ಕಿಂಕರತ್ವದ
ಗುಣವೆ ಭೃತ್ಯಾಚಾರ ತಿಳಿರಿಕ್ಕುಳದ ಸೋಗಾಚೆ‡ ॥ ೪೮ ॥

* ಗೀತಾ–೨/೩೨, † ಬ–ವ ೨೪೬. ‡ ೩೮೮.

ಬ್ರಹ್ಮ ವಿಷ್ಣುವು ರುದ್ರ ಪದವಿಯು
ನೊಮ್ಮೆಯಾದರು ಒಲ್ಲೆನೆನ್ನುತ
ನಿಮ್ಮ ಶರಣರ ಸುಧೆಯಪಾದವನರಿತು ನಡೆವಂಥ ||
ಒಮ್ಮಾತದ ಪದ ಕರುಣಿಸೆನ್ನುವ
ನಮ್ಮ ಶರಣರ ಸೂಕ್ತಿ ನಂಬಿರ
ಲೊಮ್ಮೆ ಸಾಕದು ಭಕ್ತ ಹೃದಯ ವಿಕಾಸಗೊಳ್ಳುವದು || ೪೯ ||

ತಿಳಿಯೆ ಪಂಚಾಚಾರದಿಂ ಹೊಳೆ
ಹೊಳೆದು ತೋರುವವಯ್ಯ ಇಂತಿವು
ಸುಳಿವ ತನು ಮನ ಧನ ನಡೆನುಡಿಗಳೆಲ್ಲ ಶುದ್ಧಾಗಿ ||
ಹಳೆಯದೆಲ್ಲವ ಕಳೆದು ಹೊಸತಾ
ಹಳೆಯದಾಗದ ಸ್ಥಾನ ಪ್ರಾಪ್ತಿಯು
ಹಳಹಳೆಯದಾ ಜೀವ ತಾ ಶಿವನಾಗಿ ತೋರುವನು || ೫೦ ||

ಕಲಿಸುತಿವೆ ನವುಗೈದು ಸೂತ್ರಗ
ಳೊಲುಮೆ ಸ್ವಾತಂತ್ರ್ಯತೆ ನಿಜಕಾಯಕ
ಚಲುವ ಭಾವೈಕ್ಯತೆಯು ಚಿರಧರ್ಮಾಭಿಮಾನವನು ||
ಲಲಿತ ಕಿಂಕರತನವ ತಿಳಿಸುತ
ನಿಲವ ದಾಸೋಹಂ ಸುಭಾವವ
ಕಲಿಸುತೆಮಗಿವು ನಂಬಿ ಪಂಚಾಚಾರ ಕ್ರಮತುಂಬಿ || ೫೧ ||

ಇಷ್ಟಿಯಲ್ಲಿ ಸಮಾಜಕಿದು ಸಂ
ಸೃಷ್ಟಿ ಶುಭಲತೆ ಚಿಗುರಿ ಮಲ್ಲಿಗೆ
ವೃಷ್ಟಿ ಸೌಗಂಧತೆಯು ಹೊರಸೂಸುವದು ರಸದೃಷ್ಟಿ ||
ನಿಷ್ಠೆ ಶರಣರ ಪಂಥ ಬಿಡದಿಹ
ಗಟ್ಟಿತನ ಮೈಗೂಡಿ ಸಹಜತೆ
ವೃಷ್ಟಿ ಭಾವನೆಯುಳಿದ ಚಿನ್ಹ ಸಮೇಷ್ಟಿ ಸೌಂದರತೆ || ೫೨ ||

ಶೀಲರಿಂತಿದನರಿತು ಹರಶರ
ಣಾಳಿ ಸ್ಥಿತಿ ಮಂದಾರ ಹರ್ಷದಿ
ಕಾಲಕಳೆದಿಹರಿಂತು ಒಂದೊಂದನ್ನೆ ಸಾಧಿಸುತ ||
ಭಾಲನೇತ್ರದ ಹೃದಯ ಸತ್ಪ್ರಭೆ
ಶೀಲ ಬಸವನೊಳೈದುವಿರಲನು
ಗಾಲ ವಚನಾಂಗದೊಳು ಸಾಗಿರಿಯೆಂದ ಮಂದಸ್ಮಿತ || ೫೩ ||

ಇಂತು ಸಮಯಾಚಾರ ತಿಳಿದಿಹ
ರಿಂತು ಘನಲಿಂಗಪ್ಪ ಕೆಲದಿವ
ಸಂತು ಗುರುಕುಲವಾಣಿ ಕೆಲದಿನ ಪುರದಿ ತಾನಿರ್ದು ॥
ಸಂತಸದಿ ಕಾಲವನು ಕಳೆದಿರ
ಲಂತು ಪಂಚಾಚಾರ ನಿಷ್ಠೆಯ
ಕಾಂತಿಯೊಳು ದಿನಚರಿಯು ಶೀಲಾಚಾರಸಂಪನನು ॥ ೫೪ ॥

ಮನೆಯ ಮಂಡಳಿಗೆಲ್ಲ ಗುರುಗಳ
ಘನತೆಯನುಭವಸಾರ ಸುರಿಸುತ
ಮನೆಗೆಯುಪಯೋಗಿಸುವ ಗೋಭೂಮಿಗದು ಮುದ್ರಿರಿಸಿ ॥
ಮನೆಯ ನಿಷ್ಕಾಸನದ ಕಾಯಕ
ತನದಿ ಸಾಗಿರಲವಗೆ ಜ್ಯೋತಿಯ
ಮನೆಯವರು ಇಂತೆಂಬ ಶುಭನಾಮದಲಿ ಪ್ರಖ್ಯಾತ ॥ ೫೫ ॥

ಆಗ ಸಾವಿರ ಜಂಗಮಾರ್ಚನೆ
ಗಾಗಿಯಂತ್ಯಾವಸ್ಥೆಯೊಳು ಪೌತ್ರನಿ
ಗಾಗ ಹನ್ನೆರಡು ಶತ ಹಣಬೇಡಲ್ಕೆ ಚನ್ನಬಸವ ॥
ಆಗ ಕೇಳಿದನೇಕೆ ಹಣವದು
ಸಾಗುಮಾಡುವೆ ಹೇಳಿರುಚಿಯನು
ವಾಗಿಯನಲಾ ಸುಪ್ರಸಾದವನಾರು ಗ್ರಹಿಸುವರೋ ॥ ೫೬ ॥

ಅವರಿಗೇನೇ ತೃಪ್ತಿಯನಿಡುತ
ಲವನು ಸವೆಸುತದನು ಶಿವಾನು
ಭವದಿರುತೆ ಲಿಂಗದೊಳು ಶಶಿದಿನ ಬೆರೆವಸೂಚಿಸುತೆ ॥
ಅವಧಿಯೆಲ್ಲವ ಲಿಂಗದೇವನ
ಸವೆಯದಾರ್ಚನೆ ಮಾಡಿ ನೋಡುತ
ಸ್ತವನದಿಂ ನಲಿದಾಡಿ ಲಿಂಗೈಕ್ಯಾದನಿವಶರಣ ॥ ೫೭ ॥

ಶುದ್ಧವಹುದಂಕಲಗಿಯಡವೀ
ಸಿದ್ಧ ಚರಣಾಶ್ರಯದಿ ಸ್ಥಾಪಿಸ
ಲೆದ್ದ ಪುರ ಮರೆಗುದ್ದಿ ಮಠವಿದುವಡವಿಸಿದ್ಧೇಶ ॥
ಬದ್ದಿದಕೆ ಗುರುವಂಶದೊಳು ಕ್ರಮ
ಬದ್ಧ ಗುರು ಗುರುಪಾದ ಕೃಪೆಯಿಂ
ದೆದ್ದ ಗುರುನಿರುಪಾಧಿ ಕೃತಿಯೊಳ್ ಹತ್ತನೆಯ ಸ್ಥಲವು ॥ ೫೮ ॥

**ಅಂತೂ ಸ್ಥಲ ೧೦ಕ್ಕಂ ಪದ ೫೮ಕ್ಕಂ ಒಟ್ಟು ಪದ ೫೯೦ಕ್ಕಂ**

**ಮಂಗಲಂ**

೧೧

## ಹನ್ನೊಂದನೆಯ ಸ್ಥಲ

ಸೂಚನೆ-

ಶಕ್ತಿಸಿರಿ ಸಂಪನ್ನ ಜಂಗಮ
ನುಕ್ತಿ ಸ್ಥಲಗಳವಿಡಿದು ನಡೆದಿಹು
ದೋಕ್ತಿ ನಿಜದಾಲಿಪುದು ಸುಲಲಿತ ಮಾರ್ಗ ಮತಿತಾರ್ಥ ॥

*ಭರಿತವಹ ಸುಜ್ಞಾನ ಶತಕಂ
ಸರಸ ಕನ್ನಡ- ಕಲ್ಪವಲ್ಲರಿ
ಬರೆದ ಸಮ್ಯಜ್ಞಾನಿ ಶ್ರೀ ಗುರುಸಿದ್ಧಕರಜಮಣಿ ॥
ಚರಣ ಚಿನ್ಮಯ ಸರ್ಪಭೂಷಣ
ಸರಣಿ ಪದಸ್ವರ ಮಾಲೆ ಚಿರದಿಂ
ದಿರಿಸಿ ಕರುಣಿಸಲೆಂದು ಬೇಡುತ ನಮಿಸಿ ಸಾಗುವೆನು ॥ ೧ ॥

ಶರಣರಾ ಬಿಡುನುಡಿಗಳರ್ಥವ
ಹೊರಬರುವ ಶಶಿಯಂತೆ ನೋಡುತೆ
ಭರಿತದನುಭವವನ್ನೆ ಬೋಧಿಸುವಂಥ ನಿತ್ಯವಿಧಿ ॥
ಅರಿತ ವೈಖರಿವಾಣಿ ಸಹಜಾ
ಚರಣೆಯನುಭವಿ ಸತ್ಯಶೋಧಕ
ಶರಣ ಪರತರ ಲಿಂಗವಿಡಿದೇ ಲಿಂಗಮಯನಾದ ॥ ೨ ॥

ತನ್ನ ಸ್ವಾರ್ಥದ ನುಡಿಗಳಲ್ಲದ
ಯನ್ಯರಿಗೆ ಮುಡಿಪಾಗಿರುವ ಸಂ
ಪನ್ನ ಜಂಗಮದೇವ ಪರಮಚರತ್ಯತಿಥಿರೂಪಿ †
ಸನ್ನುತಾಗಮ ಮೂರ್ತಿ ಮಾಧುರಿ
ಚೆನ್ನಿಧಿಯ ಮಹ ಚನ್ನವೀರನ
ಚಿನ್ಮಯದ ಸದುಹೃದಯ ಮನಹರ ಚರ್ಯ ಪೂರ್ಣರಲು ॥ ೩ ॥

---

* ಶ. ಚರಿತಾಮೃತ—ಪುಟ ೭೬೦. † ಶಿ. ದರ್ಶನ ಪುಟ—೧೦೭.

ಸಮತೆಯೆಂಬುವ ಕಂತೆಭೂಷಿತ
ಸುಮತಿ ಟೊಪ್ಪರನಿಕ್ಕಿ ರಂಜನ
ರಮತೆಯೆಂಬುವ ಹಾವುಗೆಯ ಶೋಭಿತ ಗುಹೇಶ್ವರನ ||
ಅಮಿತ ಸ್ಥಿತಿಮತಿ ಶರಣಸಂಪದ
ಕುಮತ ಕಲ್ಪಿತಹರಣ ಕೃತಿರತಿ
ಸುಮತಿ ಭಕ್ತಿಯಪಥವ ತೋರಿಸುತಾತ ಸತ್ಯಾರ್ಥಿ || ೪ ||

ತಾನಳಿದ ತಾನುಳಿದ ಸಹಜ ಪಿ
ಥಾನಿ ಗುರುಕುಲಭಾನು ಸುವಿ
ಥಾನಿ ಮೃದು ಚಿದ್ಭೂಮಿಗದು ಚಿನ್ಮೇಘ ಸುರಿಸುತಲಿ ||
ಭಾನು ಸಪ್ರಭೆಯಾಚೆ ಘನ ಚಿ
ದ್ಭಾನುಮಯನ ಪ್ರಸಾದಶೀತಲ
ಗಾಣಿಸುತಲಾಗಮಿಸಿದನು ಪುರ ಚಿಕ್ಕ ಕಬ್ಬೂರ || ೫ ||

ಸುದ್ದಿಯಾಲಿಸಿ ಪಾರ್ಥಸಮತೆಯ
ರೆದ್ದು ಬಂದರು ತತ್ವತೃಪ್ತಿಗೆ
ಮುದ್ದು ಹಸು ಕರುವಂತೆ ಸಾಗರ ಶಬ್ದ ತೆರೆಯಂತೆ ||
ಸಿದ್ಧಿ ಪುರುಷನ ಬೆನ್ನಿಡಿದು ಹೊಂ
ದಿದ್ದ ಮಹಸಿದ್ಧಿಗದು ಮೈತ್ರೇಯೊ *
ಳಿದ್ದ ಶಂಕೆಗಳಂತೆ ಹರಶರಣಾಳಿ ರಸಬಾಳಿ || ೬ ||

ನೋಡಿ ಕೆಲ ಸಂತೋಷಪಟ್ಟರು
ಹಾಡಿ ಕೆಲ ಸಂತೃಪ್ತಿ ಪದರಸ
ಗೂಡಿ ಕೆಲಸೌಖ್ಯತೆಯ ಚರಣದೊಳಾಡಿದರು ಸರಸ ||
ರೂಢಿಯಾಗಿಹ ದುಶ್ಚಟಗಳ
ನ್ನೋಡಿಸಿದರ್ಕೆ ಚಾರುಗುಣ ವೈ
ಗೂಡಿಸಿದರ್ಕೆ ಕಮಲದಲಪನಿಯಂತೆ ಸ್ಥಿತಿಫಲಿಸಿ || ೭ ||

ಹೊಳೆದು ಬೆಳಗಿರೆ ತತ್ವಸುಖದಲಿ
ಖಿಲಖಿಲನೆಯರಳಿಹುದ ಕೆಲರೊಳು
ಸುಳಿದ ಜಂಗಮ ಸುಪ್ರಭಾವಲಯದೊಳು ಲಿಂಗಪ್ಪ ||
ಲಲಿತದಾಚಾರಾದಿ ನಿಷ್ಠೆಯ
ಬಲಿಸಿಕೊಂಡನು ಚನ್ನವೀರನ
ಬಲದನುಗ್ರಹ ಪಡೆಯುತನುಭವ– ಜಂಗಮಾಂಘ್ರಿಯೊಳು || ೮ ||

* ಬೃಹದಾರಣ್ಯ– ೪/೪/೫.

ಶರಣ ಸಂಸ್ಕೃತಿ ಭರಿತಪಾವನ
ಚರಿತಕಿರಿ ಕಬ್ಬೂರ ಪುರವಾ
ಗಿರಲು ಕೆಲದಿನವಿರ್ದು ಗಮನಪ್ರಸಂಗವಿರುತಿರಲು ॥
ಚರಿತನಾಯಕನಿರಲು ಒಂದಿನ
ಶರಣವರ ಲಿಂಗಪ್ಪ ಷಟ್‌ಸ್ಥಲ
ದಿರವ ತಿಳಿಸೆನಲಾಗ ಚರವರನಿಂತು ಬೋಧಿಸಿದ ॥ ೯ ॥

ಅಂಗದಷ್ಟಾವರಣ ಪರಿ ಪ್ರಾ
ಣಾಂಗ ಪಂಚಾಚಾರ ವಿವರಣ
ಶಂಗದಂತೆಯೆಯಾತ್ಮ ಷಡುಸ್ಥಲವೆಂದು ತಿಳಿಯುವದು ॥
ಭಂಗವಿಲ್ಲದೆ ಕ್ರಮದಿ ಸಾಧಿಸು
ತಂಗಣದಿ ಸದ್ಭಾವಿಯಾಗುತ
ಮಂಗಳ ನಿರಾಲಂಬದೊಳು ಸಮರಸತೆ ಹೊಂದುವದು ॥ ೧೦ ॥

ಸ್ಥಲ ವಿಶಿಷ್ಟ ವಿಚಾರ ವಿವರಣ
ಸ್ಥಲ ಪ್ರಸಾದ ಸಾರ್ಥ ಸಿಂಚನ
ತಿಳಿಯುವದು ಬರಿ ವೀರಶೈವದ ಶಾಸ್ತ್ರದೊಳು ಮಾತ್ರ ॥
ಕಲೆ ಪ್ರಭಾಮಯ ಲಿಂಗದರ್ಥವ
ಲಲಿತದಿಂ ಸಮನಾರ್ಥ ಸ್ಥಲದೊಳು
ತಿಳಿಯುದೆಂದರು–ಮಾಯಿದೇವರ* ಮಧು ಸುಧೆ ಸೂಕ್ತಿ ॥ ೧೧ ॥

ಸರ್ವದಕೆಯಾಧಾರವಾವುದೊ
ಸರ್ವದಕೆ ಸುವಿರಾಮ ಕೊಡುವದೊ
ಸರ್ವವೆಲ್ಲವು ಯಾವದಾಶ್ರಯಪಡೆದು ಬೆಳಗುವದೋ ॥
ಸರ್ವರಿದಕೇ ಸ್ಥ–ಎನುವರೈ†
ಉರ್ವಿಯೊಳಗಿನ ಬುಧರು ಶರಣರು
ಶರ್ವ ಭಕುತರು ನಂಬಬೇಕಿದ ನಿಶ್ಚಿತಾಧಾರ ॥ ೧೨ ॥

ನೇರಲಯಕಾಶ್ರಯವದಾವುದೊ
ಚಾರುತನದಿಂ ತಿಳಿಯದನೆ ಸ್ಥಲ§
ತೋರಲಾರೀಂದ್ರಿಯವು ಕೂರ್ಮಾಶ್ರಯದಿಯಡಗುಪರಿ ॥
ಸಾರತರ ಪರವಸ್ತು ಕಲ್ಪನೆ
ಸಾರದಲಿ ನುಡಿದಿಹುದ ಸ್ಥಲಗಳ
ಮೇರು ಕ್ರಮದಿಂದೇರಿ ಸಾಧಿಸಲೈಕ್ಯ ಸಹಜ ಸಿರಿ ॥ ೧೩ ॥

*ಶಿ.ಸೂತ್ರ-೨/೨.೮, †ಷಾ. ಜ್ಞಾ. ಸಾ. ಮುನ್ನುಡಿ-೧೩೫ ಪುಟ, §ಶಿ.ದರ್ಶನ-ಪುಟ ೧೨.

ಮೇಲು ಕೃತಿ ಕೈವಲ್ಯ ಪದ್ಧತಿ
ಸಾಲಿನೊಳು ಸೂಚಿತವು ಕ್ರಮದಿ ವಿ
ಶಾಲ ಶಿವಕಾರುಣ್ಯದಿಂ ಕೊನೆ ಜ್ಞಾನ ಸ್ಥಲವರೆಗೆ ||
ಮಾಲೆ ಐದಿವು ಸ್ಥಲ ಸುಲಭದಿ
ಶೀಲ ಮತಿಗಳು ತಿಳಿಸಿಹುದಿದನೆ
ಮೇಲವಿಸಿಕೊಂಡಿದೆ ತಿಳಿರಿ ಮೂಲಾರ್ಥ ನಿಜದರ್ಥ || ೧೪ ||

ಋತುಗಳಿಗೆ ತಾರಾಳಿವೃಂದಕೆ
ಸತತ ಝರಿ ನದಿಯೊಳಗೆ ಬೆರೆಯುವ
ಸ್ಥಿತಿಗೆ ಸ್ಥಲವೊಂದುಂಟು ವ್ಯಾಪಕವೊಂದು ಬಯಲುಂಟು ||
ಮತಿಯೊಳವಧರಿಸುವದು ಅದನೇ
ಕಥನಕದು ಸ್ಥಿತಿಯೆಂಬ ಸೂಕ್ಷ್ಮತೆ
ಮಥನ ಸೂಚನೆಯಿಹುದು ಲಕ್ಷ್ಯದಿ ಮುಂದೆ ತತ್ವಾರ್ಥ || ೧೫ ||

ಸರಳುಪಾಸನೆಗಾಗಿ ಸ್ಥಲವೇ
ಸರಳದಾರ್ಬಗೆಯಾಗಿ* ಲಿಂಗದ
ನೆರವಿನಿಂ ಮೇಲೇರಿ ಜೀವನು ಪಿಡಿದು ಸೋಪಾನ ||
ಸರಳ ಕೊನೆಗೈಕ್ಯತೆಯಳವಡುತ
ಪರಮ ಪೂರ್ಣತೆ ಸುಖವ ಹೊಂದುವ
ಪರಮ ಪರತರ ಏಕಮೇವಾದ್ವಿತಿಯ ಸ್ಥಲದೊಳಗೆ || ೧೬ ||

ಮುಂದೆ ಇತ್ತೆರವಾಗುತದರೊಳು
ಹೊಂದುತೆ ತ್ರಯವಿಭಾಗದೊಳಗದು
ಮುಂದುವರಿದಾರಾಗಿ ಪರಿಣಾಮಾಗಿ ತೋರಿದರೂ ||
ಗಂಧಕದು ಕೊರತಿಲ್ಲ ಪರಮಾ
ನಂದಕದು ಭಿನ್ನಿಲ್ಲ ಚಿನ್ನದಿ
ಹೊಂದಿಹುದದಾಭರಣಯೆಷ್ಟಿರೆ ಚ್ಯುತಿಯಿರದ ಚಿನ್ನ || ೧೭ ||

ಅಂಗದಷ್ಟಾವರಣ ನಿಷ್ಠೆಯ
ಸಂಗಿ ಪಂಚಾಚಾರ ರಸ ಪ್ರೀ
ಯಾಂಗಿ ಜೀವಿಯು ಸ್ಥಲದಿ ಕ್ರಮ ವಿಕಾಸಸ್ಥಿತಿಪಡೆದು ||
ಲಿಂಗ ಭೇದವನಳಿದು ಚಿತ್ಕಳೆ†
ಸಂಗಿ ಸಂಪನ್ನಾಗಿಸುಚೈತ
ನ್ಯಾಂಗದೊಳು ಸಮರಸಿಕ ಕರ್ಪುರ ಶಿಖಿಯೊಳಶಡಗುವೊಲು || ೧೮ ||

* ಶಿ. ದರ್ಶನ–ಪುಟ. ೧೮೫, † ಶಿ. ದರ್ಶನ–ಪುಟ. [illegible]

ಪರಮಶ್ರೇಯತೆ ಕೊಡುವ ಷಟ್‌ಸ್ಥಲ
ತಿರುಳ ಅಂತಃರ್ಮುಖಿಯ ತತ್ವಿದು
ನಿರಮಲದ ನಿಜಸುಖದಿ ನಿಲಕಿಸುವದಿದೆ ಸಿದ್ಧಾಂತ ॥
ದುರಿತಕರಣಾದಿಯಲಿ ಸುಳಿಯದೆ
ಸರಳಲಿಂಗದ ಮುಖದಿ ಸುಳಿಯುತ
ಗಿರಿಯ ನಿಶ್ಚಿತಲಿಂಗಲೀಯತೆ ಮಾಳ್ಪದಿದೆ ಧರ್ಮ* ॥ ॥ ೧೯ ॥

ಅಂಗ ಚಿರ ಚಿಲ್ಲಿಂಗವಾಗಲು
ಸಂಗ ಸಾಧನವದುವೆ ಷಟ್‌ಸ್ಥಲ
ಸಂಗಮನ ಸದ್ಭಕ್ತನಾ ಸುವಿಕಾಸಕದುಯಿದುವೇ ॥
ರಂಗ ಸೇವಿಸುತಿಹನು ಪ್ರಕ್ರಿಯ
ದಂಗ ಜೀವನ ಸಂಗಿ ಸಿದ್ಧಾಂ
ತಂಗವಿದು ಭಕ್ತಾದಿ-ತಿಳಿವುದುದಂಗಷಟ್‌ಸ್ಥಲವ ॥ ೨೦ ॥

ಅರಿವುದೈ ಆಚಾರ-ಗುರು-ಶಿವ,
ಚರ-ಪ್ರಸಾದ-ಸುಲಿಂಗವೇಣದು
ಅರಿವುದು ಮಹಾಲಿಂಗವೆಂಬಿವೆ ಲಿಂಗಷಟ್‌ಸ್ಥಲವು ॥
ಚರಿತವರನಿಂ ತಿಳಿದು ಭಕ್ತನು
ಸರಣಿ ಷಡ್‌ಲಿಂಗಗಳ ಸಕ್ರಮ
ಸುರುಳಿ ತಾನಾರಾಧಿಸುತ ಸಹಜೈಕ್ಯ ಕ್ರಮವೆಂದ ॥ ೨೧ ॥

ಬಂದಿರುವ ತಾನಾರು ಯಾವ
ಲ್ಲಿಂದ ಬಂದೆನು ಹೋಗುದೆಲ್ಲಿಗೆ
ಮುಂದೆ ತಾನೇನಾಗಬೇಕಾಗಿದೆಯೊ ಎಂಬುದನು ॥
ಹೊಂದಿರುವ ಚೌಪ್ರಶ್ನಾಳಿಗಳನು
ವಿಂದ ಪರಿಹರಿಸುವದೆ ಷಟ್‌ಸ್ಥಲ
ಗಂಧ ಧ್ಯೇಯವಿರಲದು ಮೊದಲನೆಹೆಜ್ಜೆ ಭಕ್ತಸ್ಥಲ ॥ ೨೨ ॥

ಇರುವ ತನು ಪ್ರಾಣಾದಿ ಸುಳ್ಳೆಂ
ದರಿತು ಸದ್ಭಕ್ತಿಯೊಳು ಸತ್ಕ್ರಿಯ
ಸರಸದೊಳು ಗುರುಲಿಂಗ ಜಂಗಮ ತ್ರಯರೆ ಹರರೂಪಿ ॥
ಅರಿತು ಭವದ ವಿಕಾರ ರಹಿತನು
ಉರಗಧರ ಪದ ಪ್ರೇಮಿ ಸಾಧಕ
ಭರಿತ ಸಾತ್ವಿಕ ಶ್ರದ್ಧೆಯಿಂ ಕೂಡಿದವನೇ ಭಕ್ತ ॥ ೨೩ ॥

* ಶಿ. ದರ್ಶನ-ಪುಟ-೧೪೬.

ಭಕ್ತ ಸ್ಥಲಕದು ಸಿದ್ಧಿಗೇರಲು
ಯುಕ್ತನಿರೆ ಹದಿನೈದುಪಸ್ಥಲ
ಸೂಕ್ತಿಗಳು ಪಿಂಡಾದಿಯಿಂ–ದಾನಾದಿ ಪರ್ಯಂತ ||
ಸೂಕ್ತಿಗಳ ಸೂತ್ರಿಡಿದು ನಿಜದಾ
ಸಕ್ತಿಯಿಂದಾರಾಧಿಸಲು ಪರ
ಮೋಕ್ತ ಸ್ಥಾನಕೆ ಕೈವಿಡಿದು ತಾನೆತ್ತಿಕೊಳ್ಳು*ವನು || ೨೪ ||

ಎನ್ನ ಭಕ್ತನು ನನಗೆ ಅಧಿಕನು
ಯೆನ್ನುತಿಹ ಶಿವಸೂಕ್ತಿಯಾಗವು
ಸೊನ್ನೆಸವು ಬಸವಾರ್ಯ ಸೂತ್ರದು ಸಾರಿ ಪ್ರಖ್ಯಾತ ||
ಎನ್ನ ಸಂಗನ ಶರಣರಾ ಸ
ನ್ಮಾನ್ಯ ಮನದ ಕೊನೆಯ ಮೊನೆಯ ಸಂ
ಪನ್ನದಿಂ ಮೇಲಡಗಿದೆಂಬುವ ವಚನ ವಿಖ್ಯಾತ || ೨೫ ||

ಈತನಿಗೆ ಸೂತಕಗಳಾ ಬರ
ದೇತರದು ನವ–ಭಕ್ತಿ ಕೊನೆಯೊಳ
ಗಾತಗಾತ್ಮಾರ್ಪಣವ ಮಾಡುವ ಭಿನ್ನ ಭಾವಿಡದೆ ||
ರೀತಿ ಕರಗಸದಂತೆ ಭಕ್ತಿಯ
ಗೀತವಿರೆ ಪರಿಪಕ್ವಗೊಂಡಿಹ
ಗೀತ ಮುಂದೆ ಮಹೇಶ ಸುಪ್ರಭಸ್ಥಲಕೆ ಸಹಜಾತ || ೨೬ ||

ಈ ಮಹೇಶ ಸ್ಥಲದಿಯೊಂಬತು
ರಾಮಣೀಯಕ ಪ್ರಶಂಸೆಯಿಂದಿಡಿ
ದಾ ಮಹಾನತೆ ಭಕ್ತದೇಹಿಕ ಲಿಂಗಸ್ಥಲವರೆಗೆ ||
ನೇಮ ನಿಷ್ಠಾ ಭಕ್ತಿಯುಕ್ತನು ಸ
ದಾ ಮಹೇಶ್ವರನಿಹ ಸುಬುದ್ಧಿಯ
ದಾ ಮಧುರತೆಯ ಹಸ್ತದಿಂದಾರಾಧಿಸುವ ಪರಿಯು || ೨೭ ||

ಸಂತತಂ ನೆರೆ ಮಾತು ಮನ ಕ್ರಿಯೆ
ಯಂತುಲಿಂಗದಿ ನಿಷ್ಠೆ ಪೂರ್ಣ ಸು
ಧಾಂತರಂಗದಿ ನೆನಹು ನೋಟದಿ ಸಲ್ಲುನುಡಿಕೂಟ ||
ಕಾಂತಭೂಷಿತ ಇಷ್ಟ–ಕರ್ಪಿತ
ನಿಂತು ಪೂರ್ವಾಶ್ರಯವನಳಿದ† ಪ್ರ
ಶಾಂತ ಭಾವಬ್ರಹ್ಮ ಶಿವಮಯನೆಮ್ಮನಿರುತಿಹನು || ೨೮ ||

* ಬ. ವ. ೫೨೫. † ಶಿ. ಧರ್ಮದ ಪುಟ–೧೧೫.

ಧರಿಸನೊಳು ಶಿವನಿರುವನೆಂಬುವ
ಶರಣ ನಿಜಗುಣಿಸೂಕ್ತಿ ನಿಶ್ಚಿತ
ಶರಣ ಜನರ ಸದುಹೃದಯನಳಿನದೊಳಗೆ ಶೋಭಿಸುತ ||
ಇರುತಿಹುದು ಶಿವಪಾದಯೆಂಬುವ
ಸ್ವರವೆ ತಾಂ ತಾನಾದ ಮಾಹೇ
ಶ್ವರನೆ ಮುಂದೆ ಪ್ರಸಾದಿಸ್ಥಲವಂ ಹೊಂದಿ ಸುಖಿಸುವನು || ೨೯ ||

ತನ್ನದೆಲ್ಲವ ಲಿಂಗಕರ್ಪಿಸು
ತನ್ಯವೇನೂ ಮುಟ್ಟದಾ ಸ
ನ್ಮಾನ್ಯಲಿಂಗ ಪ್ರಸಾದಿಯಿಹಯವಧಾನ ಭಕ್ತಿಡಿದು ||
ಚನ್ನಮಯ ಗುರುಲಿಂಗ ಜಂಗಮ
ಸನ್ನಿಹಿತ ತಾನಿರ್ದು ಸೂಕ್ಷ್ಮಾದಿ
ಮಾನ್ಯರಾ ಹೃದಯಾಂಗದಿಂಗಿತ ತಿಳಿದು ಸಾಗಿರುವ || ೩೦ ||

ಅರಚನದ ಬಳಿಕರ್ಪಣವು ನಿಜ
ಗುರಿಯ ನಿರಹಂಕಾರ ಹಸ್ತದಿ
ಕರದ ಶ್ರೀ ಶಿವಲಿಂಗನಾರಾಧಿಸುತ ರೂಪವನು ||
ಚಿರಪ್ರಸಾದತೆಗೊಳಿಸುತರ್ಪಿಸಿ
ಸರಸ ಸುಖದ ಪ್ರಸಾದಿಯಾಗದೆ
ಸರಳ ಮುಂದಿನ ಪ್ರಾಣಲಿಂಗಸ್ಥಲವು ಸಮನಿಸದು || ೩೧ ||

ಶುದ್ಧತಮದಾಹಾರದಿಂ ಮನ
ಶುದ್ಧವಹುದೈ-ಅರ್ಪಿತಾನ್ನ ಪ್ರ
ಸಿದ್ಧ ಪರಮ ಪ್ರಸಾದವೆನಿಸುತ ಮನಪವಿತ್ರಹುದು ||
ಶುದ್ಧ ತಾತ್ವಿಕ ಕಾರಣವೆ ಶ್ರುತಿ
ಸಿದ್ಧನುಡಿ ತೈತ್ತರಿಯ ಶ್ರುತಿ * ಸಂ
ಬದ್ಧ ತಿಳಿದವ ಕೀರ್ತಿಹೊಂದುವನೆಂಬದನುವಾಕ || ೩೨ ||

ಇದರೊಳಾವಾಂತರದುಪಸ್ಥಲ
ಸದರರಿಯಲಾ ಸುಪ್ರಸಾದಿ ಸ್ಥ
ಲದದರಿಂದೇಳನೆ ಪ್ರಸಾದಿ ಮಹಾತ್ಮ್ಯಸ್ಥಲವರೆಗೆ ||
ಚದುರ ಮೂವತ್ತೊಂದು ಸ್ಥಲವಂ
ಮಧುರದಿಂದನುಭವಿಸುತಲಿ ಸರ
ಿದರ ಮುಂದಿನ ಪ್ರಾಣಲಿಂಗ ಸ್ಥಲಕೆ ಸನ್ನಿಹಿತ || ೩೩ ||

* ತೈತ್ತ ೩/೮-೯.

ಹಿಂದಿನಾ ತ್ರಯಸ್ಥಲಗಳಿವು ಕ್ರಿಯೆ
ಹೊಂದಿ ದ್ವೈತಪ್ರಧಾನ ಪಿಡಿದಿರೆ
ಮುಂದಿನವು ತಿಳಿಪ್ರಾಣಲಿಂಗಾದಿಗಳು ಜ್ಞಾನದವು ||
ಹೊಂದಿದ ಷಡಿ ಪದಾರ್ಥದ ಸರಸ
ದಿಂದೆ ಪ್ರಾಣೋದಯದ ತೆರ ತಿಳಿ
ಗಂಧ ತ್ರಿವಿಧ ಪ್ರಸಾದ ಫಲವೇ ಪ್ರಾಣಲಿಂಗವದು* ||೩೪||

ಉದಯವಾಗಿರಲದನೆ ತಿಳಿದಿಹ
ಚದುರನೇ ತಿಳಿ ಪ್ರಾಣಲಿಂಗಿಯು
ಇದುವೆ ಶಕ್ತಿ ಸಮನ್ವಿತ ತಿಳಿವು ಪ್ರಾಣಲಿಂಗವದು ||
ಇದನೆಯರ್ಚಿಸುವಂಥ ಲಕ್ಷಿತ
ಮಧುರನಂ ತಿಳಿವೈ ಇದೇ ಸ್ಥಿತಿ
ಹೃದಯ ಸ್ಥಲದಲ್ಲಿರ್ದು ಜಂಗಮಲಿಂಗ ಸುಮನಕರ ||೩೫||

ಪಿಡಿದೆ ಪೂಜಿಸುವಂಥ ಪರತರ
ಬೆಡಗು ನಿಷ್ಕಲ ಸಹ ಸ್ವರೂಪಿಗೆ
ಬಿಡದೆ ಸಾಧನಸಿದ್ಧಿ ಸಾಕ್ಷಾತ್ಕಾರವಹುದೆಂದ ||
ಕಡಲದೊಳು ತೆರೆ ಸ್ವರ ಪರಸ್ಪರ
ಹಿಡಿದಿರುವ ಪರಿಯುಕ್ತ ಭಕ್ತಿಯ
ಬೆಡಗುಲಿಂಗವೆ ಪ್ರಾಣ ಪ್ರಾಣವೆ ಲಿಂಗ ತಿಳಿಯುವದು ||೩೬||

ಅಂಗ ಲಿಂಗದ ಸ್ಥಲಗಳನು ನಿ
ಜಾಂಗದೊಳಗಳವಡಿಸಿಕೊಳ್ಳಲು
ತುಂಗ ಫಲ ನಿಜ ಪ್ರಾಣಲಿಂಗಸ್ಥಲವು ಪರಿಪೂರ್ಣ ||
ಲಿಂಗದರ್ಶನದಂತರಂಗದ
ಸಂಗಿಯಾಗಿರಬೇಕು ಸಮ ಭಾ
ವಾಂಗರೂಪ ಪ್ರದಕ್ಷಿಣಾದಿಗಳಿರಲು ಸತ್ಪ್ರಾಪ್ತಿ ||೩೭||

ಇನಿತು ಚಿರಸುಖದಂಗಲಿಂಗಿಗೆ
ಎನಿತಿರದು ಭವಭಾವ ಕಳವಳ
ಕ್ಷಣತೆ ಮಾಯಾಮೋಹರಹಿತ ಸಕೀಲ ಸಂಬಂಧಿ ||
ಗುಣಿಯೆ ಮುಂದಿನ ಸ್ಥಲಕೆ ಹೊಂದುವ
ಘನತೆ ಶರಣಸ್ಥಲದಿ ದೃಕ್ಸೈಯ
ಜನಿತ ರಸದಾನಂದದೆಡೆಯೊರೂಢಿಯೊಡಗೂಡಿ ||೩೮||

---

* ಶಿ. ಚರ್ಪ ಚಿ—೧೩೪ ಪುಟ.

ಶಾ ನಿರಂತರ ಲಿಂಗಸುಖಿ ಸಹ
ತಾನಿರುತಲಾನಂದ ಭಕ್ತಿಯ
ಶ್ರೇಣಿ ಭರಿತ ವಿಶುದ್ಧ ಸ್ಥಲದ ಪ್ರಸಾದಲಿಂಗವನು ||
ಮಾನವಹ ಸುಜ್ಞಾನ ಹಸ್ತದಿ
ತಾನು ಪೂಜಿಸುತಿರ್ಪ ನಿಷ್ಕಲ
ಭಾನು ರೂಪದ ಭಾವಲಿಂಗ ಸುಭಾವಿಯಾಗಿಹನು || ೩೯ ||

ಕರಣ ತಂಪಿಡುವಂಥ ಸೋಮನ
ಕಿರಣ ಬಯಸುವ ರೀತಿ ಶಿವಸುಖ
ಶರಣನಿಹ ಸರ್ವಾಂಗಲಿಂಗಿಯು ಯೆಂಬುದನು ನಂಬಿ ||
ಝುರಿನದಿಗೆ ಮೈಯೆಲ್ಲ ಕಾಲದು
ಉರಿಸಿಖಿಗೆ ಮೈಯೆಲ್ಲ ನಾಲಿಗೆ
ಯಿರಲು ಬೀಸುವಗಾಳಿಗದು ಮೈಯೆಲ್ಲ ಮುಖವಹುದು || ೪೦ ||

ನೆರೆ ಶರಣ ಸಹ ತಿಳಿರಿ ತಾಮಸ
ವಿರಹಿತನು ಸುಜ್ಞಾನ ಭರಿತನು
ನಿರತ ಸಾತ್ವಿಕ ಚರಿತರಾಗಾದಿಗಳ ಹುರಿದಂಥ ||
ಗುರಿಯ ಸಹಜ ಸ್ಥಿತಿಯಶೀಲನು
ಪರಮ ಪರತರ ಸ್ವಾನುಭಾವಿಯು
ಅರಿವೆ ಗುರುವಾಚಾರ ಶಿಷ್ಯ ಜ್ಞಾನವೇ ಲಿಂಗ || ೪೧ ||

ತಿಳಿದಗತಿ ಪರಿಣಾಮವೇ ತಪ
ಸುಳಿದ ಸಮತೆಂಬುವದೆ ಯೋಗದಿ
ಕೊಳೆದ ಸೂರ್ಯಸ್ಥಿತಿ ಶಿವತ್ವದಿ ಪೂರ್ಣ ಪರಿಪೂರ್ಣೆ ||
ಸುಳಿದ ಭೂಜಲ ಗಿರಿಯು ಪಾವನ
ಚಲುವನಿವ ಮನದೆರೆದು ನುಡಿದಿರೆ
*ಹೊಳೆವ ಲಿಂಗವೆ ಕಾಣ್ಬುದೈ ಗ್ರಹಿಸೆಂದ ನಿಜ ಚರನು || ೪೨ ||

ಮರಳಿ ಮಾನವನಾಗಲಾರನು
ಮರಳದಾ ದಿನದಂತೆ ಶರಣನು
ಶರಣ ಜಪ ಸಂಭಾಷಣೆಯೆ ಕೈಲಾಸ ಕಾಣಿರಿದೋ ||
ಸ್ವರವೆ ಬ್ರಹ್ಮಗೆ ಪರುಷ ನಯನವು†
ಹರಿಗೆ, ರುದ್ರಗೆ ಕರವು ಕಿಂತುರೆ
ಶರಣ ಪಾದವೆ ಪರುಷ ತಿಳಿವುದು ಶರ್ವಸರ್ವಾಂಗಿ || ೪೩ ||

* ಬ. ವ. ೮೬೧, † ಬ. ವ. ೮೭೫.

ಹೆಪ್ಪು ನೆರೆದಿಹ ಹಾಲಿನೊಳಗದು
ತುಪ್ಪ ಒಪ್ಪಂತಿಹುದು ವರಶರ
ಣೊಪ್ಪಿಕೊಂಡಿಹ ತಾನೆಸತಿ– ಪತಿಲಿಂಗದೊಳು ಮನದಿ ||
ಅಪ್ಪಿ ಸಂತಸಗೊಳ್ಳುವವನೇ
ಯೊಪ್ಪುವನು ಈ ಸ್ಥಲಕೆ ಸಮರಸ
ದೊಪ್ಪು ದೈಕ್ಯಸ್ಥಲಕೆ ಸಾಗುವ ವೃತ್ತಿಯಡಗುತಲಿ || ೪೪ ||

ಭಾವವದು ನಿರ್ಭಾವಗೊಳ್ಳುತ
ತೀವಿಯೈಕ್ಯತೆಗೊಳ್ವಸ್ಥಿತಿ ರಸ
ಭಾವವರಿವುದು ಅಂಗಕರ್ಪುರ ಲಿಂಗತೇಜದೊಳು ||
ತೀವಿ ಲೀನತೆ ಫಲವೆ ತಿಳಿವುದು
ಆವುದುಪಸ್ಥಲ ಕೊನೆಯವರೆಗಾ
ವಾವ ಸಮರಸಗೊಂಡು ಸಂಪುಟ ತ್ರಿಪುಟ* ರಹಿತಾಗಿ || ೪೫ ||

ಲಿಂಗ ಲಿಂಗೈಕ್ಯನದ ನಿಜ ಶಿವ
ಸಂಗ–ಸಂಗೈಕ್ಯನದಿಹುದಾ ನಿ
ರಂಗ ಸಮರಸದೈಕ್ಯ ಬಳಿಕೇನೆನೆದ ಚಿರಸುಖಿಯು ||
ಭಂಗಗೊಳ್ಳುತ ಭೇದ ಸೂತಕ
ರಂಗವಡಗುತ ಮರಳಿ ಬರದಾ
ಸಂಗಿ ಪರಿಪೂರ್ಣಾಂಗಿ ನಿಜದಳವಟ್ಟ ಸರ್ವಾಂಗಿ || ೪೬ ||

ಸುರುಳಿಯನುಭವದಂಗ ಸ್ಥಲಗಳ
ಸುರಿಸಿದ ಬಳಿಕಲಿಂಗ ಸ್ಥಲ – ಕುಲ
ಸುರುಳಿ ದೀಕ್ಷಾ ಗುರು ಸ್ಥಲವಿಡಿದು ಶೂನ್ಯಸ್ಥಲವರೆಗೆ ||
ಅರಿಯೆವೈವತ್ತೇಳು ಭಕ್ತಾ
ದಿರುವ ಷಟ್‌ಸ್ಥಲ ಸೂಕ್ಷ್ಮದುಸುರಿದ
ಸರಳ ನಿರವಯ ಕ್ರಮದುಪಸ್ಥಲ ಸೇರಿ ನೂರೊಂದು† || ೪೭ ||

ಸರಿನಿರಾಮಯ ಷಟ್‌ಸ್ಥಲವು
ಸರಳದಿಂದಲಿ ದೋಷ ಕಳೆಯುತ
ಪರಮ ಶಿವಮಯವಾಗುವಂತೆಯೆ ಮಾಡುತಿರಲದನು§
ಅರಿಯುವದು ಫಲ ನಿರವಯುವ ತಿಳಿ
ಸುರುಳಿ ಪರಿಪಕ್ವಫಲವಹುದಾ
ಪರಿ ಕರಣಗಳ ಲಿಂಗಮಯುವೇ ಮಾಳ್ಪಪರಿಯಿಲ್ಲಿ || ೪೮ ||

* ಶಿ. ದರ್ಶನ–p ೧೫೫, † ಮಹಾಂತ–p ೩೪೪, § ಮಹಾಂತ–p ೩೩೭.

ಪರಮದ್ವೈಕ್ಯಸ್ಥಲವಿದೇನೆನೆ*
ಮರಣಸ್ಥಲಯೆಂದರ್ಥಮಾಡದು
ಸರಸ ಸಮರಸದಂಗ ಲಿಂಗದಿಯರಿತು ತಿಳಿಮೆಯಲಿ ॥
ಹುರಿಯುತಂಗವ ಗುಣವ ಲಿಂಗದ
ಹಿರಿಮೆ ಗುಣವಂಗವಿಸಿಕೊಂಡಿರೆ
ಹರುಷದಿಂ ಚಿರಸಾಮರಸ್ಯದ ಪ್ರಭೆಯು ಪರಿಪೂರ್ಣ ॥ ೪೯ ॥

ಖ್ಯಾತ ಪರಿಮಳ ಕಾಣಲಾಗದು
ಜ್ಯೋತಿ ಪ್ರಭೆಯಂ ಹಿಡಿಯಲಾಗದು
ಮಾತೆ ಜ್ಯೋತಿರ್ಲಿಂಗವಹ ಸುಜ್ಞಾನಿಸೌರಭವ ॥
ನೀತಿನಿಯಮ ನಿರೂಪಣೇನಿದೆ
ಸಾತಿಶಯ ಶಿವ ಶಕ್ತಿ ಪೂರ್ಣ ಅ
ಜಾತ ಷಡುಸ್ಥಲದಾಚೆ ನಿಸ್ಸಂಸಾರಿ ತಿಳಿರಿವನ ॥ ೫೦ ॥

ಇದುವೆ ಜೀವನ್ಮುಕ್ತ ಸ್ಥಿತಿಯದು
ಇದುವೆ ಸ್ಥಿತಪ್ರಜ್ಞದ ಸರಸತೆ
ಯಿದುವೆ ಮೈತ್ರಿ– ಕರುಣದ ಮುದಿತೆಯುಪೇಕ್ಷೆ ಸದ್ಗುಣಯು ॥
ಸದಮಲತೆಯಿಂದಿರುತಿಹನು ಮೇ
ಣದುವೆ ವರ ಸುಜ್ಞಾನ ಚಿನ್ಹೆಯು
ಮಧುರ ಗುಣ ಪ್ರಾಚುರ್ಯಗಿರದದು ಭ್ರಾಂತಿವಿಭ್ರಾಂತಿ ॥ ೫೧ ॥

ಇನಿತು ಕೇಳುತಲೋರ್ವ ಸಾಧಕ
ಮಣಿದು ಪ್ರಶ್ನಿಸುತಿಂತು ಶಿವಮತಿ
ಗಣನ ಗುರುತಿಪುದೆಂತು ಪದವಿಯದಾಸೆಯುವಗಿರದೇ ॥
ಘನಕೆ ಬಾಧೆಯು ತೋರದಿಹದೇ
ಜನಕೆಯೀತನ ಜೀವನದ ಪ್ರ
ಶ್ನೆನಿಯೂಕೆ ಮೋಹಿಪನೆನರೆ– ಈ ತೆರ ಪ್ರಶ್ನಿಸಲು ನುಡಿದ ॥ ೫೨ ॥

ನಿಜವರಿದ ಶಿವಯೋಗಿಗದು
ನಿಜದಿ ಲೌಕಿಕ ಭಾವವಿರದದು
ವಿಜಯಮುಖಿಯಾಗಿರುವ ಸಾಕ್ಷಿಕ ಬಯಲಪೂರ್ಣಹನು ॥
ನಿಜದವನ ತೇಜವದು ಸೂಕ್ಷ್ಮದಿ
ನಿಜವ ತಿಳಿಪುದು ನಿರ್ವಿಕಾರದ
ನಿಜದ ಸುಸ್ಥಿತಿ ಸುಖದ ಪದವಿಯದಾಚೆ ಪತ್ತೇನು ॥ ೫೩ ॥

* ಮಹಾಂತ ಪ್ರ೩೦, ಸಹ. ಪಂ.ಪದ–೩೭೫, ಸ.ವಿ. ಚಿಂತಾಮಣಿ–೧೭೯–೧೮೩

ಇರದು ಮತ್ತೊಂದಾಸೆಯುವನೊಳು
ಬರದುದಾವದು ಬಾಧೆ ಲೌಕಿಕ
ಬರಲದನು ಕಾಣುವನು ಶಿವಮಯ ಮೋಹರಹಿತಾಚೆ ||
ಭರಿತ ಬಯಲೊಳು ಬಯಲುವಾಗಿಹ
ಶರಣನೆಲೆಗೊಂಡಿರಲು ಕಾರಣ
ಹರುಷ ಹೊಚತೇನುಂಟು ನಿಜದನುಭವಿಸಿ ಸಾಗೆನುತ || ೫೮ ||

ಶ್ರದ್ಧೆ ನಿಷ್ಠಾ ಸಾವಧಾನದಿ
ಬದ್ಧನಾಗುತ ಗಟ್ಟಿಗೊಳ್ಳುತ
ಶುದ್ಧದನುಭವ ಸಾರಸಗೊಳ್ಳುತ ಸಮರಸಾನಂದ ||
ಹೊದ್ದಿ ಹರ್ಷದಿ ಬಯಲುಗೊಳ್ಳುತ
ಲೆದ್ದು ತಿರುಗಿ ಮರಳದ ಸ್ಥಿತಿಯು ಪ್ರ
ಸಿದ್ಧ ಫಲವೇ ವೀರಶೈವಾಚಾರ ಪಥವೆನಲು || ೫೫ ||

ವಾರಿಕಲ್ಲದು ವಾರಿಯೊಳಗದು
ನೀರು ನೀರನು ಕೂಡದಂತೆಯೆ
ದಾರಿ ದಾರಿಯಗೂಡಿ ದಾರಿಯು ನೇರಗಿರಿ ತಲುಪಿ ||
ತೋರದಾಯಿತು ಧಾರಿಮುಂದದು
ಹಾರಿಹೋಯಿತು ಶಂಕೆಬಯಲೊಳು
ಯಾರಿಗೂಎನೊಂದುಯೆನದಾ ನಾದಮಯವಾಗುವನು || ೫೬ ||

ಕತ್ತಲೊಳು ಕರಿ ಕಾಣದಂತೆಯೆ
ಮುತ್ತಿನೊಳು ಹನಿ ತೋರದಂತೆಯೆ
ಸುತ್ತುವರಿದಿಹ ದುಂಡುಬಯಲೊಳು ಮಾಲೆತೋರದದ ||
ಸ್ತುತ್ಯ ಸ್ಥಿತಿ ಸ್ವರಯೋಗವಾಗದು
ಹತ್ತದಂತೆಯೆ ಕರಗಿ ಹೋಯಿತು
ಚಿತ್ತಜಾಂತಕ ಗುರುಗುಹೇಶ್ವರ ಮೂರ್ತಿಸ್ಮರಿಸುತಲಿ || ೫೭ ||

ಶುದ್ಧವಹುದಂಕಲಗಿಯಡವೀ
ಸಿದ್ಧ ಚರಣಾಶ್ರಯದಿ ಸ್ಥಾಪಿಸ
ಲೆದ್ದ ಪುರ ಮರೆಗುದ್ದಿ ಮಠವಿದುವಡವಿಸಿದ್ಧೇಶ ||
ಬದ್ದಿದಕೆ ಗುರುವಂಶದೊಳು ಕ್ರಮ
ಬದ್ಧ ಗುರು ಗುರುಪಾದ ಕೃಪೆಯಿಂ
ದೆದ್ದ ಗುರುನಿರುಪಾಧಿ ಕೃತಿಯೊಳ್ ಸ್ಥಲವು ಹನ್ನೊಂದು || ೫೮ ||

ಅಂತೂ ಸ್ಥಲ ೧೧ಕ್ಕಂ ಪದ ೫೮ ಕ್ಕಂ ಒಟ್ಟುಪದ
೬೪೮ ಕ್ಕಂ ಮಂಗಳಂ

ಓಂ

# ಹನ್ನೆರಡನೆಯ ಸ್ಥಲ

**ಸೂಚನೆ-**

ಚರಿತನಾಯಕ ಮೂರ್ತಿಕರುಣದಿ
ಪರಮ ಜನಪದ ರಾಜಧರ್ಮವ
ನರುಹಿದನು ಬಿದನೂರಿನೊಳು ಬಂದಾಗ ಕ್ರಮದಿಂದ ||

*ಮೃಡನ ಸ್ಥಿತಿಗತಿ ಸಮತೆ ಬಂಧುರ
ನುಡಿಯ ವಚನಾಂಗವನು ಬರೆದಿಹ
ಬೆಡಗುಪುರ ಜೇವರಗಿ ಪ್ರಭು ಪ್ರಖ್ಯಾತ ಷಣ್ಮುಖನ ||
ಬಿಡದೆ ಲಕ್ಷಣ ಸಲೆ ವಿಲಕ್ಷಣ
ನುಡಿಯನುರೆ ಸಿರಿಯೆನ್ನ ಹೃದಯದಿ
ಬಿಡದೆ ಬಾಡದೆ ಮೂಡಲೆನುತಾಂ ಸ್ಮರಿಸಿ ಸಾಗುವೆನು || ೧ ||

ಭಕ್ತಿಯಿದು ಬಾಳುವೆಗೆ ನೆಲೆಕಲೆ
ಯುಕ್ತವಾಗಿರಬೇಕು ತಾತ್ವಿಕ
ಶಕ್ತಿಯಿರೆ ರಾಗಾದಿದೋಷವು ನಾಶವಾಗುವದು ||
ಭಕ್ತಿರೂಪದ ಶಕ್ತಿಯೊಳು ರಸ
ಯುಕ್ತ ಶುದ್ಧ ಜ್ಞಾನ ಪ್ರೇಮ ಪ್ರ
ಯುಕ್ತ ಸೌಖ್ಯ ಸಮನ್ವಯದ ಕ್ರಿಯೆ ಶುದ್ಧವಿರಬೇಕು || ೨ ||

ಶುದ್ಧ ಮತಿ ಕ್ರಿಯೆ ಪ್ರೇಮ ಮೂರಿವು
ಸಿದ್ಧವಾಗಿರಬೇಕು ಕೊರತಿರೆ
ಶುದ್ಧವೆನಿಸದು ಭಕ್ತಿ ಸಮರಸದನುಭವಕೆ ಬರದು ||
ಶುದ್ಧ ತಿಳಿಯಾಚಾರವಿರೆ ಸಂ
ಬದ್ಧ ಪೂರ್ಣತೆಗೊಂಡುತಾ ರಸ
ಬದ್ಧ ಹದಭೂಮಿಯೊಳು ಬೆರೆದಿಹ ಟೆಂಗುಫಲಕೊಡದೇ || ೩ ||

* ಶಿ. ಚರಿತಾಮೃತ p-೭೧೫.

ದೋಷಿಗಳ ದೋಷದವಿದುಯೆನ್ನುತೆ
ದೋಷಗಳ ನಿಜ ತಿಳಿಸಿ ಸಾಗುವ
ಭಾಷೆ ಜಂಗಮು ಬಾಣತಾಗಿಸಿಕೊಂಡ ಕರಿಯೋಲು ||
ಹೇಶಿಗುಣಿಗಳ ಶಬ್ದ ಸಹಿಸುತ
ಭೂಷಿತಂ ತಾನಾಗಿ ಸಂಯಮು
ಭೂಷಿತರ ಸಂಚಾರ ನಿತ್ಯ ಪವಿತ್ರಗೊಳಿಸುವದಕೆ || ॥ ೪ ॥

ಮದ ವಿಕಾರಾದಿಗಳು ಸುಳಿಯು
ಲದರ ಬಾಧೆಯ ಕಳೆಯಲಾ ಅಂ
ಬುಧಿಯು ಸಿಂಪಿನಬಾಯಿ ಬಿಡುತಿಹುದೆಡೆಗೆ ಸಂಚಾರ ||
ಮಧುರ ಬುದ್ಧನ ಬೋಧ ಸುಂದರ
ಸದರ ತಿಳಿಯಲು ಸತ್ವ ಬೋಧೆ
ಯುದರ ಫಲ ವಂಗೂಲಿ ಮಾಲನ ತೆರದಿ ಪಾವನರು ॥ ೫ ॥

ನಾಮು ನೆನೆವುದ ನೇಮು ವಿಡಿದಿಹ
ರಾಮಣೀಯಕ ಭಕ್ತನಾನಡೆ
ಕಾಮಧೇನುವ ಸಮತೆ ಸಂಪದ ಶರಣರಂ ಕಂಡು ||
ಕಾಮಹರ ಸಮತಿಳಿದು ಪದಗತಿ
ರಾಮಸೇವಕ ಹನುಮನಾ ಕ್ರಮು
ಸೋಮಧರ ಭೂಷಿತರ ಕಾಣುತ ನಿತ್ಯ ಸಂಚಾರ ॥ ೬ ॥

ಕಂಡ ಕಂಡವರಂತೆ ಕುಣಿಯದ
ಮುಂಡಧರ ಲಕ್ಷಿತನು ವನ್ಯರ
ಕಂಡು ಹೊಗಳಿಕೆರಹಿತ ನಿಷ್ಠುರ ತನ್ನನೀವನಿವ ||
ಉಂಡು ತಿರಗುವರವಗೆ ಕೀಟದು
ಜೊಂಡಗದ ಗುಣಗಳಿಗೆ ನಿಜಮನ
ಗಂಡ ಶರಣರ ಭಕ್ತಿ ಮೂಡಿಸುತಾತ ನಡೆದ ಶಿವ ॥ ೭ ॥

ಜಾಣನವ ಸರ್ವೆಡೆಗೆ ಸಲ್ಲುವ
ಸಾಣೆ ಹಿಡಿದಂತಿರುವ ಎನಿತನು
ಮಾನಿಸಿದ ಪಥಗಾಮಿಯಂಜದ ಭಕ್ತಿಲಂಪಟನು ||
ಮೇಣು ಜಂಗಮು ಭಕ್ತಿ ಭಾವಕೆ
ಹಾನಿ ಬರದಂತಿರದದಂಬಲಿ
ದಾನಿಗೇ ಸಂಚಾರದಲಿ ತಾ ಕಂಡು ಬರುತಿರ್ದ ॥ ೮ ॥

ಸಾಧು ಜಂಗಮ ಬೋಧೆ ಮಾಡಿಹ
ದಾತ ಭಾಗ್ಯದಿ ಬರುತ ನೋಡಿರೆ
ಆದ ಪರಿವರ್ತನೆಯ ಕಾಣುತೆ ಸಂತಸಂಗದಲಿ ॥
ವಾದಿಗಳು ಗುಣಭರಿತರಾಗುತ
ಸಾಧು ನಡೆಯಾಚಾರ ಬದ್ಧ ಪ್ರ
ಮೋದ ಚಿತ್ರಣಕಂಡು ಸುಖದಲಿ ಬರುತ ಕೆಳದಿಯೆಡೆ ॥ ೯ ॥

ಬಂದ ಶರಣಾನಂದ ಸೌಖ್ಯದಿ
ಹೊಂದಿದನುಭವಸುಖದಿ ಸ್ಮರಣೆಯ
ಮಂದದಿಂ ಬಂದಿರಲು ವನದೊಳು ವಿವಿಧ ಬೇಡಿಕೆಯ ॥
ತಂದೆಯೆಮ್ಮಯ ವಾಮ ಕ್ಷೇಮದು*
ಮುಂದೆ ಹಾನಿಯು ವೃದ್ಧಿಯೆಲ್ಲವ
ಬಂದ ಮಾನಪಮಾನ ಸರ್ವವು ನಿಮ್ಮದೆನ್ನವೊಲು ॥ ೧೦ ॥

ಸ್ವರ ತರಂಗ ಸುನಂದ ವನದಿಂ
ಶರಣನಾಲಿಸುತತ್ವ ಹೊಂದಿರೆ
ಧರಿಸಿಲಿಂಗಾರ್ಚನಕೆ ಕುಳಿತಿಹ ಝುರಿಯ ತಟದೊಳಗೆ ॥
ಸಿರಿ ವಸಂತ ಪ್ರಶಾಂತ ಚಂದ್ರಿಕೆ
ಚರಣ ಮುಟ್ಟಿರೆ ಮಿಂಚನ ಹುಳ ಪ್ರಭೆ
ಹರಿಸಿರಲು ಸುಮಸೊಂಪುಗಂಧವ ನೀಡಿರಲು ಮೊಗ್ಗ ॥ ೧೧ ॥

ಅಕ್ಷತೆಯ ರೂಪಾಗಿಯೊಪ್ಪಿರೆ
ಸಾಕ್ಷರಲ್ಲದ ಪಕ್ಷಿಗಳ ಸ್ವರ
ತಕ್ಷಣದಿ ಕ್ರಮಗೂಡಿ ಮಂಗಲಗೀತಪಾಡಿರಲು ॥
ಅಕ್ಷಯಾಂಬರ ವಸ್ತ್ರಕೇಶರಿ
ಲಕ್ಷಗಾವುದ ಗಗನಶೋಭಿರೆ
ಲಕ್ಷದರ್ಶನ ಪರಮಲಿಂಗಾನಂದ ಭೂಷಿತನು ॥ ೧೨ ॥

ಚದುರ ಚರ ಚಿನ್ನಾದ ಹರ್ಷದ
ಮಧು ಪ್ರಸಾದಿಕನಿಂತು ಸಂಪಿರೆ
ಸದನವನ ಪ್ರಭೆ ಮಂದವಾಗಿದೆ ಯೋಗಿ ಭೃಕುಟಿಯೊಳು ॥
ಸುಧೆ ಪ್ರಸಾದತೆ ಜ್ಞಾನ ಶಕ್ತಿಯ
ಮಧುರ ಜೊತೆರತನೀತ ನಿರ್ಮಲ
ಹೃದಯದಿಂದಿರೆ ಬ್ರಾಹ್ಮಿಫಳ ಸುಳಿವಿಡಿದೆಯಾಗಮಿಸಲ್ ॥ ೧೩ ॥

* ಬ. ವ. ೬೦.

ಹರಿಸಿ ವೃತ್ತಿಯ ಹೊರಗೆ ಜಂಗಮ
ನಿರತ ಸತ್ಕ್ರಿಯೆ ಮುಗಿಸಿ ಮುಂದಿನ
ಗುರಿಯು ಧಾರ್ಮಿಕ ಯಾತ್ರೆ ಪಾತ್ರದ ಪಾರಮಾರ್ಥಿಕನು ||
ಹೊರಟ ಮಾರ್ಗದಿ ಕಂಡ ಬಿಲ್ಲರ
ದುರುಳ ಕೃತಿ ಕಳೆಯುತ್ತ ಸಾತ್ವಿಕ
ಸಿರಿಯನರುಹುತ ದೇಶಿಕೋತ್ತಮ ಬಂದ ಬಿದನೂರ || ೧೪ ||

ವಿವಿಧ ವೃಕ್ಷದ ಸಾಲು ಋತುಗತಿ
ವಿವಿಧ ರುಚಿಸರಮೇಲು ಫಲಕುಲ
ವಿವಿಧ ಪರಿಮಿತಿನಾಲಿಫಲ ಜಲಹರ್ಷ ಮಾರ್ಗಿಡಿದು ||
ಅವಧಿಯಿಲ್ಲದ ಮಾರ್ಗದರ್ಶಕ
ಸವಿಯುವಾ ಸದ್ಬೋಧ ಮಾಡುತ
ತವೆ ಪ್ರಸಾದಿಕ ಬಂದ ಬೇಸರದೆ ಬಿದನೂರಿನೆಡೆ || ೧೫ ||

ಮಧುರ ಮನ ಘನಮೂರ್ತಿ ಮಂದಿರ
ವಿದುರ ನೀತಿಯ ಸ್ಫೂರ್ತಿ ಸುಂದರ
ಚದುರ ಚಂದ್ರಿಕೆ ಸಮತೆಕಂಗಳ ಹೃದಯ ಹೃದಯಾರ್ಥಿ ||
ಸದಯ ಶರಣರ ಸ್ತೋತ್ರ ಶೃಂಗಾ
ರದರ ಸರಸತೆಯ ಖಾತ್ರಿ ಖಿಂ, ಮತಿ
ಸುಧೆಯನಿಧಿ ಬಿದನೂರಿಗಾಗಮಿಸಿದನು ಸಾನಂದ || ೧೬ ||

ಅಬ್ಧಿಯಿಂ ಬಂದಂತೆಯಮೃತ
ಸ್ತಬ್ಧ ಶಶಿಧನ್ವಂತರಿಯ ಸಮ
ಶಬ್ದ ಶೇಖರನಂದು ಶ್ರುತಿಯರವಿಂದ ಸ್ಥಲಗಂಧ ||
ಶಬ್ದವಿದು ಸುತ್ತೆಲ್ಲ ಹರಡಿರ
ಲುಬ್ಧಿ ಕರುಣಾರಸವ ಕುಡಿಯುದ
ಕಬ್ಧಿ ಪೌರ್ಣಿಮೆ ಲಹರಿಯಂತೆಯಾ ಬಂದ ಕರುಣಿಸಲು || ೧೭ ||

ಪುರದಿ ಪದ ವಿಡುತಿರಲು ಪ್ರಥಮದಿ
ಪುರದ ಕಾವಲಗುಂಪು ದಾಟುತ
ನೆರೆದ ಹೂವಿನಸಂತೆ ಮಲ್ಲಿಗೆ ಸಂಪುಗಾರ್ತಿಯರ ||
ನೆರೆದ ಜನಶ್ರೀ ಹರ್ಷನೋಡುತ
ಪರಿಮಳದ ಕಸ್ತೂರಿ ಕೇಸಂ
ವರನ ಸೌರಭದರನ ದಾಟುತ ನಡೆದ ಗುರುವರನು || ೧೮ ||

ಮುಂದೆ ವಟದಶ್ವತ್ಥ ಪಂಕ್ತಿರೆ
ಹೊಂದಿಕೊಳಕೆರೆ ಬತ್ತ ಬೆಳೆ ನೆರೆ
ಬಂಧುರೋನ್ನತ ಕೋಟೆ ಮನಸೆರೆ ಹಿಡಿವ ಪುರದೊಳಗೆ ॥
ಗಂಧ ಮಂದಿರದೆದುರು ಬಿಲ್ವದು
ಹೊಂದಿರಲು ಕುಳಿತಿರಲು ನಗರದಿ
ಯಂದು ಸುದ್ಧಿದು ಹರಡುತರಮನೆ ಮುಟ್ಟಲಾಕ್ಷಣದಿ ॥ ೧೯ ॥

ಆಗಮನ ಸಮದರ್ಶಿಗಳ ಪದ
ಯೋಗಕದು ಬಸವಪ್ಪ ನಾಯಕ
ರಾಗದಿಂ ಬರುತಲ್ಲಿ ವೈಭವದಿಂದೆ ಕರೆದೊಯ್ದು ॥
ಯೋಗಿವರ್ಯನ ಪೂಜಿಸುತ ಸಮ
ಭಾಗಿ ದಂಪತಿ ಸಹಿತರಂ ಸುವಿ
ರಾಗಿ ಕಂಡು ವಿಲಾಸ ರಮ್ಯತೆ ರಹಿತಧರ್ಮಾದಿ ॥ ೨೦ ॥

ಏನು ಕಾಣದ ರೀತಿಯೊಳಹೊರ
ಗೇನಿರದನಿರ್ಮಲ- ಸು ಯೋಚಿಸು
ತಾನು ಸುಮ್ಮಿರಲಾಗ ಕೇಳಿದ ದೇವ ಮೌನೇಕೆ ॥
ಕಾಣುತಿಹುದೆಲ್ಲಿ ಸಿರಿ ಸರಬರ
ದೇನು ಸನ್ನಿಧಿ ಕರುಣ ದೃಷ್ಟಿಯೆ
ಕಾಣುತಿಹ ದೋಷಗಳನರುಹಿಸಿ ಕೃಪೆಯ ಮಾಡೆನಲು ॥ ೨೧ ॥

ಚರನು ಬೋಧಿಸತೊಡಗಿದಂ ನಿಜ
ಸಿರಿಯು ನೃಪನಡೆ ನುಡಿಯ ಸೂತ್ರದಿ
ಸಿರಿಯ ಸಾತ್ವಿಕ ಗುರಿಯದನುಭವ ಹಿರಿಮೆಸೂತ್ರಾಂಗ ॥
ವರನೆ ಕೇಳ್ಳೈ ಬಣ್ಣ ನೂಲವ
ಚರಮ ರಕ್ತವ ಮಾಂಸದೆಲವಂ
ತರಣಿ ಶಶಿಯಂ ರಾಹುಮರೆ ಮಾಡಿರುವ ತೆರಮಾಯೆ ॥ ೨೨ ॥

ದೊರೆತುದಾ ಅಧಿಕಾರ ಮೋಹವು
ಮರೆಯುಮಾಡಿರಲದನು ಹರಿಯುತ
ಧರಿಸಬೇಕಪ ರಾಜನೀತಿಯ ಧರ್ಮಜನಕನೊಲು ॥
ಪುರದ ಪ್ರಜೆಗಳ ರಕ್ತ ಸುಟ್ಟಿಹ
ಸಿರಿಯು ಭೂ ಕಂದಾಯ ಬಹುವಿಧ
ಭರಿಸಲಾ ಕ್ಷಯವೆಂದ ನಿಜದಿಂ ಯಾಜ್ಞವಲ್ಕ್ಯ ಮುನಿ* ॥ ೨೩ ॥

* ಯಜ್ಞ - ೧/೧೩/೩೪೦.

ಕೊಂಡೆಯರ ನುಡಿಸರಿಯೆನದು ಮನ
ಗಂಡ ನುಡಿ ಚಾಣಕ್ಯನೀತಿಯು
ಕಂಡುಕೊಳ್ಳಲುಬೇಕು ಬಿಜ್ಜಳನಂತೆ ಸಾಗದದು ||
ತಂಡದೊಳು ಮರುವೇಷ ಧರಿಸುತ
ಭಂಡತನ ತಾಹಿಡಿದು ಮುಂದಿನ
ದಂಡಹಾಕಲುಬೇಕು ಪ್ರಜೆಗಳ ದುಃಖಸುಖ ತಿಳಿದು || ೨೪ ||

ದಂಡವಿರದಿಹ ದೇಶ ಬಾಳದು
ದಂಡವಿರದಿಹ ಧರ್ಮ ಬಾಳದು
ದಂಡವಿರದಿರೆ ವಿದ್ಯ ಬರದು ಪ್ರಮಾಣ ಸಹಿತಾಗಿ ||
ದಂಡವಿರಬೇಕಪ್ಪ ತಪ್ಪಿರೆ
ಕಿಂಡಿಕೊರೆವುದು ಬಿಡದು ಕಾರಣ
ದಂಡ ಮಹತ್ತೇಜೋ* ನುಡಿಯ ಧರಿಸುತ್ತೆ ಸಾಗಪ್ಪ || ೨೫ ||

ಅದನೆ ಪರಿಹರಿಸುತಲಿ ನಡೆವುದು
ಮಧುರ ರಘುಕುಲ ತೇಜರಾಮನ
ಪದಗತಿಯ ನೀನರಿತು ಸಾಗಿರಲದುವೆ ಶ್ರೇಯಹುದು ||
ಅಧಮರಿಗೆ ಮರ್ಧಿಸದೆಯಿರಲಾ
ಸದರವಾಗದು ಆಡಳಿತವದು
ಹದವ ತಪ್ಪಿದ ಗಾಳಿಯಿಂ ಬೆಳೆಯೊಣಗಿಪೋಪಂತೆ || ೨೬ ||

ಕಿಚ್ಚಿಕುವಿಲಾಸಕಿಡದದೆ ಹಣ
ವೆಚ್ಚವದು ಸದ್ಧರ್ಮಕಿಡೆ ಬಲು
ಮೆಚ್ಚು ತಿಳಿ ಶರಣಾಳಿಗದು ಸಂತೋಷ ಭರಿಸುವದು ||
ಸ್ವಚ್ಛ ಬಸವನ ಮಂತ್ರಿಪದ ಕೃತಿ
ಹೆಚ್ಚು ಕಡಿಮಿರದಂಥ ಪಥಮತಿ
ಯಚ್ಚಳಿಯದಂತಿಹುದ ಭಕ್ತಿಯ ವ್ಯಸನಿ ನೀನಾಗು || ೨೭ ||

ಕೆಟ್ಟನಳ ಜೂಜಾಡಿ, ಕುಡಿತದಿ
ಕೆಟ್ಟ ಕೀಚಕ ವಾಲಿ ರಾವಣ,
ಕೆಟ್ಟರೈ ಬಹುನೃಪರು ವಿಷಯದಿ ನಿಂದೆಯಿಂ ದಕ್ಷ ||
ಕೆಟ್ಟರೈ ದುರ್ವಾಸ ಮುನಿಗಳ
ಸಿಟ್ಟುಗೊಳಿಸುತೆ ಹಾಸ್ಯದಾಫಲ
ಕೊಟ್ಟ ಶಾಪದಿ ನಾಶಯದು ಕುಲ ಶರಣರಡಿಯಾಗು || ೨೮ ||



* ಮನು–೭/ ೨೭–೨೮.

ಸಾಧಿಸುತ ಋತ ಬ್ರಹ್ಮಚರ್ಯಾದಿ
ಸಾಧಿಪುದು ಸಕಲೇಶ ಮಾದ್ರಸ
ನಾದರದ ಬಲ್ಲಾಳ ತ್ಯಾಗದನಿಷ್ಠೆ ನೆಲೆಗೊಳಿಸೈ ॥
ಕಾದು ಕುಳಿತಿರೆ ಧರ್ಮರಕ್ಷಣೆ
ಹಾದಿ ಬಲುಜಟಿಲುಂಟುವಿದರೊಳು
ಸಾಧಿಸುತ ಸಾಗುತಿರೆ ತಿಳಿ ಕೈಲಾಸ ಕರದೊಳಗೆ ॥ ೨೯ ॥

ಭೋಗದಿಂ ಸುಖವಿಲ್ಲ ಶಿವಪದ
ಯೋಗದಿಂ ಶುಭವೆಲ್ಲ ದುಷ್ಕೃತಿ
ರಾಗದಿಂ ದುಷ್ಫಲವು ಕಾರಣ ಪರಮಗತಿಯಿರಲಿ ॥
ಸೋಗು ಭಾವನೆ ರಹಿತ ಧರ್ಮ
ಕ್ಕಾಗಿ ಬಾಳಿರೆ ಪುರುಷನ; ಪಸ್ರುತಿ
ಯಾಗಿರಲು ಸತ್ತಂತೆ ಪಥಯೋಚಿಸುತೆ ಸಾಗೆಂದ ॥ ೩೦ ॥

ರಾಜ ಧರ್ಮದ ಜೊತೆಗೆ ಪರಶಿವ
ತೇಜ ಧರ್ಮದ ರಕ್ಷಣೆ ಸಹ ವಿ
ರಾಜಿಸಲು ಬೇಕಯ್ಯ ಹಿಂದಿನ ಶೀಲನೃಪರಂತೆ ॥
ಭೋಜರಾಜನ ಸಮತೆ ಪಂಡಿತ
ರಾಜ ಋಷಿಗೆ ಮಹರ್ಷಿ ಹೃದಯದ
ತೇಜರಿಗೆಯಾಶ್ರಯವ ನೀಡೈ ನೋಡು ಇತಿಹಾಸ ॥ ೩೧ ॥

ಮಾನ್ಯ ಬಸವನ ನುಡಿಯಸುರಿಸೈ
*ಹೊನ್ನಿನೊಳಗೊಂದೊರೆಯ-ಬೆಳೆಯಂ
ಚನ್ನ ಶರಣರಿಗಲ್ಲದೇ ಮತ್ತೊಂದಕದು ಅರಿಯೆ ॥
*ಎನ್ನೊಡಲು-ಎನ್ನೊಡವೆ ಎನ್ನದ
ಎನ್ನಸತಿ ಮಕ್ಕಳಿಗೆನೆನು-ನುಡಿ
ಮನ್ನಿಸುತ ಪುರದಣ್ಣ ನೀನಾಗಯ್ಯ ಸಾಗಯ್ಯ ॥ ೩೨ ॥

ಆಡಳಿತ ನಡೆಸುವದು ಬಯಲೊಳು
ಆಡುಕಾಯ್ದಂತಲ್ಲ ರೋಗಿಯ
ನೋಡುವಂತಿರಬೇಕು ಶಿಶುವಿನ ನೇಹದಂತಿರಲಿ ॥
ನಾಡು ನಾಡಿನ ಶರಣ ಗುರುಗಳು
ನಾಡೆಯೊಪ್ಪುವ ಹಾಗೆ ಪದ್ಧತಿ
ಯಾಡಳಿತದೊಳು ಸಹನಶೀಲತೆ ಶೋಭೆಗೊಂಡಿರಲಿ ॥ ೩೩ ॥

* * ಬ. ವ. ೪೩೩, ೭೦೯.

ಮಾಡಲಾಡಳಿತದೊಳಪಯಶವು
ನೋಡಲಬ್ಧಿಯೆ ಮಥನದೊಳು ಬಹು
ಜೋಡ ಹೊರಟಿರುವಂತೆ ವಿಷವದು ಬಳಿಕ ಸುಧಾ ಪ್ರಕಟ ||
ಕೂಡಿ ಬರುತಿಹುದಯ್ಯ ಸುಖ ದುಃಖ
ಗೂಡಿರಲು ಸ್ವಾಭಾವಿಕತೆ ನಡೆ
ಗೂಡಿ ನೀನಿರಲಾಗ ಬಾಧೆಯು ಯಾಕೆ ನೋಡಯ್ಯ || ೩೪ ||

ವಿಷವು ತಾನುಂಡು ಜಗಕೆಲ್ಲಂ
ಹಸಿತದಿಂದಮೃತವನುಣಿಸಿದ
ಹೊಸತಿದಲ್ವೇ ಯಾಡಳಿತದಿ ಪ್ರಸಂಗ ಬರುತಿಹುದು ||
ಹಸಿದ ಕಳವಳ ಹೃದಯಕದು ತಂ
ಪುಸಿರು ಲೇಸ್ಯೆ ಬಯಕೆ ಭಾಮಿನಿ
ಬಸಿರು ಲಕ್ಷಿಡುವಂತೆ ಸೂಕ್ಷ್ಮಮತಿ ಪಿಡಿದುಸಾಗಯ್ಯಾ || ೩೫ ||

ಆರು ಶ್ರೇಷ್ಠರು ದುಷ್ಟರೆಂಬುದು
ಯಾರಿ ನುಡಿವುದು ಕಠಿಣ ನಿನ್ನುಗ್ಗಣ
ಸಾರುವವರೇ ಪಯದಿಲವಣಂ ಬೆರೆಸದಿಹರಿಹರೇ ||
ಸಾರಸುಧೆ ವಿಷಗೊಡಲು ಬಂದಿರೆ*
ಚಾರುಮತಿಯಿಂದಾತ್ಮರಕ್ಷಣೆ
ಗಾರ ಹಂಗೇಕಯ್ಯ ಬೆಂಕಿಯು ಮನೆಯ ಸುಡದಿಹದೆ || ೩೬ ||

ಸಂತಸನುಭವ ಮಂಟಪದಿ ಭವಿ
ಭ್ರಾಂತಿಯಿಂ ಫಲ ಮರಣದಂಡನ
ಕ್ರಾಂತಿ ಕಿಡಿಕಾರುದಕೆ ಕಾರಣವಾಯ್ತು ಕಲ್ಯಾಣ ||
ಭ್ರಾಂತನಾಗದ ಸದ್ವಿಚಾರದ
ಕ್ರಾಂತಿ ಹರಡಿರೆ ನಿತ್ಯನಾಡೊಳು
ಶಾಂತಿಯಿಂ ನಿಜದಾತ್ಮ ಶಕ್ತಿ ವಿಕಾಸಗೊಳ್ಳುವುದು || ೩೭ ||

ತಿರುಕ ಕಂಡಿಹ ಕನಸಿನಂತಿಹ
ಎರಕ ಹೊಯ್ಯಲು ಬಾರದಯ್ಯಾ
ಹಿರಿದೆನುವ ನಿಜದೇಕಪತ್ನಿವ್ರತಸ್ಥ ಶುಭವಯ್ಯಾ ||
ಮುರಳಿ ಭಾಮೆಯ ಶಾಂತಿಪಡಿಸಲು
ಸರಳ ತರಬೇಕಾಯ್ತು ಪುಷ್ಪವ
ಸರಿ ಪರಿಸ್ಥಿತಿ ತಿಳಿದು ಸತ್ಕ್ರಿಯೆ ಭರಿತನಾಗಯ್ಯಾ || ೩೮ ||

* ಯಜ್ಞ–೧/೩೪೫.

ಸೇದು ಹಗ್ಗವ ಬಿಟ್ಟು ಜಲಘಟ
ಸೇದಲಾರನು ಕಿಂತು ನೈತಿಕ
ಹಾದಿಯಿಂ ತಾನಳಿದು ಸಾಗಿರೆ ಗಾದಿತಪ್ಪುವದು ||
ವೇದ ಗುರುಗಳ ವಾಣಿ ಕ್ರೀಯುತೆ
ವೀಥಿ ಪಿಡಿದವಗೆಲ್ಲ ಕಂಟಕ
ಹಾದಿ ದಾಟುವನವನು ಪ್ರತಿ ಕೃತಿಗೆಲ್ಲ ನಿಷ್ಫಲವು || ೩೯ ||

ಸತ್ವ ಸಂಪನ್ನತೆ ಕುಲೀನತೆ
ನಿತ್ಯ ವಾಕ್ಶುಚಿ ಧಾರ್ಮಿಕೋತ್ತಮ
ಮತ್ತೆ ಪ್ರಾಜ್ಞರಹಸ್ಯ ಲಕ್ಷಿತ ದಂಡನೀತಿಜ್ಞ ||
ತತ್ವಶಾಸ್ತ್ರಾಚಾರ್ಯ ಬದ್ಧನು
ಸತ್ಯ ಮತಿಭೂಪಾಲ-ಲಕ್ಷಣ
ಯುಕ್ತನಾಗಿರೆ ಶೋಭೆಯೆಂಬುವ ಸೂತ್ರನೆನಪಿರಲಿ* || ೪೦ ||

ಶಾಲೆ ಕಲಿಯದೆ ವಾದಬಾರ್ದಪ
ಬೇಲಿಹಚ್ಚದೆ ಬಿತ್ತಬಾರ್ದಪ
ಮೇಲೆ ಕೋಟೆಯ ಗೋಡೆ ಕಟ್ಟಳೆಯಾಳಬಾರ್ದಪ್ಪ ||
ಕಾಲಗತಿ ತಕ್ಕಂತೆಯನುಭವ
ಹಾಲು ಹರಡಿರಲೇನು ಶರಣರ
ಮಾಲೆ ಧರಿಸೈಯಾಳು ತಾನಿರೆಲರಸು ತಾನಪ್ಪ || ೪೧ ||

ಪುರ ಪ್ರಜೆಯ ಮನ ಕಟ್ಟಿಕೊಳ್ಳದೆ
ಯರಮನೆಯ ತಾ ಕಟ್ಟಿಡದು ಮತಿ
ಹರಿದು ಹೋದರೆ ಹೊಲಿಯಬಹುದ್ಯೆ ಹೃದಯಬಿರಿದಾಗ ||
ಕರೆದು ಬೆಸೆಯುವರಾರು ಕಿಂತುರೆ
ಸರಿಯಕಾಣದು ಕಠಿಣ ಮೊದಲಿನ
ಹರುಷಕದು ತಾ ತನ್ನನರ್ಪಿಸಿಕೊಳ್ಳಬೇಕಯ್ಯ || ೪೨ ||

ಶಾಂತಮುಖಿ ಬಸವಪ್ಪ ನಾಯಕ
ಗಂತು ಬೋಧಿಸಿ ಹೊರಡಲಾಕ್ಷಣ
ಶಾಂತ ಚರಣದಿ ಮುತ್ತು ರತ್ನಾದಿಗಳನರ್ಪಿಸುತ ||
ಶಾಂತರಸ ಕಾಣಿಕೆಯ ಗ್ರಹಿಸೆನೆ
ಶಾಂತಮತಿ ಶ್ರೀಮಂತನಾಲಿಸು
ಕಿಂತು ನುಡಿದನು ನಗುತ-ವೀರಮ್ಮಾಜಿ ಸಹಿತಂಗೆ || ೪೩ ||

* ಯಾಜ್ಞ ೧/೩೦೯, ೩೫೫, ೩೫೬.

ನೀಡು ಭಿಕ್ಷೆಯನೀಡುದಾದರೆ
ನೀಡು ದುಶ್ಚಟಗಳನು ಗರ್ವವ
ನೀಡು ಜೋಳಿಗೆಯೊಳಗೆ ಮನದಿಂ ನಿಜದಿ ಹಾಕೆಂದ ||
ಬೇಡುದೆನ್ನಯ ಭಾವವಿಲ್ಲವು
ನೀಡಿರುವ ತತ್ವಾಂಗ ಹೃದಯದಿ
ರೂಢಿಗೊಳಿಸುತ್ತಾಡಿಯಾಡಿರಿ ಸಾಕುಸಾಕೆಂದ || ೪೪ ||

ರಾಜನೆಂತೋ ಅಂತು ಪ್ರಜೆಗಳು
ಬೀಜವೆಂತೋ ಅಂತು ಫಲಗಳು
ನೈಜ ಹೃದಯದ ತೇಜವೆಂತೋ ಅಂತು ಹೊರತೇಜ ||
ನೈಜ ಗರ್ಭಿಣಿಯಾದ ಮಾತೆಯು
ಓಜ ಹೊರಕಳೆ ಮುಖದಿತೋರ್ಪುದು
ನೈಜ ನೀತಿಯ ಹೃದಯವಿರಲೆನ್ನುತಲಿ ಹೊರಟಾಗ || ೪೫ ||

ದಂಪತಿಗಳಿಂ ಚರಣದರ್ಶನ
ದಿಂಪುಗೊಳ್ಳುತೆ ಹೃದಯಮೆದುಳದಿ
ಸೊಂಪುಬೋಧದ ಕಂಪು ಸ್ಮರಿಸುತ ನಮಿಸಿ ಸಾಷ್ಟಾಂಗ ||
ಗುಂಪು ಗರ್ಭಿತರೆಲ್ಲ ಶಿಶುಕುಲ
ದಿಂಪು ಸುಸ್ವರಸಹಿತ ಸೇವಕ
ರಿಂಪು ಸೌಖ್ಯದಿ ಪುರದ ಪ್ರಜೆ ಸಹಿತಾಗಿ ಮನ್ನಿಸಲು || ೪೬ ||

ಅಪ್ಪ ಚನ್ನನು ಮುಂದೆಸಾಗಿದ
ನಪ್ಪ ಜಂಗಮರಾಜ ತೇಜನು
ಒಪ್ಪು ನೃಪ ವೀರಮ್ಮ ಬಳಗದು ನೋಡುತಿರಲಾಗ ||
ಒಪ್ಪು ಗುರುಮರೆಯಾಗುತನಕದು
ತಪ್ಪದಿಹ ಪಾವುಗೆಯ ರವ ಮನ
ಕೊಪ್ಪಲೀನತೆಯಾಗ ದೀಪೋಜ್ವಲನ ಫಳಯೋಗ || ೪೭ ||

ಹೊರಟ ದೃಢ ಶಿವಯೋಗಿ ಸಂತಸ
ಚಿರದ ಜೋಳಿಗೆ ಭರಿತ ಭಕ್ತರ
ಕರೆತ ಹೃದಯುವನರಿತದೀಚ್ಛೆಯದತ್ತ ತಾನತ್ತ ||
ಶರಣ ಹೊಕ್ಕಿರುವಂಥವರ ಅಘ
ದುರಿತನೆಲ್ಲವ ಹುರಿದ ಚಿನ್ಮಯ
ಚರಿತನಾಯಕ ನಿರಘ ನಿತ್ಯನು ಕಾಯಕನವರತ || ೪೮ ||

ಸತ್ಯ ಶಿವ ಸುಂದರ ಸಮನ್ವಯು
ನಿತ್ಯ ಸಹಜಾನಂದ ಸುಖಮಯು
ನೆತ್ತ ಗತಿಸುತನತ್ತ ಬಲ್ಲಿದ ಬಡವರೆಂಬೆಂಬ ||
ಸತ್ಯದಿಂ ಭೇದವನು ಮಾಡದೆ
ಹತ್ತಿರಕೆ ತಾ ಕರೆದು ತಿದ್ದುತ
ಸ್ತುತ್ಯಕಾರಣ ಪುರುಷನೇಕತ್ವದಲಿ ಏಕತ್ವ || ೮೯ ||

ಸಾಧಿಸುತ ಸಾಗಿದನುಯನುದಿನ
ಬೋಧಿಸುತ ಪರತತ್ವಸೂಚಕ
ಹಾದಿಯಿದು ನಿಜವೀರಶೈವರ ಧರ್ಮವಿಹುದೆಂದು ||
ವೇದದಾಜ್ಞೆಯು ತತ್ವ ನಿಷ್ಠತೆ
ಯಾದರಿಸುವವರಿಂಗೆ ತೋರ್ಪುದು
ಕೌದಿಯೊಳಗಿನ ಕಾಮಿಗಳಿಗಿದು ಬರದು ತಿಳಿಮೆಗದು || ೫೦ ||

ಶುದ್ಧವಹುದಂಕಲಗಿಯಡವೀ
ಸಿದ್ಧ ಚರಣಾಶ್ರಯದಿ ಸ್ಥಾಪಿಸ
ಲೆದ್ದ ಪುರ ಮರೆಗುದ್ದಿ ಮಠವಿದುವಡವಿಸಿದ್ಧೇಶ ||
ಬದ್ಧವಿದು ಗುರುವಂಶದೊಳು ಕ್ರಮ
ಬದ್ಧ ಗುರು ಗುರುಪಾದ ಕೃಪೆಯಿಂ
ದೆದ್ದ ಗುರು ನಿರುಪಾಧಿ ಕೃತಿಯೋಳ್ ಹನ್ನೆರಡನೆ ಸ್ಥಲ || ೫೧ ||

ಅಂತೂ ಸ್ಥಲ ೧೨ಕ್ಕಂ, ಪದ ೫೧ಕ್ಕಂ, ಒಟ್ಟು ಪದ ೬೯೯ ಕ್ಕಂ ಮಂಗಳ.

ಓಂ

# ಹದಿಮೂರನೆಯ ಸ್ಥಲ

ಸೂಚನೆ-

ಬೋಧಕಾಯಕದಿರವ ತಿಳಿಸಿ ಪ್ರ
ಸಾದದೇವಗೆ ಚಿನ್ಮಯದ ಕೃಪೆ
ಬೋಧಿಸಿ ನಿರಾಭಾರಿ ಜಂಗಮನೆಂದು ಘೋಷಿಸಿದ ॥

ಹಿಂದೆ ಮುಂದೆಯು ಜನರವಾಧ್ಯದಿ
ಬಂದು ಬೈಯ್ಯುತ ನಿತ್ಯಕಾಡುತ
ಹೊಂದಿ ಬಾಧಿಸಿ ನಿಂದೆ ಮಾಡುತ ಕೊಂದು ಬಿಡುವವನೆ ॥
ನಂದ ಪೂಜಾ ಫಲವು ಸತ್ಯದಿ
ಯಂದವಗೆ ಸುಖಭೋಗ ನಿಜ ಸಿಗ
ಲೆಂದ* ಮುಪ್ಪಿನ ಷಡಕ್ಷರಿಯ ಸ್ಥಿತಿ ಸ್ಮರಿಸಿ ಸಾಗುವೆನು ॥ ೧ ॥

ಸಮಯ ಸದ್ವಿನಿಯೋಗಗೊಳಿಸುತ
ವಿಮಲ ವೈಭವವಾಣಿ ವರನಿಧಿ
ಅಮಲ ಭಕ್ತರ ಹೃದಯ ಕುದಿಯ ಪ್ರಶಾಂತಪಡಿಸುತಲಿ ॥
ಅಮಿತವಹ ಕರ್ತೃತ್ವ ಶಕ್ತಿಯ
ಸುಮತರೊಪ್ಪುವ ಕುರುಹುಕರಣದ
ಕಮಲ ಲಕ್ಷಿತರಾದರೆಷ್ಟೋ ಶರಣ ಜಂಗಮರು ॥ ೨ ॥

ಚನ್ನವೀರನ ಬೋಧ ಚದುರತೆ
ಚನ್ನವೀರನ ಸಾರ್ಥ ಸಫಲತೆ
ಚನ್ನವೀರನ ನೀತಿ ನೈಜತೆ ನಿಲವು ನಿಶ್ಚಲತೆ ॥
ಚನ್ನವೀರನ ಹಾದಿ ಹರ್ಷತೆ
ಚನ್ನವೀರನ ಹಂಸ ಸ್ಥಿತಿಜತೆ
ಚನ್ನವೀರನ ತಾನ ತೀರ್ಥತೆ ಪಾರಮಾರ್ಥಿಕತೆ ॥ ೩ ॥

* ಶ. ಚರಿತಾಮೃತ-p ೫೮೭.

ವೀರಶೈವ ಸಮಾಜದೇಳ್ಗಿಗೆ
ವೀರಶೈವಾಚಾರವಿದ್ಯೆ ಪ್ರ
ಸಾರ ಕೈಕೊಂಡಿರುವ ಯೋಗಿಯ ನಿತ್ಯ ಸಂಚಾರ ||
ಸಾರ ಗರ್ಭಿತವಿರಲು ಕ್ರಮದನು
ಸಾಗ ಬರುತಿರುವಾಗ್ಗೆ ಕರೆಯುತ
ಪಾರ ಭಕ್ತರನಂದು ಗುರುಕುಲಕಂದು ಸುವಿಚಾರ || ೪ ||

ನಿತ್ಯ ಹೊಸಪಥಪಥಿಕ ಪಂಥದ
ಸತ್ಯ ಶ್ರೀಸ್ವರ ಕಥನದಿಂ ಮಹ
ಮುತ್ತು ಜೊತೆಗತಿರಥಿಕ ಮಧುರಾಗಂತುಕ ಹೃದಯಕೆ ||
ಸ್ತುತ್ಯ ಕಲ್ಪನೆ ಮೀರಿ ಮಂಥನ
ಭೃತ್ಯ ಭಾಷೆಯೆ ಬೋಧರಂಗದ
ಚಿತ್ಸಮತ ಚಿಲ್ಲಿಂಗ ಲಕ್ಷಿತ ಬಂದ ಗುರುಕುಲಕೆ || ೫ ||

ಯಾಕೆ ಕರೆದಿಹರೆಂದು ಯೋಚಿಸು
ತಾಕರದ ಬಳಗೆಲ್ಲ ಹಿರಿಯರು
ತಾಕಲಾಟದ ಜೀವಿಗಳು ಸಹಿತಾಗಿ ಕೂಡಿರಲು ||
ಏಕಮೂರ್ತಿಯು ಕಂಡು ನುಡಿ ಮಿಡಿ
ಪಾಕ ಸರ್ಪಗೆ ಹರಡತೊಡಗಿದ
ಸಾಕೆನದ ಜೀವನದ ಕಾಯಕಯೋಗ ತತ್ವಾಂಗ || ೬ ||

ಕೇಳಿ ಕಾಯಕ ಮೊದಲಿನಿಂದದು
ಮೇಳವಿಸಿಕೊಂಡಿರುತಿಹುದ ಜೊತೆ
ಕಾಲಕಾಲಕೆ ವಿವಿಧಿ ದಿಶೆಯೊಳು ವ್ಯಾಪಕಾಗಿಹುದು ||
ಮಾಲೆ ರುದ್ರಾಧ್ಯಾಯದೊಳು ನುಡಿ
ಮೇಲು ಕಾಯಕವಂತರಾ ಸ್ವರ
ಸಾಲಿದು ಕುಲಾಲೇಭ್ಯಃ ಕರ್ಮರೇಭ್ಯಃ ಯಿಂತೆಂಬ || ೭ ||

ಇರಲಿದನು ಮೆಚ್ಚುತಲಿ ನಡೆಯುವ
ಗುರಿ ಮೊದಲು ಮಾರ್ಜಾಲ ನ್ಯಾಯದ
ಪರಿಯುದಿರೆ ಸದ್ಭಕ್ತ ಭಾವನೆ ಶ್ರೇಷ್ಠಗೊಳ್ಳುವದು ||
ಚಿರದ ಲಕ್ಷಿತನಾಗಿ ಕಾಯಕ
ನಿರತನಿರೆ ಕೈಲಾಸ ಸುಗಮತೆ
ಶರಣ ಪ್ರಮಥಾದಿಗಳ ಘೋಷಣೆ ಮರೆಯದಿರಬೇಕು || ೮ ||

ತನುಮನವ ಬಳಲದಿಹ ಕಾಯಕ
ಕ್ಷಣಿಕವಿರಲದು ಸೂತಕವೇ ತಿಳಿ
ರನಿತು ಸಂಶಯವಿರದ ರೀತಿಯ ಶ್ರೇಷ್ಠವಿರಲಯ್ಯ ||
ತನು ಸವಿಸಿ ಕಿನ್ನರಿಯ ಬ್ರಹ್ಮಯ
ದಿನದಿನದಿ ಸಾಗಿರಲು ಕಿಂತುರೆ
ಮನೆಯ ಮಿತಿ ಭಾಂಡವಳದಿ ಕುಣಿದ–ಗುಂಡಯ್ಯ || ೯ ||

ಅಂಬಿಗರ ಚೌಡಯ್ಯ ನಡೆದಿರೆ
ತುಂಬ ಸಾಮಗ್ರಿಯೊಳು ಸಾಗಿಹ
ಶಂಭುಮತಿ ಮೌಕ್ತಿಕದ ಸಂಗಯ ರತ್ನರಾಚಯ್ಯ ||
ತುಂಬು ಭಾವನೆಯಿಂದೆ ನಿತ್ಯದ
ಹಂಬಲದ ಸತ್ಕಾಯಕವೆ ನಿಜ
ವೆಂಬುದನು ತಿಳಿರಯ್ಯಾ ಸರ್ವ್ವೋನ್ಮೋಕ್ಷದಾಯಕವು || ೧೦ ||

ಶರಣ ಮಾರ್ಗವ ಪಿಡಿದು ಕರ್ಮವ
ಹರಿಸಿಕೊಳ್ಳದೆ ಸತ್ಯ ಸತ್ಪಥ
ನಿರುತ ಜಂಗಮಲಿಂಗ ದಾಸೋಹಾದಿ ಮಾಟದಲಿ ||
ಮರುಚಿಗುರೊಡೆಯದಂತಿಹುದ ಸ
ದ್ಗುರಿಯ ನಿಟ್ಟಿರಬೇಕು ನಿತ್ಯದ
ಪರಿಯಥಾರ್ಥತೆ ಸತ್ಕ್ರಿಯಾ ಸುಜ್ಞಾನ ಭರಿತಾಗಿ || ೧೧ ||

ನಿರತನಾದರೆ ಗುರುದರುಶನಂ*
ಮರೆಯಬೇಕೆಂಬುದನು ದೃಢತರ
ಗುರಿಯ ಗಂಭೀರಾಶೆಯಲಿ ದುರಾಶೆ ರಹಿತಾಗಿ ||
ಹರುಷದಿ ನಿರಾಭಾರಿ ಕ್ರಿಗಳು
ಕರುಣಿಸುವದಿದೆ ನಿರಘಶ್ರುತಿಮತಿ
ನರಿತ ಈಶಾವಾಶ್ಯನುಡಿ ಪಿಡಿ ಮಾಡು–ಕರ್ಮಾಣಿ† || ೧೨ ||

ಅರಿಯುವದು ತಾವಿಲ್ಲಿ ತ್ರಯವಿಧಿ
ಪರಿಯ ಶಾರೀರತೆಯ ವಾಚಿಕ
ವರಿಯೆ ಮಾನಸಿಕೆಂಬುವಾ ಕಾಯಕದ ಭೇದಗಳು ||
ಧರಿಸುತದರೊಳು ಯಾವುದಾದರು
ಶರಣ ಕೇತಯ್ಯನ ಸಮತೆ ನಿಜ
ಚರಿತರಾಗಿರಿ ಪಾಠಕಲಿಸಿರಿ ಬರೆದು ಪ್ರಕಟಿಸಿರಿ || ೧೩ ||

* ವಿ.ಶ. ... † ಈಶಾವಾಸ್ಯ ...

ನುಡಿಯುತಿಹ ವೇದಾಂತಿಯೊಳಗೀ
ಬೆಡಗು ಸೂಕ್ಷ್ಮ ದ್ರಿಧಿ ತೋರುತಿಹುದೈ
ಬಿಡದಿದಾರಿಗು ಕರ್ಮಕಾಯುವ ಧರಿಸಿರುವ ತನಕ ||
ಪಿಡಿದವನೆ ಸವಿಯುವನು ಸವಿಶ್ರೀ
ಗಿಡ ಕುಡಿಯದಾ ಪಕ್ವರಸಗಳ
ಕುಡಿಯುವದು ಜಲ ನೋಡಿ ತೆರದಿಂ ಕೃತಿಯು ದಾಸೋಹ || ೧೪ ||

ನಿಜದುಚಿತ ಮನಶುದ್ಧ ಕಾಯಕ
ನಿಜದಿರಲು ಪರಮಸುಖದಾಯಕ
ವಿಜಯ ಸೌಖ್ಯವು ಸಿದ್ಧಿದಾಯಕ ತಾನೆ ಫಲಿಸುವದು ||
ಸುಜನ ಶರಣರ ಮಾನ ಮನಘನ
ಸುಜನಕೊಪ್ಪುವ ಸೋಂಕು* ಚಿದ್ಘನ
ಸಜನಿಗದು ಸಂತೃಪ್ತಿ ಪರ್ವದು ಗರ್ವರಹಿತವದು || ೧೫ ||

ಇರುವೆಯ ತೊಗಲುಬಾವಲಿ ಕವಿಗ
ಳಿರವ ಫಲ ಪಕ್ವತೆಯು ತೆರನಿಂ
ಹೊರಟು ರುಚಿಸುವ ಸ್ಥಿತಿಯದಂತೆಯೆ ಭಕ್ತನಿರಬೇಕು ||
ಮರುಳರಾ ನಿಂದೆಗದು ಕುಗ್ಗದೆ
ಕರಿಯಸವು ಗಂಭೀರದಾ ತೆರ
ನಿರತನಿರೆ ನಿಜತೃಪ್ತಿ ಇರುವಷ್ಟರೊಳು ಸಂತೃಪ್ತಿ || ೧೬ ||

ಲೇಸೆನಿಪ ಘನ ಶರಣಮಾರ್ಗದಿ
ಲೇಸೆನಿಸಿಕೊಳ್ಳುತ್ತ ದಿನ ಪರಿ
ಸೋಸಿ ನಡೆದಿರೆ ಸಾಕು ಜೀವನ ಸಾರ್ಥಕಾಗುವದು ||
†ಕೋಶಪತಿ§ತಾನಾದರೇನದು
ಲೇಸು ಜಂಗಮನಿಂಗೆ ಸವೆಸುವ
ಸ್ವಾಸವಿರೆ ಬಹುಶುಭವು ಕನ್ನಡಿ ನೋಡುದನ್ನಳಿದು || ೧೭ ||

ನಾನು ಆರಂಭವನೆ ಮಾಡುವೆ
ಮಾನ ಗುರುಲಿಂಗಾರ್ಚನೆಯುಗೆಂ
ದಾನು ದಾಸೋಹವನು ಮಾಡುವೆ ಜಂಗಮನಿಗೆಂದೇ ||
ಏನು ಬೇಡಿದಡೀವೆಯೆಂಬುವ
ಮೌನವಿಲ್ಲದವಾಣಿ ಹೃದಯದ
ಕಾಣೆಯೆನಿತಿರದಂಥ ತಕ್ಕಡಿ ತೂಕ ನಿಮಗಿರಲಿ* || ೧೮ ||

* ಬ, ವ.–೩೨೫, ೩೨೮, † ಬ. ವ. ೧೮೭, § ಬ. ವ. ೭೦೭, ೭೦೮.

ಅರಿವು ಆಚಾರಗಳ ಸಂಗಮ
ಸರಸ ಸಹಜಾಚರಣೆ ನೋಡಾ
ಬರಿಯ ಜ್ಞಾನದು ಹೆಳವ ಕೇವಲ ಕ್ರಿಯೆಯು ಕುರುಡವುದು ॥
ನಿರತವಹ ಸುಜ್ಞಾನ ಶ್ರೀ ಬಲ
ವರಿತು ಸತ್ಕಾಯಕದಿ ಸದ್ಗುರಿ
ಸುರಸಗೊಳ್ಳದೆ ಷಟ್‌ಸ್ಥಲಾಚರಣೆಯಿದು* ತಿಳಿರೆಂದಾ ॥ ೧೯ ॥

ಇಂತು ಬೋಧನ ವಿಡಿದ ಕಾಯಕ
ಶಾಂತ ಮೂರ್ತಿ ನಿರಂಜನರ ವಿ
ಶ್ರಾಂತಿರದೆ ತೊಡಗಿರಲು ಹಿರಿಕಿರಿದೆನದೆ ಸಾಗಿರಲು ॥
ಕಾಂತನಿಂ ನೂರೊಂದು ಸ್ಥಲಗಳ
ತುಂತುರಾಮೃತ ನಿತ್ಯ ಸುರಿಯಲ್
ಶಾಂತ ಮತಿಯ ಪ್ರಸಾದದೇವರ ಸಹಿತ ಶರಣಾಳಿ ॥ ೨೦ ॥

ಜೀವ ಭಾವನೆ ಹೋಗಿ ಪ್ರಕೃತಿಯ
ಭಾವ ತರಲನುವಾಗಿ ಸಂಸ್ಕೃತಿ
ಕೋವಿದರು ಪೂರ್ಣಾಗಿ ಕಂಗಳ ತೇಜ ತಾವಾಗಿ ॥
ಪಾವನಾತ್ಮಕರಾಗಿ ದೇವರ
ದೇವ ಜಂಗಮರಾಗಿ ನೈಜತೆ
ಕಾವಿ ಭೂಷಿತನಡಿಯೆ ಸುಖಿಸಿರೆ ಮುಗ್ಧ ಕೆಲ ಭಕುತರ್ ॥ ೨೧ ॥

ಸರಳ ಸಹಜತೆಯಿಂದೆ ವಿನಯದ
ಸುರುಳಿ ಕಂಪನವಿಡಿದು ಹಂಪೆಯ
ಪರಮ ವಿರುಪಾಕ್ಷೇಶ್ವರನ ಯಾತ್ರಾಮಹೋತ್ಸವಕೆ ॥
ಹೊರಡುವಾಶೆಯ ಸನ್ನಿಧಿಗೆ ನುಡಿ
ಯಿರಿಸಲಾ ಸುಜ್ಞಾನಿಯಾಲಿಸು
ತರಿತವರಿಗಪ್ಪಣೆಯ ಮಾಡುವರಿಂತು-ಏನ್ರಪಾ ॥ ೨೨ ॥

ಜಾತ್ರೆಗದು ನಮ್ಮನ್ನು ಬಿಟ್ಟೇ
ಯಾತ್ರೆ ಮಾಡುವಿರೇನುಯನಲಾ
ಪಾತ್ರರೆಲ್ಲರಿಗಿಡುವೆ ಚಕಿತವನುಂಟು ಮಾಡಿತೆನೆ ॥
ಶ್ರೋತ್ರಿಯರು ಸ್ಥಾವರದ ಲಿಂಗವ
ಖಾತ್ರಿ ಮನ್ನಿಸದವರು ಯೀದಿನ
ಸೂತ್ರ ನುಡಿಯೋಚನೆಯೊಳಗಿರಲು ಆಗ ಮಂಪರಿದು ॥ ೨೩ ॥

* ವ. ಸಂಪಥ-೩೩೪, ೩೩೫.

ನಮ್ಮ ಜಾತ್ರೆ ಸಮೀಪಿಸಿದೆ ಮ
ತ್ತೊಮ್ಮೆ ಯೋಚಿಸುದೇಕೆ ಕಾರಣ
ನಿಮ್ಮೊಡನೆ ದಯಮಾಡಿಸುತ್ತೇವೆಂದು ನುಡಿದಿರಲು ||
ನಮ್ಮವರ ನುಡಿಗಳನು ಆಲಿಸಿ
ಸುಮ್ಮನಾದರು ನುಡಿದ ನುಡಿಯಲಿ
ಗುಮ್ಮಯೋಚಿಸುತಿಹರು ಜಂಗಮಗರ್ಭನುಡಿ ಪ್ರಶ್ನೆ || ೨೪ ||

ಮನಕೆ ನಿಲುಕದ ಮಾತು ಮಾಧುರಿ
ಕ್ಷಣದಿ ತಾನೆಂತರಿವು ಸಾಧ್ಯದು
ಜನರ ಪರಿಯಿಂತಾಯ್ತು ಸುಮ್ಮಿರಲಿವರು ಪರಬ್ರಹ್ಮ ||
ಕ್ಷಣ ತಡೆದು ತಾನುಡಿದ ನಾವೂ
ಘನದೆಡೆಗೆ ದಯಮಾಡಿಸುವ ಘಳ
ಸನಿಹವೆನೆ ಸುಮ್ಮಿರಲು ಜಾತ್ರೆ ಸಮೀಪಿಸಿರಲಾಗ || ೨೫ ||

ಹಿರಿಯನೋರ್ವನು ಅಂಜುತಂಜುತು
ಸುರಿದ ಬುದ್ಧೀ ನಾಳೆಯೇ ಪರ
ತರದ ಪಂಪಾಪತಿ ರಥೋತ್ಸವವೆನಲು ನಗುತವನು ||
ಸರಿಯೆ ಸರ್ವರುಯಿಂದು ಸಂಜೆಗೆ
ಬರುವುದೈ ಸಾಮಾನು ಸಹಿತೆನೆ
ಹೊರಟು ತಲಪುವುದೆಂತೊ ಶಂಕೆಯೆ ಸಿದ್ಧರಾಗಿರಲು || ೨೬ ||

ಖ್ಯಾತ ಜಂಗಮ ಪ್ರಾತಃಕಾಲದ
ರೀತಿ ಶಿವಯೋಗಾನು ಸತ್ಕೃತಿ
ಗೀತ ಮುಗಿಸುತ ಸರ್ವರಿಗೆ ಪಾದೋದಕ ಪ್ರಸಾದ ||
ಪ್ರೀತಿಯಿಂದನುಗ್ರಹಿಸಿರಲು ರಸ
ಜ್ಯೋತಿಯೊಳು ವ್ಯೆಮರೆಯುತಿರಲಾ
ನೀತಿಪ್ರದ ಶರಣರಿಗೆ ನಯನಂ ಮುಚ್ಚಿರೆನಲಾಗ || ೨೭ ||

ತಕ್ಷಣವರೆಲ್ಲರಿಗೆ ಹೊಸತೆನೆ
ಸೂಕ್ಷ್ಮತೆಯದನುಭವವು ತೋರುವ
ನಕ್ಷೆಯೊಳು ವಿರುಪಾಕ್ಷದರ್ಶನ ಜಾತ್ರೆಯಾನಂದ ||
ಸೂಕ್ಷ್ಮತೆಯ ಸಹಿತಾದ ಕ್ಷೇತ್ರವ
ದಕ್ಷತೆಯ ಸಹಿತಾಗಿ ಕಂಡರು
ತಕ್ಷಣವೆ ಪ್ರತ್ಯಕ್ಷ ಪಾತ್ರತೆ ಪಾರ್ಥ–ಸಮಚಕ್ಷು || ೨೮ ||

ಶ್ರೀ ಗಣೇಶ ಏರೇಣ್ಯರಾಜಗೆ
ಯೋಗನರುಹಿ ವಿರಾಟರೂಪವ
ನಾಗದರ್ಶನ ಮಾಡಿಕೊಟ್ಟಿರುವಂತೆಯಿವರೆಲ್ಲ ॥
ಯೋಗಿವರನಿಂ ಪಡೆದು ತೃಪ್ತಿರ
ಲಾಗ ಸಜ್ಜನ ಸ್ನೇಹಿಯಾಶ್ರನು
ಬಾಗಿಲಂ ತೆರೆದಾಗ ಸನ್ನಿಧಿಯೊಳಗೆ ತಾವಿರುವ ॥ ೨೯ ॥

ಕಂಡು ಮೂಕಸ್ಮಿತರು ಸುಖಿಗಳು
ಕಂಡರಾ ಜಂಗಮನ ಲೀಲೆಯ
ನುಂಡು ರಸಬಾಯ್ತುಂಬ ಸದ್ಗುರು ಘೋಷ ಸಂತೋಷ ॥
ಕಂಡ ಬ್ರಹದಾರಣ್ಯ ಘೋಷಣ
ಕಂಡುಕೊಂಡಂತಾಯ್ತುವನುಭವ
ದುಂಡೆಯುಂಡಂತೆ–ಅಸತೋ ಮಾ ಸದ್ಗಮಯ*ವೆಂಬ ॥ ೩೦ ॥

ಸ್ಥೂಲವಿಲ್ಲಿರೆ ಸೂಕ್ಷ್ಮದನುಭವ
ಮೇಲು ನಿಜದನುಭಾವಗೊಂಡ ಸು
ಶೀಲ ಸಂಗನಶರಣರಾ ಪರಕಾಯದಿ ಪ್ರವೇಶ ॥
ಮೇಳವಿಸಿದಾ ರೀತಿಯದ ಸ
ಲ್ಲೋಲತೆಯದನುಭೂತಿ ಸೌಖ್ಯತೆ
ಭಾಲಲೋಚನ ಲೀಲೆಸಾಲಿನದಾಚೆ ಸುಖವಿಲ್ಲಿ ॥ ೩೧ ॥

ಜಾಗ್ರತಾವಸ್ಥೆಯನು ಲಕ್ಷಿಸಿ
ಜಾಗ್ರತನುಯಿಂತೆಂದ ಏನ್ರೆಪ
ಜಾತ್ರೆಕಂಡಂತಾಯಿತಲ್ಲಾ ಲಿಂಗಮಹಿಮೆಲ್ಲಾ ॥
ಜಾಗ್ರತನದಿಂದಿಷ್ಟ ಲಿಂಗದ
ಅಗ್ರಪೂಜೆಯ ಫಲವೆ ಸಾಧಕ
ಜಾಗ್ರತನದಿಂ ದೂರದರ್ಶನ–ಶ್ರವಣ ಸಾಧಿಸನು ॥ ೩೨ ॥

ಅರಚಕನ ಬಂಧನದ ದೇವರು
ಕಿರಚುತಲಿ ಮಾಡುವವು ಹರಕೆಯ
ನಿರಿಸದಿರೆ ನಾಟಕವ ಮಾಡುತ ಭ್ರಮಿತಗೊಳಿಸುವವು ॥
ಸರಿಯೆನದು ಪರತಂತ್ರ ದೈವವ
ಶರಣ ನಿಜದನುಭಾವಿಯೊಪ್ಪನು
ಕರಗಿ ಮಾರಿಸಿಕೊಳ್ಳುವಂಥವು ದೇವರೆಂತೆನದು† ॥ ೩೩ ॥

* ಬೃಹದಾರಣ್ಯ–೧/೩/೨೮ † ಬ. ವ. ೫೬.

ಬೇಡಿಕೊಳ್ಳುವ ದೈವ ದೈವವೆ
ಕಾಡುವಂತಹ ದೈವ ದೈವವೆ
ಓಡುತಾಡುವದೊತ್ತಿ ಹೋಗುವ ಹೇಡಿ ದೈವಗಳು ||
ನಾಡೊಳಗೆ ತಾವೇನ ಕೊಡುವವು
ರಾಡ ಮೂರ್ತಿಯು ಕಡೆಗೆ ಕಡಲವ
ಕೂಡಿ ಹೋಗುವದೆಲ್ಲ ದೈವವೆ ನೋಡಿ ಕಾನೂನು* || ೩೪ ||

ತಿಥಿಯ ತಿಂಗಳ ಕ್ರಮದ ಋತುಗತಿ
ಮಥನ ಚಕ್ರದ ಜಾತ್ರೆಯೇಕೋ
ಕಥೆಯ ದೇಹದ ತೇರು ಸಾಗಿರಬೇಕು ಚಿಜ್ಯೋತಿ ||
ಸತತ ಬೆಳಗುವ ತೇರನರಿಯದೆ
ಕಥನ ಹೇಳದ ಮುರಿದು ಹೋಗುವ
ಮಿತಿಯ ಪರಿಮಿತಿ ಕಟ್ಟುಕಥೆಗಳ ವಿವರ ನಿಮಗ್ಯಾಕೋ || ೩೫ ||

ನೋಡಿ ತಾಂ ವ್ಯೈಲಾರಲಿಂಗನ†
ಕೂಡಿ ಕೂಟದ ಗೌಪ್ಯ ಜಾತ್ರೆಯ
ನಾಡೆ ತಿಳಿದಿಹ ತೀರ್ಥ ಶರಣರ ಕಾಯ ಕೈಲಾಸ ||
ತೀಡಲಿನ್ನೇನು ನಿಮಗೆ ಹಾಡಿದ
ಹಾಡೆ ದೃಢತರ ರೂಢಿಯಾಗಲಿ
ಕೂಡಿ ಸುಖಿಸಲಿ ಮರಳಿ ಬರದಂತಿರಲಿ ಜಡತ್ರಾಸ || ೩೬ ||

ಕಲೆಯ ಚಿಲುಮೆಯೆ ಬೆಂದು ಬೆಳಗಿದ
ಸೆಳಕು ಸೆಳಕಿನ ಥಳಕು ತೋರಿರ
ಲಳುಕವರಳುತೆ ಕಳೆಯ ಪ್ರಸರಿತ ಕೊನೆಯದಾರಾದ್ಯ ||
ಲಲಿತದೀ ಸ್ಥಿತಿ ಸರಳೆನದು ಕಾ
ಯೊಲುಮೆ ಜೀವದ ಹೊಲಿಗೆಯುಳಿಯುವ
ಕಲೆಯ ತಿಳಿಯಬಲ್ಲನಗೆ ಗೋಹೇಶ್ವರನರಿವು § ಸಾಧ್ಯ || ೩೭ ||

ಇಂತೊರೆದು ಸಂತಸದಿರಲು ಹಳೆ
ಭ್ರಾಂತಿಗಳ ಉರುಳಿರಲು ಪದ್ಮದ
ಕಾಂತಿಹನಿ ಪತನಂತೆ ದೂರ್ವಾ ಮಂಜುಕಣದಂತೆ ||
ಸಂತೆಯೊಳಗೀರುಳ್ಳಿ ಗಡ್ಡೆಯೊ
ಳಂತು ಹೊರಸಿಪ್ಪಿಗಳುದುರಿ ಬಯ
ಲಾಂತರಗೊಳ್ಳುವ ಸಮತೆ ಶರಣಾಳಿಗಳ ಸ್ಥಿತಿ ಮೇಲು || ೩೮ ||

* ಬ. ವ-೫೫೧, ೫೫೩, ೫೫೬, ೫೬೧, † ಶಿ-ದರ್ಪಣ-ಪದ ೬೨, § ಶೂ. ಸಂ-ವ. ೨೦೬.

ತೆರೆಯೊಳಡಗಿಹುದ ಸ್ವರ ತತ್ಪರಿ
ಯರಿಯೆ ಗುರುಕರಜಕುಲ ತಂಪಿರು
ತಿರಲು ಮಂಗಲಪ್ರದನು ಜಂಗಮಲೀಲೆ ಲಾಲಿತ್ಯ ||
ಪರದೆ ಕೊನೆ ಜೀವನದ ಕಾಲವ
ನರಿತನೋ ಎಂಬಂತೆಯುಸುರಿದ
ಪರಿಯ ನಿಯಮಿಸಿಕೊಂಡ ವಟುವ ಪ್ರಸಾದ ದೇವಂಗೆ || ೩೯ ||

ಶ್ರೀ ನಿರಂಜನ ಜಂಗಮದ ಸ
ಮ್ಮಾನ ದೀಕ್ಷೆಯ ಕೊಟ್ಟ ಪೂರ್ವದ
ಮಾನವಹ ಗುರುಕುಲದ ಕಾಯಕ ಬೋಧ ಪದ್ಧತಿಯ ||
ಸಾನುರಾಗದಿ ನಡೆಯಲೆಂಬಾ
ಭಾನುಲಕ್ಷಿತ ವಿಷಯನಿಡೆ ಗುರು
ಧ್ಯಾನಿ ವೃಂದಿದಕೆಲ್ಲರೊಪ್ಪುತ ಸಜ್ಜುಗೊಳಿಸಲದು || ೪೦ ||

ಪಾವನಾತ್ಮಕ ಕರುಣೆಯಿಂದಾ
ವಾವ ಸಾಂಪ್ರತ ಪದ್ಧತಿಯ
ದಾವ ದೀಕ್ಷೆಯ ಕಾರ್ಯ ಪೂರ್ವದಿ ಸರ್ವ ಶರಣಜೊತೆ ||
ಆವ ಗುರು ನಂಜೇಶನೆಂಬುವ
ದೇವನಿರೆ ಸಾಭಾರಿವರ್ಯನ
ತೀವಿದುತ್ಸಾಹದಿ ನಿರಾಭಾರಿಗಳ ಸಹ ಕರೆಸಿ || ೪೧ ||

ಇಲ್ಲಿ ಮಂಟಪವಲ್ಲಿ ವಾಟಿಕೆ
ಯಲ್ಲಿ ಶ್ರೀ ಗಂಧಮರ ಫಲ ಚಲು
ವಲ್ಲಿ ಬಿಲ್ವದ ಕುಸುಮ ಕಂಪಿರಲಲ್ಲಿ ಷಟ್ಕಳಸ ||
ಉಳ್ಳ ಮಾರುತ ಮಂದ ಗಂಧವ
ನಲ್ಲಿ ಬೀರುತಲಲ್ಲಿ ಸಂಗಮ
ವಿಲ್ಲಿ ಶೋಭಿಸುತಲ್ಲಿರೆ ಪ್ರಸಾದ ವಟು ಪ್ರಭೆಯಲ್ಲಿ || ೪೨ ||

ಚನ್ನವೀರನ ಕೃಪಾ ಪ್ರಸಾದ
ವನ್ನು ಸ್ನೇಹತೆ ಕೂರ್ಮ ಕೂರ್ಮದ
ತನ್ನ ಶಿಶುವಿನ ಹೃದಯ್ಯುದಮೃತ ವರ್ಷ ಸಂಪನ್ನ ||
ಚನ್ನ ಫಲವೇ ಕುರುಹುದರಿವಿನ
ಸೊನ್ನೆ ಸನ್ನೂತ ಭೂಷಿತಂ ರಥ
ಮನ್ನಿಸುತಲೇರಿಸಲು ಸಿದ್ಧನು ಪರಮದರ್ಘದಕೆ || ೪೩ ||

ಈತ ಸಿದ್ಧನು ಮಠಕೆಯಾಸ್ತಿಗ
ಳೇತರದ ಚಿಂತಿಸದ ನಿಶ್ಚಿತ
ನೀತ ಬದ್ಧಿರಲಗ್ನಿಪಥಯೆಂಬುದನು ತಾ ತಿಳಿದ ||
ಖ್ಯಾತನಾಜ್ಞೆಯಗಾಮಿ ಸತ್ಪಥ
ಪಾಥ ಸದೃಢ ಪ್ರೇಮಿ ಚಿತ್ಪಥ
ಪ್ರೀತ ಜನತೆಗೆ ಶರಣಸಂದೇಶವನು ಮುಟ್ಟಿಸಲು || ೪೪ ||

ಈ ಪ್ರಸಂಗವ ಪಾತ್ರ ಕಂಡಿರಿ
ಸುಪ್ರಭಾತ ಕುಮಾರ ಸ್ಕಂದನ
ಸ್ವಪ್ರಭಾ ತೇಜಾಂಗ ವೇದ್ಯನು ಕಂಡವಗೆ ಚೋದ್ಯ ||
ಅಪ್ರತಿಮ ಕಾರ್ಯಾಂಗ ವಾಮನ
ವಿಪ್ರರೂಪದ ಮೇಲ್ಮೆ ವಟುವರ
ಕಪ್ರಮಾಣತೆಯೆನ್ನಿ ಸುಮ್ಮಿಹುದೆನ್ನಿ ಲೇಸೆನ್ನಿ || ೪೫ ||

ಲೋಲ ಪರುಷ ಮಹಾಂತವಂತನು
ಲೀಲೆಯಿಂ ಸಲೆ ಮೂರ್ತಿಗೊಳಿಸಿದ
ಶೀಲ ಸಿದ್ಧಿಯ ಶಿಲ್ಪಿ ನಿರಕ್ಷತೆಕಂಡು ಗುರಿ ತಲುಪಿ ||
ಹಾಲಗಲ್ಲಿನ ಸಮತೆ ವಿದ್ಯಾ
ಲೋಲ ವಿವರಣೆವರ್ಷಿ ಷಟ್ಸ್ಥಲ
ಮೇಲು ಶೋಭಿತಕೀರ್ತಿಗೊಳಿಸಲು ಸನ್ನಿಧಿಯಮುಂದೆ || ೪೬ ||

ಹಂತ ಹಂತ ಪ್ರಶಾಂತಮತಿ ಮ
ಹಾಂತ ಸ್ಥಾನಕೆ ಏರತೊಡಗಿರ
ಲಂತು ಪ್ರಮಥ ಪ್ರಸಾದ ದೇವರು ನಿರಂಜನದ ದಿಶೆಗೆ ||
ಪಂಥ ಪದ್ಧತಿ ಪಿಡಿದು ಗುರುಪಥ
ವಂತ ಪೂರ್ಣಾಗಿರಲು ದಿನಚರಿ
ತಂತು ಸಂತಸಗಂಡು ಜಂಗಮಬೋಧೆಯವಗಿಂತು || ೪೭ ||

ಶೋಭೆಗೊಂಡಿಹ ಗೆದ್ದ ಮನವಂ
ಲಾಭ ಚಿರದೆಡೆ ಲಕ್ಷ್ಯಸದಮಲ
ನಾಭಿ ಸೂತ್ರಿರಲಿವಗೆ ನಿಜವಾತ್ಸಲ್ಯವಾರಿಧಿಯ ||
ಶ್ರೀ ಭಕುತ ಶಿಷ್ಯಾಳಿ ಸಂಮುಖ
ನೀ ಭಸಿತ ಶೂನ್ಯಾಂಗ ಪೀಠಿಕೆ
ಶೋಭೆಗೊಳ್ಳುವದಂಥ ಪ್ರಾಸಂಗಿಕದ ಶಬ್ದಶ್ರೀ || ೪೮ ||

ಪೂರ್ವದಿಂ ಬಂದಿರುವ ಗುರುಕುಲ
ಸರ್ವ ವಟುಗಳಿಗೆಲ್ಲ ಮಾತೆಯು
ಸರ್ವ ಹೃದಯಿಗನಾಗು ವಚನ ಪ್ರಸಾರ ಪಥಿಕನಾಗು ||
ಗರ್ವಗೊಳ್ಳದೆ ಕಾವಿಬಟ್ಟೆಗೆ
ಯುರ್ವಿಯೊಳು ಗೌರವನ ತಂದಿರು
ಶರ್ವ ತೆರ ಸಹಿತೊಪ್ಪು ರೀತಿಯ ಸಹಜಮಾಟದಲಿ || ೪೯ ||

ಮಾನ ಮರ್ಯಾದೆಯ ಬಯಸದಿರು
ಮೇಣಿದಂ ಕನಸಿನೊಳು ಸಹ ಸ
ಮ್ಮಾನವಾಶಿಸಬೇಡ ಪೀಠಕೆ ಸಂಯಮನ ಯೋಗ್ಯ ||
ಮಾನವಂತರ ಸ್ವಪ್ನನುಡಿ ಸ
ಮ್ಮಾನಿಸಿದ ಹರಿಶ್ಚಂದ್ರ ಜೀವನ
ಗಾನಸಮ ಬಹುಕಷ್ಟವದು ಸಂಕಲ್ಪರಹಿತಾಗು || ೫೦ ||

ಎಸೆವ ದೃಷ್ಟಿಯೊಳಣುವಿಗಣುಕಣ
ಕಸರು ಬೀಳಲು ಬಾಧೆಯಹುದೈ
ಭಸಿತ ಜಂಗಮಪೀಠ ಪಾವಿತ್ರ್ಯತೆಯ ಚಿರಗೊಳಿಸು ||
ಎಸೆವ ಕಾಯಕ ಯಜ್ಞ ನಡೆಸುವ
ರಸಿಕ ಪ್ರೋತ್ಸಾಹವನು ಕೊಡುತಿಹ
ರೆಸೆವ ಜಂಗಮ ಪಥವ ನಿನ್ನದು ಲೋಕಸಂಗ್ರಹಕೆ || ೫೧ ||

ಶರಣ ಶರಣರಿರವನು ಮನ್ನಿಸ
ದಿರುವದೇ ಕಲಂಕವದು ಪರತರ
ಗುರುವಿನಾಜ್ಞೆಯ ಮೀರಿನಡೆವುದು ಸರಿಯೆನದು ನಿಜದಿ ||
ಶರಣ ಜಂಗಮನಲ್ಲಿ ಸನುಮತ
ನಿರಲು ಜಂಗಮ ಬರಲು ಎಲ್ಲವ
ಮರೆದು ಜಂಗಮಕಂಪ ತಾನಾಗುವದೆ ಲೇಸಹುದು || ೫೨ ||

ನೋಟ ಹೊರಗಿಡೆ ಕೋಟಿಯಾಶೆಗ
ಳೇಟು ಕೊಡುತಿಹವಪ್ಪ ಭೂಪತಿ
ಯಾಟದಂತೆ ವಿಲಾಸ ಸಲ್ಲದು ಸ್ವಾಮಿಯಾದವಗೆ ||
ಮಾಟ ಮಂತ್ರಗಳೆಡೆಗೆ ಗತಿಸುವ
ಕೂಟಕದು ಚಿತ್ತಪ ಸುಧಾಂಶವ
ನೂಟಮಾಡಿಸು ಈ ಸಮಾಜದ ಗೊಂಬೆಯಾಗದಿರು || ೫೩ ||

ದೀನ ದಲಿತರ ಸೇವೆಯೇ ಸ
ಮ್ಮಾನ ಗೊಳ್ಳಲಿ ನಿತ್ಯ ಹೃದಯದಿ
ತಾನೆ ಸಾಗಲಿ ತತ್ವ ಪೂಜ್ಯತೆ ಮಾತೃಭಾವದಲಿ ॥
ತಾನೆ ಬಂದಿಹುದೆಲ್ಲಿ ಸವೆಸುವ
ದೇನೆನದು ಶರಣರಿಗೆ ಅರಸರ
ಕಾಣುತರಳದಿರೈ ದರಿದ್ರನ ಕಂಡು ತಿರುಗದಿರೈ ॥ ೫೪ ॥

ಆಗ ಚಿರ ಸಂತುಷ್ಟಿ ಮಧುರತೆ
ಸಾಗು ನೈಜ ವಿರಾಗಿ ಸುಸ್ಥಿತ
ನಾಗಿ ಚಿದ್ರಸಭೋಗಿ ಸದ್ರಸನಾಗುತಾನಂದ ॥
ಯೋಗಿ ಸೇವಕನಾಗುತಥಿತಿಗೆ
ಬಾಗಿ ದಾಸೋಹದಿ ಸಮರ್ಪಿತ
ನಾಗು ಶಾಂತತೆಗಾಗಿ ಸಮರಸವಾಗಿ ಹರುಷಾಗಿ ॥ ೫೫ ॥

ಬೇರು ಉಳಿದಿರೆ ಬೊಡ್ಡೆ ಚಿಗಿಯುವ
ದಾರು ತಿಳಿಯರು ಮೂಲ ತತ್ವದ
ಸಾರನರಿಯುತ ಸನ್ಮತಿಯ ಚಿಗುರಿಸಲಿ ಹುರುಳಿರದ ॥
ಬೇರು ಸಹ ಸಹಿತಾಗಿ ಸುಡುತಲಿ
ಚಾರು ಜಂಗಮ ಜ್ಯೋತಿ ಬೆಳಗಿಸಿ
ಸಾರದಂಬಲಿ ಬಡಿಸಿ ಪರಿಪಕ್ವತೆಯ ನೆಲೆಗೊಳಿಸು ॥ ೫೬ ॥

ಸಮಯ ಸಾಧಕನಾಗಿ ಸಾಗದೆ
ವಿಮಲ ಭೂಷಿತನಾಗಿ ಬೆಳಗಿಸು
ಸುಮತಪಥ ಕರ್ತವ್ಯಪಾಲಕನಾಗಿ ಬೆಳಗಪ್ಪ ॥
ವಿಮಲ ಭಕ್ತರ ಹೃದಯ ಹರ್ಷದ
ವಮಿತ ಸಿಂಹಾಸನದಿ ಶೋಭಿಸು
ಕುಮತ ಮತ ಭೇದಿಸುತ ಯೋಚಿಸಿ ಸಾಗು ನಿರ್ಲಿಪ್ತ ॥ ೫೭ ॥

ಬಿದ್ದವನ ಮುದ್ದಿಸದ ಜಗವಿದು
ಗೆದ್ದವನ ತಾ ಹೊತ್ತು ಕುಣಿಯುತ
ಮುದ್ದು ಭಾವದಿ ಲಾಭಗಳಿಸುವ ನಾಗಗುಣಭರಣಿ ॥
ಹೊದ್ದದಿರು ಆ ಭಾವವೆಂದಿಗು
ಸಿದ್ಧನಿರು ಸಲ್ಲಾಭದಾ ಕಡೆ
ಬಿದ್ದವನ ಮುದ್ದಿಸುತಲೆಬ್ಬಿಸಿ ತಿದ್ದು ಶುಭಸರಣಿ ॥ ೫೮ ॥

ರೋಷಳಿಯದವನೇಕೆ ವೇಷ ದು
ರಾಶೆ ತೊರೆಯದೆ ಕೇಶವೇತಕೆ
ಭಾಷೆಗಲಿಯದೆ ಕೋಶವೇಶಕೆ ತಿಳಿದು ಸಾಗೆಂದ ||
ಕೋಶ ಪಂಡಿತರಾದರೇನದು
ಹೇಶಿ ಗುಣ ಬಿಡದಿರಲು ಜೀವನ
ಘಾಸಿಯಹುದೈ ಹೃದಯ ಶುದ್ಧತೆ ಸ್ವಾಮಿ ಶುಭವೆಂದಾ || ೫೯ ||

ಸರ್ವ ಜಗವಿದು ತನ್ನದೆಂಬುವ
ಗರ್ವ ಸ್ವಾಮಿಗೆ ಲೇಸು ಘಟದಿಂ
ಸರ್ವಗುರುಕುಲ ಭೂ ಬೆಳಗಿಸೈ ಸ್ಥಾವರಕ್ಕಳಿವು ||
ಉರ್ವಿಯೊಳಗಿಹುದೈ ಸಮಾಜದ
ಸರ್ವಶುಭ ಚಿಂತನೆಯ ಧರಿಪುದೆ
ಶರ್ವ ಪೂಜೆಯು ಮಠವು ವ್ಯಕ್ತಿಪ್ರತಿಷ್ಠೆಗದುಸಲ್ಲ || ೬೦ ||

ಆತ್ಮ ಮಂಥನ ನಿನ್ನದಾಗಲಿ
ತತ್ವ ಚಿಂತನ ನಿತ್ಯ ನಡೆಯಲಿ
ಕುತ್ತಕೊಳ್ಳದಿ ಬಿದ್ದವಗಿರಲಿ ಸತ್ವಸಾಂತ್ವನತೆ ||
ಬತ್ತಿ ಹೋಗದೆ ಬೆಳೆದು ಶರಣರ
ಬಿತ್ತಿಗೆಯು ಶೂನ್ಯಾಂಗ ಸೊಂಪದು
ಸುತ್ತುವರಿದತ್ತೆಲ್ಲ ಹರಡಲಿ ಸಾಗುಹರಡಿಸುತ್ತ || ೬೧ ||

ನಿನಗೆ ಭಾವಕನೋರ್ವನಿಹನೈ
ನಿನಗೆ ನೀನೇ ಸೇವಕಾಗೈ
ನಿನಗೆ ಸೂಚಕ ಸಾಕ್ಷಿಯೋರ್ವನು ನಿನ್ನಡೆಯ ನುಡಿಗೆ ||
ಮನಸುಹರ್ಷತೆಗೊಡುವ ಸ್ಫೂರ್ತಿಯು
ಋಣತೆ ಬದಿಯವಗೆಲ್ಲ ಬಡಿಯಲಿ
ತಣಿದು ಬಾಗಿರಲವರ ಸಂಗದಿ ಕುಣಿದು ತಣಿದಿರಲಿ || ೬೨ ||

ಧರ್ಮ ದಾನವೆ ದಾನವೆಂಬುದು
ಧರ್ಮರಸವದೆ ರಸವನೆನುವದು
ಧರ್ಮರತಿ ನಿಜರತಿಯಿದೇಸೈ ಬೋಧೆಗಲಿಸುವದು ||
ಧರ್ಮ ಶಾಸ್ತ್ರದಿ ಸರಳಭಾಷೆಯೆ
ಮರ್ಮಹರಿಸೈ ಎನುತೆ ಮುಂದೆ ಸು
ಧರ್ಮಿಯರುಹಿದ—ಮಂತ್ರ ಗೌಪ್ಯಾದಿಗಳ ಸಹಿತಾಗಿ || ೬೩ ||

ಒಪ್ಪಿಗೊಪ್ಪಿಗೆ ಗುರುವೆ ನುಡಿದಿಹ
ತಪ್ಪದಾಗದ ಹಾಗೆ ತವಪದ
ತೆಪ್ಪದಿಂದಾಶ್ರಯದಿ ಈಜುವೆ ನೀನೆ ಚುಕ್ಕಾಣಿ ॥
ಒಪ್ಪಿದಂತೆಯೆ ಮುಂದೆಯು ಸಹಿ
ತೊಪ್ಪಿರಲು ನನಗೇನು ಭಯವೆಂ
ತಪ್ಪ ನನಗೈಯೆನುತೆ ನಮನವ ಸಲ್ಲಿಸಿದ ಬಳಿಕ ॥ ೬೪ ॥

ತಿಳಿಸುತಂತಿವು ಕ್ರಿಯೆಯ ಕಂಗಳ
ಸುಳಿವಿಡಿದಿಹ ಕೃಪಾ ಪ್ರಸಾದವ
ತಿಳಿರುಚಿರಗದು ಚಿನ್ಮಯಾನುಗ್ರಹವ ಪೂರೈಸಲ್ ॥
ಬೆಳಗಿ ಬೆಳಗಿಸುತೆಲ್ಲವನು ಬಳಿ
ಫಳದಿ ಪಾವಕ ಪೂರ್ಣ ಕಾಂತಿಯ
ಥಳಕು ಒಂದೆಂಬಂತೆ ಸಗಸ ಪ್ರಸಾದ ಸ್ವಾಮಿಗಳು ॥ ೬೫ ॥

ಕರುಣಿಸುತೆ ಬಿಳಿಕಂಬಳಿಯ ಸಹ
ಕರದಿ ದಂಡವ ವಚನ ಸಂಪುಟ
ವಿರಿಸುತಾಶೀರ್ವಾದ ಸ್ವಾಮಿಗೆ ಬಳಿಕ ಜಂಗಮನ ॥
ನೆರೆದಿಹ ನಿರಾಭಾರಿ ಶರಣರ
ಹಿರಿಮೆ ಹರ್ಷದ ಶೂನ್ಯಪೀಠಕೆ
ಕರೆಯುತಾರೋಹಣವ ಮಾಡಿಸಿ ನೀಡುತಧಿಕಾರ ॥ ೬೬ ॥

ಅಪ್ಪುವಿನೊಳಡಗಿಹುದಸಮರಸ
ದುಪ್ಪು ಜ್ಯೋತಿಯೊಳಡಗಿಹುದ ರಸ
ಕಪ್ಪುರದ ಸಮದೊಪ್ಪು ಗುರುಕರಜಾತ ಸುಪ್ರೀತ ॥
ತಪ್ಪದಂತಿಹ ಭಾವಕತೆ ತಾ
ನೊಪ್ಪುತಿರುವ ಪ್ರಸಾದ ಸ್ವಾಮಿ ಗತಿ
ದೊಪ್ಪಿದಾ ಫಳಹೊಂದಿ ಪೀಠ ಪ್ರಭಾತಮಯನಾಗಿ ॥ ೬೭ ॥

ಚಿರಗುರುತ್ವವ ಪಡೆದ ಶ್ರೀಗುರು
ಸಿರಿ ಪ್ರಸಾದತೆಗೊಂಡ ಪ್ರಣವದ
ಸುರುಚಿ ಸರಸ ಪ್ರಸಾದಮಯ ತಾನಿಂತು ನುಡಿಯುತಲಿ ॥
ಗುರುಗಳಪ್ಪಣೆ ಕೊಟ್ಟರೀತಿಯೆ
ಚರಣಲಕ್ಷಿತನಡೆವೆ ಎನಲಾ
ಹರುಷಗೊಂಡಿಹ ಚರಿತನಾಯಕನಿಂತು ಶರಣರಿಗೆ ॥ ೬೮ ॥

ಜಾಣರೆಲ್ಲರು ನೋಡಿದಿರಿ ಸ
ಮ್ಮಾನಗೊಂಡಿಹ ಶರಣಜಾತ್ರೆಯ
ಮಾಣದಲೆ ಶಿವಭಕುತರೆಲ್ಲರು ಹಿಂದಿಸಿಂ ಬಂದ ||
ಪ್ರಾಣ ಸಮ ಪೀಠಾಂಗ ರೀತಿಯ
ನೂನವಿಲ್ಲದೆ ಮುಂದುವರಿಸಿರಿ
ಜಾಣವಾಣಿ ಪ್ರಸಾದ ಸ್ವಾಮಿಯ ಶ್ರೇಣಿ ಪದಗೂಡಿ || ೬೯ ||

ಸಡಗರದ ಸಂಭ್ರಮವ ಕಂಡಿಹ
ಮಿಡಿಯ ಕಂಗಳ ಕರವು ಕುಣಿಯುತ
ನುಡಿದಿರಲು ಘಳ್ ಘಳನೆ ಸ್ವರ ಚಪ್ಪಾಳೆ ಸಹಗೂಡಿ ||
ಬಿಡದುದುರಿ ಪುಷ್ಪಾಂಜಲಿಯ ಲತೆ
ಬಿಡಗು ಮೊಗ್ಗೆಯ ಸಿಂಚನದು ಸ್ವರ
ನುಡಿಗಗೋಚರ ಚೇತನಾಂಶ ಪ್ರಸಾದನೊಳ ಸೇರಿ || ೭೦ ||

ಕಳೆಯು ಏರಿತು ವಿದುರ ಚೇತನ*
ಸುಳಿದಿಹ ಯುಧಿಷ್ಠಿರನ ಕಾಯದಿ
ಹೊಳೆದವೊಲಃಯಿದಕಿಂತ ಮಿಗಿಲಾಗಿರೆ ನಿರಂಜನದ ||
ಅರತೆಯಿರದರವಿಂದ ಸ್ಥಿತಿಗತಿ
ಕಳವಳದ ಭವಿಯೇನು ಬಲ್ಲನು
ಅಳಿಯುತುಳಿದಿಹ ತತ್ವಮುಸಿ ಲಿಂಗಾಂಗದೊಳು ಕಂಡ || ೭೧ ||

ಗಗನ ಮಂಡಲ ಪರಿಯನರಿಯುವ
ಬಗೆ ಪರೀಕ್ಷಕ ಮಾತ್ರ ಬಲ್ಲನು
ಬಗೆಯ ಭಾವನೆಯಂತೆ ನಭವದು ತನ್ನ ಸ್ಥಿತಿಯಹುದು ||
ಸೊಗಸುಪಮೆಯ ನಿಜಾಂಶ ಶ್ರೀಕರ
ಸೊಗಸು ಸೌಮ್ಯನ ಸಮತೆ ಸ್ಥಿತಿಗತಿ
ಮಿಗಿಲು ಸಾದೃಶ ಶೀಲನಿಂದ ಪ್ರಸಾದಿಯಾದಿವನು || ೭೨ ||

ಸೋಮನಾಕೃತಿ ಸರಸದೊಳು ಪ್ರತಿ
ಸೋಮ ಸಮ ಸಚ್ಛಾಯೆ ತೋರ್ಪುದು
ಸೋಮಧರ ಸದ್ಗುರುವಿನಾ ಸಚ್ಛಿಷ್ಯ ಸದ್ಗುರುವೆ ||
ನೇಮದೊಪ್ಪುವ ರೀತಿ ಮಾತಿದು
ಸೋಮಧರ ಮತಿವಂತರೊಪ್ಪುವ
ರಾಮಣೀಯಕ ಖ್ಯಾತಿ ಪುಷ್ಪಿರುವಂತೆ ಗಂಧವದು || ೭೩ ||

* ಮಹಾಭಾರತ-ಅಶ್ರಮವಾಣ ಪರ್ವ ೨೬/೨೬.

ಮೊದಲೆ ವಿದ್ಯಾಪೂರ್ಣಸ್ವಾಮಿಗೆ
ಯಿದುವೆ ಮರಳಧ ಬೋಧವೇಕನೆ
ಇದು ಪರೀಕ್ಷೆಯು ಮುನ್ನ ಗ್ರಹಿಸುವ ಸಂಪ್ರದಾಯಕದ ||
ಪದದಿ ಶೋಭಿತವೃಂದ ವಟುವಿಗೆ
ಇದುವೆ ಪಾಠದು ತಿಳಿಯಬೇಕಿರ
ಲಿದು ಪ್ರತಿಜ್ಞಾವಚನ ಪದ್ಧತಿಯೆಂತು ತಿಳಿರಿಂತು || ೭೪ ||

ಮುಂದೆ ಸಾಗಿದ ಪೂಜ್ಯರನುಭವ
ಹೊಂದಿಹುದ ಸುಸ್ವಾನುಭವದಲಿ
ವೃಂದದೇಕೋತ್ತರ ಶತಸ್ಥಲ ಮಂತ್ರಗೌಪ್ಯಾದಿ ||
ಗಂಥ ಟಿಪ್ಪಣಿ ಕರಣಹಸಿಗೆಗೆ
ಯೆಂದು ಬರೆದಿಹುದಿದಕೆ ಸಾಕ್ಷಿಗ
ಳಿಂದು ನುಡಿಯು ಶಿವಾನುಭವದರ್ಪಣದಿ* ಯುದ್ಘೋಷ || ೭೫ ||

ಚಲುವ ವಿದ್ಯಾ ಪಡೆಯಲೇನದು
ಚಲುವ ಶಿವಕಲೆ ಮೇಲು ಸಹಸ್ಥಿತಿ
ಯೊಳಗುಳಿದ ಸ್ವಾಮಿಗಳ ಸಮತೇನುಂಟು ಲೋಕದಲಿ ||
ಗಳಿಸುವದು ಬಹುಕಠಿಣ ಪೀಠದ
ಕಳೆಯೊಳಗೆ ಬೆಳಗುವದು ಕಿಂತುರೆ
ಫಲಿತವಿದ್ಯಾ ಪುಂಶ್ಚಿಲಿಯ ಮನ್ನಿಸುವರಾರು || ೭೬ ||

ಶುದ್ಧವಹುದಂಕಲಗಿಯಡವೀ
ಸಿದ್ಧ ಚರಣಾಶ್ರಯದಿ ಸ್ಥಾಪಿಸ
ಲೆದ್ದ ಪುರ ಮರೆಗುದ್ದಿ ಮಠವಿದು ವಡವಿಸಿದ್ಧೇಶ ||
ಬದ್ದಿದಕೆ ಗುರುವಂಶದೊಳು ಕ್ರಮ
ಬದ್ದ ಗುರು ಗುರುಪಾದ ಕೃಪೆಯಿಂ
ದೆದ್ದ ಗುರುನಿರುಪಾಧಿ ಕೃತಿಯೊಳ್ ಸ್ಥಲವು ಹದಿಮೂರು || ೭೭ ||

---

* ಶಿ. ದರ್ಪಣ- ಪದ ೨೯/೭-

ಅಂತೂ ಸ್ಥಲ ೧೩ ಕ್ಕಂ ಪದ ೭೬ ಕ್ಕಂ ಒಟ್ಟು ಪದ
೭೭೬ ಕ್ಕಂ ಮಂಗಲಂ.

ಓಂ

# ಹದಿನಾಲ್ಕನೆಯ ಸ್ಥಲ

**ಸೂಚನೆ–**

ಭಯ ಕಳೆದು ಬಯಲರಸಿ ಜಂಗಮ
ಬಯಲ ಲೀಲೆಯ ಗೈಯ್ದು ನಿರ್ಭಯ
ಬಯಲಿನೊಳು ಬಯಲಾದ ಪೂರ್ಣತೆಯರಿಯುವುದು ಬಯಲು ||

*ಜ್ಞಾನಿ ಸಿದ್ಧಾರೂಢರಿಂ ತನ
ಗೇನು ನಿಜ ಸಂತೃಪ್ತಿ ಸಿಗದಿರೆ
ತಾನೆ ಯಮ್ಮಿಗನೂರದಾ ಜಡಿಸಿದ್ಧರಡಿ ನಿಜದಿ ||
ಸ್ವಾನುಭವರಸಗಂತು ಚಿದ್ಘನ
ಹಾನಗಲ್ಲಿನ ಪೂಜ್ಯರಾಗುತ
ಮೇಣು– ಮಂದಿರ ನೆಲಿಸಿದಂಥ ಕುಮಾರ ಕೃಪೆಯಿರಲಿ || ೧ ||

ಶಿವನ ಸರ್ವೋತ್ತಮತೆ ಸಾರುವ
ಸುವನ ಗುರುಕುಲಸ್ತಂಭ ಮಂಟಪ
ದಿವಸ ದಿವಸಕೆ ಖ್ಯಾತ ಹೃದಯಾಂಗಮತೆ ಮಂಗಲತೆ ||
ಅವಧಿಯಿಲ್ಲದೆ ದುಡಿವ ಸಂಸ್ಥೆಯ
ವಿವರಗಳ ನಿಮಗೇನು ಹೇಳಲಿ
ಸವಿಯ ಸ್ವರ ಕೈವಲ್ಯದರ್ಪಣದಲ್ಲಿ ಸ್ವರಸಾಕ್ಷಿ || ೨ ||

ನಡೆಯುತಿಲ್ಲಿ ಸಮಾಜಚರ್ಚೆಯು
ನುಡಿಯುತಿಲ್ಲಿ ಸುಧಾತ್ಮದರ್ಶನ
ಮಿಡಿಯುತಿಲ್ಲಿ ಶಿವಾನುಭವ ಸಂಗ್ರಹತೆ ಸಂಶೋಧನ್ ||
ಸಡಿಲುಗೊಂಡ ಸಮಾಜ ಬಂಧುರ
ನಿಡಿಯನೇರಿತು ಸಾಗಿ ಮುಟ್ಟಿತು
ಮುಡಿಗೆ ಸಫಲತೆ ಪುಷ್ಪ ಧರಿಸಿತು ನುಡಿಯ ಪ್ರಕಟಿಸಿತು || ೩ ||

---

* ಶಿ. ಮಂದಿರ. p ೧೪.

ವರ ವಿರಕ್ತ ಕ್ರಮದಿ ಗತಿಸುವ
ಪರನು ಧ್ಯೇಯತೆ ಪಿಡಿದು ಸಾಗುವ
ಗುರಿಯ ಪಿಡಿದವರಿಂಗೆ ಚನ್ನನ ಗುರುಕುಲದ ಪಥವ ॥
ಸರಿ ಪ್ರಸಾದತೆಯೆಂದು ಗ್ರಹಿಸಿರೆ
ಹಿರಿಮೆ ಕಾಮಿಗೆ ಶೋಭೆಯಲ್ಲಿದೆ
ದುರುಳರೊಳು ಧಾರ್ಮಿಕತೆಯರಳುತೆ ಪ್ರಭೆಯ ಪ್ರಸರಣವು ॥ ೪ ॥

ಕಕ್ಕುಲತೆಯ ಮರಿಗಳ ಚಲ್ಲಾ
ಚಿಕ್ಕರೆಯು ದೃಶ್ಯಾಂಗ ನೋಡುವ
ತಕ್ಕ ಸಿಂಹಿಣಿಯಂತೆ ಸತ್ವದ ಚನ್ನವೀರವರ ॥
ನಕ್ಕು ನಲಿಯುತನಿಹನು ನೇಮದಿ
ತಕ್ಕು ಕಾರ್ಯ ಪ್ರಸಾದ ಸ್ವಾಮಿಯ
ಅಕ್ಕರೆಯದಳವಲ್ಲ ಪೀಠದ ಸೋಂಕುವಿರದವಗೆ ॥ ೫ ॥

ತಪ್ಪಿರಲು ತಕ್ಷಣದಿ ಖಂಡಿಸು
ತಿಪ್ಪ ಶಸ್ತ್ರ ಚಿಕಿತ್ಸೆ ತತ್ವದಿ
ಯೊಪ್ಪುತಿರುವ ಕೃಪಾಂಗ ಪೂರ್ಣನ ಶಿಕ್ಷಣದ ರೀತಿ ॥
ಅಪ್ಪನಿಗೆ ಸರಿಹೋಯ್ತೆ ನಿಶ್ಚಿಂ
ತಪ್ಪನಾಗುತ ವೃತ್ತಿಯೊಳಮುಖ
ವಪ್ಪಿ ನಿರ್ಮಲವೊಪ್ಪ ಬಯಲಿನ ಮುರಲಿ ಸಹಜೊಪ್ಪ ॥ ೬ ॥

ಬೇಸರಾಗದ ಬೋಧ ಭಾವನೆ
ತೋಷಗೊಳಿಸುವರೀತಿ ಚಂದ್ರಿಕೆ
ಯಾಶೆ ಮಾಡುತ ಬಂದ ಸಾಗರ ಸರತರಂಗ ಹನಿ ॥
ಹಾಸುವಂತೆಯೊ ಹರ್ಷಗೊಳ್ಳುತ
ರಾಶಿ ಭಕುತರು ಮರೆತು ಹೋಗದ
ಭಾಷೆಯಾಗದ ತತ್ವತೀರ್ಥ ಪ್ರಕಾಶಗೊಳ್ಳುತಲಿ ॥ ೭ ॥

ಫಲದಿ ಬದಲಾವಣೆಗಳಾದವು
ಫಲಿಸುತನುಭವ ಹೃದಯ ಹೊನಲದು
ಚಲಿಸಿ ಸರ್ವೆಡೆ ನಾರಿ ಸ್ವಾತಂತ್ರ್ಯತೆಯ ಧಾರ್ಮಿಕತೆ ॥
ಕಳೆಯುತಂಧಃ ಶ್ರದ್ಧೆ ಮಂದದಿ
ಬೆಳೆಯುತೈಕ್ಯತೆ ತನ್ನ ಧರ್ಮದಿ
ಸುಳಿದು ಸತ್ ಸಾಹಿತ್ಯ ವಿವರಣೆ ಹೊಂದಿ ತಾತ್ವಿಕತೆ ॥ ೮ ॥

ನುಡಿದು ತಪ್ಪುವದಿಲ್ಲ ನುಡಿಯದೆ
ಕಿಡಿಯು ಹಚ್ಚುವ ಕೃತಿಯು ಕುಡಿಯುತ
ಕೊಡಲಿ ಪಿಡಿಯುವದಲ್ಲ ದುಷ್ಕೃತಿರಹಿತನಾಗುತಲಿ ॥
ಮೃಡನ ಸಮ ಒಳ ಹೊರಗು ನಡೆನುಡಿ
ಬೆಡಗು ಬಳ್ಳಿಸಮಾಜ ಸಂಸ್ಕೃತಿ
ಕುಡಿಯು ಕೊನರದೆ ಚಿಗುರಿ ಚಿತ್ರಭೆ ಸೂರೆಗೊಂಡಿರಲು ॥ ॥ ೯ ॥

ಮುಂದೆ ವೈಲಾರ್ಬಸವಲಿಂಗಗೆ
ಹೊಂದಿ ಚನ್ನಪರೀರ್ವರಿಗೆ ಕರ
ವೃಂದ ಗಣಶಿವಬಸವಸ್ವಾಮಿಗೆ ಶಾಂತವೀರರಿಗೆ ॥
ನಂದ ಪುರಯರನಾಳ ಬಾಲ್ಯಾ
ನಂದ ಶಾಂತ ಮಹಾಂತರಿಗೆ ನಿಜ
ದಿಂದೆ ಬೆಳೆಸಿರಿಯೆಂದ ಸರ್ವಾಚಾರ ಸಂಪತ್ತಿ ॥ ೧೦ ॥

ಲಿಂಗನಾಯ್ಕನ ಹಳ್ಳಿಯಾಶ್ರಮ
ರಂಗದಲ್ಲಿಯ ಶರಣಬಳಗಂ
ಸಂಗಿಗಳ ಕರೆಯುತ್ತೆ ಜಂಗಮಲೀಲೆ ಕೊನೆದಿನದ ॥
ರಂಗಮಂ ತಿಳಿಸಲ್ಕೆ ದುಃಖರ
ಸಾಂಗಕದು ಸಂಚಾರ ಮಾಡುವ
ಜಂಗಮನ ಬಯಲಾಂಗನರುಹಿಸಲಾಗ ಭಕ್ತಗಣ ॥ ೧೧ ॥

ಜಂಗಮಾರ್ಯನ ಯೋಗ ಕ್ಷೇಮವ
ದಿಂಗಿತರು ಕೇಳಲ್ಕೆಯಿದು ಬಯ
ಲಾಂಗವಿರೆ ಸ್ಥಾವರದ ಸೋಂಕಿರದಂಥ ನಿಜಸ್ಥಿತಿಯ ॥
ಮಂಗಲಾತ್ಮನು ತಿಳಿಸುತಂ ನಿಜ
ಲಿಂಗದೊಳವ ಬೆರೆದೇಕವಾಗುವ
ದಿಂಗಿತವ ನಿಶ್ಚಿತದ ದಿನವೊಂದನ್ನು ಸೂಚಿಸುತ ॥ ೧೨ ॥

ಆ ದಿನದಿ ನಿಜ ತುಂಗೆ ಭದ್ರೆ ಪ್ರ
ಮೋದೆಯೊಳು ಸನ್ಮಂಚದಾವುಗೆ
ಸಾದರದಿ ಬರುತಿಹುದೆ ಕುರುಹದು ನಿಜವಿ ಬಯಲಾಂಗ ॥
ನಾದಮಯವೃಂದಕ್ಕೆಯರುಹಿಸಿ
ವೇದಮಯ ಸಂಚಾರ ಸಮಗತಿ
ಯಾದ ಪಥ ಪ್ರಾರಂಭಿಸಿದ ರಸಬದ್ಧ ಮನಗೆದ್ದ ॥ ೧೩ ॥

ಅಂತು ಭ್ರಾಂತಿಯೊಳಿರುವವರ ಸಹ
ಜಾಂತರಿತು ಕರುಣದಲಿ ಸತ್ಸುಖ
ಶಾಂತಿಯನು ಮಾಡುತ್ತೆ ಸಾಗಿದ ಚಿದ್ವಿಲಾಸದಲಿ ‖
ಶಾಂತಸಹಜಾಚರಣ ಪೂರ್ಣನು
ಯಿಂತು ಶೂನ್ಯಸ್ವರೂಪದರ್ಶನ
ಸಂತಸದಿ ಮಾಡಿಸುತೆ ಶರಣೋತ್ತಮರ ಸರ್ವಸ್ವ ‖ ೧೪ ‖

ಅಪ್ಪ ಸಾಗಿರಲಂತು ಗುರುಕುಲ
ಒಪ್ಪುವಂತೆಯೆ ಇತ್ತ ನಡೆಸಿರ
ಲೊಪ್ಪುವಾ ವಟುವೃಂದವಾಗಮಿಸುತಲಿ ಮೊದಲಿದ್ದ ‖
ಅಪ್ಪನಡಿಕಲಿತೆದ್ದು ಹೊರಡುತ
ಲೊಪ್ಪು ಸ್ನಾತಕರೀತಿಯಿಂ ಕ್ರಮ
ದೊಪ್ಪ ಶಾಂತ ಮಹಾಂತ ರಾಚೋಟೀಶ* ಶರಣಾದಿ ‖ ‖ ೧೫ ‖

ಸ್ವಚ್ಛ ಮನದಿಂದಾಡಿ ಹೊರಡುವ
ಇಚ್ಛೆಯಾಗದೆಯಗಲುತನವಿದು
ಜಜ್ಜನೇ ಜರಿದೆನುವ–ಶರಣರಗಲಿದ ಕಾರಣದಿ† ‖
ನಚ್ಚು ಮೆಚ್ಚು ಮಹಂತರಗಲಿಕೆ
ಸ್ವಚ್ಛ ಪ್ರಾಣದ ಹೋಕು ನೋಡಯ್ಯ§
ಬಿಚ್ಚು ನುಡಿ ಸುಜ್ಞಾನಿಗಳ ಎಚ್ಚರದವನುಭೂತಿ ‖ ೧೬ ‖

ಸ್ಮರಣೆ ಬಾರದೆ ಇರದುದನುಭವ
ಮರೆಯದದು ಸತ್ಸಂಗ ಸೌಖ್ಯವು
ಗುರುಮಹಾಂತ ಪ್ರಸಾದಸ್ವಾಮಿಗಾದ ತಳಮಳತೆ ‖
ಸರಿಯೆ ಲೌಕಿಕ ಸಮತೆಯಲ್ಲದ
ಹಿರಿಮೆ ಚಿರತಮ ನಿರ್ನಿಮಿತ್ಯದ
ಹರುಷ ಘರ್ಷಣ ವಿರಹದುಭಯದ ವೇದನೆಯ ಸ್ಥಿತಿಯು ‖ ೧೭ ‖

ವಿರಹವದು ವಿರಹೆನದು ವಿರಹದ
ಸರದಿ ಪರಿಯೊಂದೊಂದು ಬಿಡದಾ
ವಿರಹವಿರಲ್ಕೆ ಮಲ್ಲಿಕಾರ್ಜುನನರಸಿ‡ ವಿರಹಂತೆ ‖
ಚಿರ ಚಿರಂತನ ಶುಭದ ಮರಳದ
ಗುರಿಗರಿಯೆ ಗಂಗಾಬ್ಧಿ ಸರಸತೆ
ವಿರಹ ಸಾಧಿಪನೋರ್ವನಿದುವೇ ಹುಚ್ಚು ಮೇಲಿದುವೇ ‖ ೧೮ ‖

---

* ಇವರೇ ಶ್ರೀ ಚನ್ನವೀರ ಮಹಾಸ್ವಾಮಿಗಳೆಂದು ನಾಮಕರಣಗೊಂಡು ಚಿತ್ರದುರ್ಗದಜಗದ್ಗುರು ಪೀಠವೇರಿ ಪ್ರಖ್ಯಾತರಾದುದು ದಾಖಲೆಗಳಿಂದ ತಿಳಿದು ಬರುತ್ತಿದೆ,
† ಬ. ವ. ೩೬೯, ೩೭೦, § ಚ. ಬ. ವ. ೧೩೪೭, ‡ ಅಕ್ಕನ. ವ–೨೪೭.

ಬಂಧುಗಳು ಬಹಳಿಹರು ಬಂಧನ
ಹೊಂದಿಸುತೆ ಬರುತಿಹರು ಮುಂದಿನ
ಕಂದಕದಿ ಕೆಡೆಯುತ್ತೆ ನೋಡುತ ನಗಿಸಿ ನಗುತಿಹರು ||
ಸುಂದರತೆ ಸನ್ಮಾರ್ಗ ಗುರುಸುತ
ಬಂಧು ಗಂಧದ ವೃಂದಸಾಗರೆ
ಹೊಂದುವಂತೆಯೆ ಶರಣಗೆಲ್ಲವು ಬಂಧು ಬಳಗೇ ಸ್ಥೈ || ೧೯ ||

ಸ್ವಾರ್ಥ ಮತಿಯೊಳು ನೋಳ್ಪ ಲೌಕಿಕ
ಸ್ವಾರ್ಥವಿರದ ಹಿತಾರ್ಥ ಸಾಕ್ಷಿಕ
ದರ್ಥ ಸಾರ್ಥಕ ಮೂರ್ತಿಯನುಭವಭರಣಿಸುಖಸ್ಫೂರ್ತಿ ||
ಅರ್ಥ ಗರ್ಭಿತಕೀರ್ತಿ ಪಥಿಕ ಪ
ದಾರ್ಥ ಕಳೆದು ಸುಧಾರ್ಥಬೋಧ ಯ
ಥಾರ್ಥ ಜಂಗಮಯಾತ್ರೆ ಪುರ ಶಿವಮೊಗ್ಗೆಯೆಡೆಗವನು || ೨೦ ||

ಬರಲು ಈ ಪುರ ಭಕ್ತ ಮಹಿಮಾ
ಗುರುವರನ ಸತ್ಕರಿಸಲಾ ದಿನ
ಚರಿತನಾಯಕನರಿತನಾ ಗುಡಿಕೋಟೆ ಮನೆತನಕೆ ||
ಭರಿತ ಬಡತನ ಕಳೆದ ಭೂದೊಳ
ಗಿರುವ ನಿಧಿಯನುಗ್ರಹಿಸಿ ಶಾಂತಿಯ
ನಿರಿಸಿ ಸಾಗಿದನಂತು ಸಹಜಾಚಾರ ಸಂಭ್ರಮನು || ೨೧ ||

ತೋಷದಿಂ ಮುಂಪೊರೆದು ಸಾಗಿದ
ನೀಶ ಚನ್ನವಿಲಾಸ ಲೀಲೆ ಪ್ರ
ಕಾಶ ಖಿನ್ನವಿನಾಶ ಶೂನ್ಯ ಸಘೋಷ ಸುವಿಲಾಸ ||
ಮಾಸಿತೆನ್ನದ ಘಾಸಿತೆನ್ನದ
ಪೋಷಣೆನ್ನದ ಕೋಶವಳಿದ ಪ
ರೇಶ ವಿರತಸುಭಾಷ ಶೂನ್ಯಾಕಾಶ ಪರದೇಶಿ || ೨೨ ||

ಮಾಡಬೇಕೆಂಬೆನದ ರೂಢಿಯ
ಗಾಡಿ ಪಿಡಿಯದ ಬಿಡದನಡೆನುಡಿ
ಮೋಡಿ ಬೆಡಗೇತರದ ತೋರದಪಾರ ಧೂಳಿರದ ||
ಪಾಡು ಪವನ ಪ್ರಸಾದ ಪದ್ಧತಿ
ಯಾಡುವಂತೆಯೊ ಬಾಲರಾಟದ
ರೂಢಿ ಮನದ ವಿಹಾರ ಸುವಿಲಾಸತೆಯ ಗತಿಚನ್ನ || ೨೩ ||

ಅಲ್ಲಮನ ಪ್ರತಿರೂಪನಲ್ಲವು*
ನಿಲ್ಲದಯೆ ಮುಂಪೊರೆದ ಜನ
ರೆಲ್ಲರಂ ನೋಡುತ್ತೆ ಸರ್ವಾಚಾರಸಂಪತ್ತಿ ||
ಪಲ್ಲವಿಸಿದೆಯೊ ಇಲ್ಲವೋ ಪರಿ
ಯಲ್ಲಿವ ಪರೀಕ್ಷಿಸುತೆ ಸಾಗಿರ
ಲಲ್ಲಿ ಸಾಗರದುದ್ರಿ–ಗ್ರಾಮದ ಗೌಡ ಸತ್ಕರಿಸಲ್ || ೨೪ ||

ತುಪ್ಪವಾಗಿರಲೇನು ಬೋಧಕೆ
ಕಪ್ಪು ಬಂದಿರಲಿಲ್ಲವನುಭವ
ಸಪ್ಪೆಯಾಗಿರಲಿಲ್ಲ ದೃಷ್ಟಿಯಯೋಗ ಕುಂದಿಲ್ಲ ||
ಅಪ್ಪನಿರೆ ಸಂತೃಪ್ತಿ ಸುಖದಲಿ
ಯೊಪ್ಪು ಪದ್ಧತಿ ಪಿಡಿದ ಜಂಗಮ
ನೊಪ್ಪಿದ ಶಿವಾನುಭವಿ ಶರಣ ಶಿಖಾಮಣಿ ರಸಖಣಿ || ೨೫ ||

ಲೀಲೆಯಿಂದಿರುತಿರ್ದ ಕೆಲದಿನ
ಶೀಲಮತಿ ಸಿದ್ಧಾಂತನಲ್ಲವು
ಲೀಲೆಯಾನಂದದೊಳು ತುಂಬಿರೆ ಭಕ್ತಿರಸಲೋಲ ||
ಕಾಲಕಳೆಯುತೆ ಸ್ವಾಂತಸುಖದಲಿ
ಮೇಳವಾಗುತೆ ಲಿಂಗ ಸುಸ್ಥಿತಿ
ಮೇಲು ಸುಖದೋಳ್ ಚನ್ನವೀರ ವಿಲಾಸ ಸ್ವಸ್ಥಮತಿ || ೨೬ ||

ಈ ಸ್ಥಲದಿ ಏನೆನದ ಪುರವನ
ದಾ ಸ್ಥಲಗಳೇನೆನದ ಪಥಗತಿ
ಜಾಸ್ತಿ ನುಡಿಯೇನೊಂದು ತೋರದ ತೀರ್ಥವಿಮಲಾಂಗ ||
ಸ್ವಸ್ಥಿಕರ ಸುಖದೊಳಗೆ ಲೋಕದಿ
ಸುಸ್ತಿರನುಯೆಂದೆನಿಸಿಕೊಳ್ಳದೆ
ಸಿಸ್ತು ಸ್ಥಿತನುದಯಾಸ್ತವೆನ್ನದೆ ಕೂಡಲಗಿಯೆಡೆಗೆ || ೨೭ ||

ಹೇಶಿತನ ನುಡಿಗಿಂತ ಹೃದಯಕೆ
ಲೇಸು ಶುಭದಾನಂದ ತಿಳಿಸುವ
ಭೂಷಣನು ಹೊರ ಹೊರಟ ಶರಣರ ಲೀಲೆಗೈಯ್ಯುತಲಿ ||
ಸೂಸುತಿಹ ಮೃದು ಹೃದಯ ಬಾಗಿಲ
ಹೇಶಿ ಗುಣರಹಿತಾದವರಿಗಾ
ಕೇಶರಿಯರಸಗಂಧ ತುಂಬುತ ಬಂದ ಹರುಷದಲಿ || ೨೮ ||

* ಶಿ. ದರ್ಪಣ ೨೪/೬.

ಮಾತುಮತಿ–ಕೃತಿ ಸ್ವಾವಲಂಬನ
ದೋತು ದಿನದಾಚರಣೆ ಸೂಚಿಸಿ
ಸಾತಿಶಯ ನಿರುಪಾಧಿ ನಿರ್ಮಲ ಸಚ್ಚಿದಾನಂದ ॥
ರೀತಿಯಿಂ ಸಂಚಾರದಿ ಪರಂ
ಜ್ಯೋತಿ ಪ್ರಮಥರ ಕಂಡು ಶರಣರ
ನೀತಿಯಾರಾರಕ್ಕೆ ಮಧುರ ಮಹಾಂತ ಮನವರಳಿ ॥ ೨೯ ॥

ಶಂಭು ಜಂಗಮ ಬಂದ ಭಾವನೆ
ತುಂಬ ತಾ ತುಂಬಿಹನು ತುಳುಕದ
ಹಂಬಲೇನಿರದ ಹೊರವಸ್ತುಗಳೆಡೆಗೆ ಹಣಿಕಿಡದ ॥
ಅಂಬರಾಂಗಣದೊಳು ವಿಲಕ್ಷಣ
ಹಂಬಲೆನ್ನದ ಸಹಜಮಾಟದ
ತುಂಬಿಹುದ ಪರಪೂಜೆ* ಸಂಗಮ ತುಂಗಭದ್ರೆತಟೆ ॥ ೩೦ ॥

ಮಧುರ ಪರಮಾನಂದವೇ ಜಲ
ಹೃದಯವೇ ತಾವರೆಯ ಹೂವದು
ಮುದದ ಚಿಚ್ಛೇತನದರತಿ ಚಿತ್ಪ್ರಭೆಯೆ ಆರತಿ ಧೂಪ್ ॥
ಅದೆ ನಿಜಾನುಭವವು ಸುಗಂಧಿರ
ಲದುವೆ ಅಷ್ಟ ವಿಧಾರ್ಚನೆಯ ಪರ
ಸದರ ವಿಧಿ ಶಿವಯೋಗಿ ಸಂತಸ ವರ್ಣಿಸುವದೇನು ॥ ೩೧ ॥

ಕಂಗಳವು ಕಿವಿ ಕೈ ಮನವು ಸಹಿ
ತಾಂಗ ತುಂಬಿದ ಬಳಿಕಯೇನಿರ
ದಂಗ ನೋಟಾದಿಗಳೆಯಾತನ ಸಸ್ವರೂಪಾದ ॥
ಇಂಗಿತಾರ್ಥವ ಪೂರ್ಣಪ್ರಜ್ಞನ
ಸಂಗತಿ ಭವಿಗಳೆಂತು ಬಲ್ಲರು
ಸಂಗಮನ ನಿಜದರ್ಶಕನ ಪ್ರಮಥನ ವಿಮರ್ಶಕನ ॥ ೩೨ ॥

ದೇವ ದೇವರ ದೇವ ಜಂಗಮ
ಭಾವಿಯನುಭವಿ ಶರಣಸಂಪದ
ಭಾವದಿಂಪದ ಕಂಪದನುಭೂತಿಯದ ಸೌಖ್ಯನಿಗೆ ॥
ಆವ ಕೀರ್ತನ ಸ್ಮರಣ ಸೇವನ
ಕಾವ ಪೂಜನ ನಮನ ದಾಸ್ಯದು
ದಾವ ಸಖ್ಯಾ ನಿವೇದನೆಂಥದು ಭಾವಕಾದವಗೆ ॥ ೩೩ ॥

* ಕೈ. ಪ. ೪/೨೬–೨೮.

ನೇತ್ರ ನೀರಜ ಬಿಂದು ಭೂಸಿರ
ಪಾತ್ರದೊಪ್ಪುವ ತೇಜನುಡಿ ನಿಜ
ಸೂತ್ರ ಕೂಟದ ಮಾಟ ಮಾಟದ ನೋಟ ನಿಲುಕದಿಹ ||
ಚೈತ್ರ ಚಿರದ ವಸಂತ ಹೃದಯುದ
ಸೂತ್ರದಾಮೃತ ಯೋಗಿವರನಿರೆ
ಖಾತ್ರಿ ಪಾವನವಾಯ್ತು ಪರಿಸರ ಕ್ಷೇತ್ರವೆಂದಾಯ್ತು || ३೪ ||

ಸ್ಥಿತಿಯನಡೆ ಸಂಭಾಷಣೆಯು ಸಹ
ಸ್ಥಿತಿಯು ಸರಸನುಭಾವಿ ಚಿರತವು
ಸ್ಥಿತಿಯು ತಿಳಿರೆ ಚಿದಾತ್ಮ ಸಿರಿಸರ್ವಾಂಗ ಚಿಲ್ಲಿಂಗಿ ||
ಸ್ಥಿತಿ ಸದಾ ಸನ್ನಿಹಿತ ಶೂನ್ಯಕೆ
ಸ್ಥಿತಿಯ ಮಿಂಚೊಳು ಮಿಂಚು ಲಯುಗತ
ಸ್ಥಿತಿಯೆ ತಾನೆಯೆ ತಾನೆ ಸ್ಥಿತಿಯೆ ಎರಡಳಿದ ಸ್ಥಿತಿಯೆ || ३೫ ||

ತಾ ವಿನೋದಕೆ ಲಿಂಗ ಜಂಗವು
ತಾ ವಿನೋದಕೆ ಶರಣ ಸಂಭ್ರಮ
ತಾ ವಿನೋದಕೆ ರೂಹು ನಿರಿ ನಿಬ್ಬಯಲು ಕಿರಣಿರದ ||
ತೀವಿರಲ್ ಇವಗಾವ ಕುರುಹದು
ಆವ ಕುರುಹದು ಯಾವ ತೆರನದು
ಆವ ಸ್ವರವದು ನುಡಿನಡೆಯಿರದ ಪರಿವರಣ ಬಗದ || ३೬ ||

ಬತ್ತಲಾಗಿರಲೇನು ವಾಕ್ಯದು
ತತ್ವಮಸಿಯಿಂದತ್ತ ತಾನಿರ
ಲಿತ್ತ ಇನ್ನೆತ್ತಳಿದಯೋಗ* ವಿರಾಗಸ್ವರಯೋಗ ||
ಕತ್ತಲೆಗೆ ಶಬ್ದೆತ್ತ ಬೆಳಕಿನ
ಸ್ವತ್ತು ಒಳಗಿಹುದತ್ತುಭಯು ನುಡಿ
ಸತ್ತು ಬರಿಯ ಸುಚಿತ್ತ ನಿತ್ಯನಿರಂಜನನ ಗತ್ತ || ३೭ ||

ನೋಡೆನೆಂದರೆ ನೋಟ ಸಮರಸ
ಕೂಡೆನೆಂದರೆ ಕೂಟ ನಿಬ್ಬೆರ
ನೋಡಲಿಲ್ಲದ ನುಡಿಸಲಲ್ಲದ ಕೂಟದಪ್ರತಿಮ† ||
ನಾಡೆ ಬಯಲ ಸದಾತ್ಮನಾದ್ಮಯ
ಗೂಡಿಯೊಳಗೋಲಾಡುತಿರ್ದೊಡೆ
ನೋಡಿ ಬೆಳಗಿನ ಬೆಳಗು ನಿಜ ನಿರ್ಭಾವಿ ನಿಲವೊಳಗು || ३೮ ||

---

* ಸಿ. ವ. ೫೯೯, † ಸಿ. ವ. ೬೧೮.

ಮೇಳವಿಸಿ ಕೊನೆ ಬಯಲನಪ್ಪಿದ
ಗಾಳಿ ಗಂಧವನಪ್ಪಿದಂತೆಯೊ*
ಬಾಲಲೋಚನುಪಾಧಿಯಿರದಾ ಬೆಳಗ ಬೆಳಗಪ್ಪಿ ||
ಮೇಳವಿಸಿ ಬಯಲಾಂಗನಾದನು
ಗಾಳಿಯೋಲ್ ನಿರ್ವಯಲನಾದನು
ನಾಳೆನದೆ ಬಯಲಲ್ಲಿ ಬಯಲಾದವನು ಶರಣಪ್ರಿಯ ||೩೯ ||

ಪ್ರಾಣಲಿಂಗದಿ ಕೂಡಿ ಸರಳದಿ
ತಾನು ಸರಸದಿ ಭಾವಲಿಂಗಕೆ
ಸಾನುಮಯದಿಂ ಸಹಜದಿಂದಿವ ಬಯಲಗೊಂಡಿರಲು ||
ಏನುಕಾಣದ ರೀತಿ ಜನಕೇ
ನೇನು ತೋರದೆ ಸುಮ್ಮನಿರೆ ತಂ
ತಾನೆ ಮಂಗಲಪಾಡುವಂತೆಯೊ ಮೇಘರಾಗದಲಿ || ೪೦ ||

ಬಯಲುಗೊಂಡಿಹ ಬಯಲಭೂತಿಯ
ನಯ ವಿನಯದಿಂ ಸೇವೆಮಾಡುತೆ
ಸುಯ ಸುಯನೆ ಮಳೆಗರೆದು ತಾ ಸಂತುಷ್ಟಿಗೊಂಡು ಘನ ||
ಜಯ ಜಯತುವೆಂಬಂತೆ ಭೂಜಲ
ಮಯತೆಗೊಳ್ಳುತ ತುಂಗೆಭದ್ರೆಯು
ಬಯಲ ಕುರುಹವ ಮಂಚಪಾವುಗೆ ತನ್ನೊಡಲಿನೊಳಗೆ || ೪೧ ||

ಚಿನ್ನಿಧಿಯ ಕಂಡಂತೆ ಹರ್ಷದಿ
ಚನ್ನೆ ಶಿರಧರಿಸುತ್ತೆ ಬಂದಳು
ತನ್ನ ಪಾಪವದೆಲ್ಲ ಸ್ಪರ್ಶದಿ ಭಸ್ಮವಾಯ್ತೆಂದು ||
ಮುನ್ನ ನಿಶ್ಚಿತ ದಿನದಿ ಕಾಯುವ
ದನ್ನೆ ಲಕ್ಷಿತ ಶರಣ ಸಂಕುಳ
ಸನ್ನಿಧಿಯ ನುಡಿ ಕುರುಹು ಕಾಣುತ ಹಿಡಿಯುತಾಕ್ಷಣದಿ || ೪೨ ||

ಶರಣಲಿಂಗವನಪ್ಪುವಂತೆಯೊ
ಕುರುಹು ಕಂಗಳ ಕಂಡು ಸಂತಸ
ನುರೆ ಸುರಿದುದಾಲ್ಹಾದ ತೆರೆಯಿಂ ತಂದು ಶ್ರೀ ಮಠದಿ ||
ಇರಿಸಿ ತೃಪ್ತಿಯ ಪಟ್ಟೆ ಒಳಗದು
ದೊರೆತ ಚಿರತಮುಗುಪ್ತ ಘನತೆಯ
ಸ್ಮರಿಸಿ ಗುರುಕರುಣಾಂಗ ಹಿನ್ನಲೆಯಾಜ್ಞೆ ಮುನ್ನಡೆಗೆ || ೪೩ ||

* ಅದೇ ೬೪೪.

ಲಿಂಗನಾಯ್ಕನ ಹಳ್ಳಿ ಮಠದೊಳು
ಸಂಗಶೋಭಿತವಿಂದು ಸಹಿತ ಸು
ಧಾಂಗಮಯನಾದವನ ಸ್ಥಾವರವೇಕೆನುವ ನುಡಿಯು ||
ಸಂಗಮನ ರಸರಂಗ ಪೂರ್ಣದು
ಜಂಗಮಾರ್ಪಣೆಯರ್ಪಣನುಭವ
ವಾಂಗ ಸಂಸ್ಕೃತಿ ನೈಜ ಜಂಗಮ ತೃಪ್ತಿಕ್ರಿಯೆಯಿಂದ || ೪೪ ||

ಜಂಗಮನು ಬಯಲಾಗಲಾ ಬಳಿ
ಕಾಂಗಣದಿ ಗದ್ದುಗೆಯ ಮಾಳ್ಪುದು
ಸಂಗಮನ ಶರಣರಿಗೆ ಸರಿಯಲ್ಲೆಂಬ ತತ್ವವನು ||
ಲಿಂಗಮಯ ಶ್ರೀ ಚನ್ನವರ ಭೂ
ರಂಗಕದು ತೋರಿಸುತ ತೋರುವ
ಪುಂಗವಗೆ ಸಹಜಾಚಾರಣೆಯಿರಲೆಂಬ ಸಿದ್ಧಾಂತ || ೪೫ ||

ಘನದ ಮರೆಯ ಪ್ರಕಾಶದಂತೆಯೊ*
ಮನದ ಮರೆಯ ಚಿದಾತ್ಮದಂತೆಯೊ
ಗುಣದ ಮರೆ ಘನ ಚರಿತೆ ಹಣ್ಣಿನೊಳಗಿನ ರಸದಂತೆ ||
ಎಣಿಕೆಗಾಗದ ಮಹ ಮಹಂತನು
ಕಣಕಣದಿ ತುಂಬಿಹ ನಿರೀಕ್ಷಣೆ
ಗುಣವನಿರಿಸಿದ ಪರಮ ಪುರುಷರು ಮಾತ್ರ ತಿಳಿಯುವರು || ೪೬ ||

ಒಳಗೆನೋಡಿರೆಯೊಳಗೆ ಬಯಲಂ†
ಕಳೆದು ನೋಡಿರೆ ಹೊರಗೆ ಬಯಲಂ
ಸುಳಿದು ನೋಡಿರೆ ಬಯಲೆ ನೆನೆಯಲು ಮನವೆ ತಾ ಬಯಲು ||
ಹೊಳೆದ ಹೊನಲೊಳು ಬೆರೆದು ಬೆರೆತಿರೆ
ತಿಳಿಯದಿಹ ತಾಂ ಬಯಲು ನೀಂ ಸಹ
ಕೊಳಲು ಸರಿಗಮವೆಲ್ಲಿ ಬಯಲೇ ಬಯಲು ಮರೆವರಿವು || ೪೭ ||

ಸುಟ್ಟಿಹುದ ಸುಡುವದೇನಿದೆ
ಗಟ್ಟಿಗೊಂಡಿರೆ ಮುಟ್ಟುದೇನಿದೆ
ಮೆಟ್ಟಿಹೋಗಿರೆ ದಿಟ್ಟಿಕೆಳಗಡೆಯಿಡುವದೇತರದು ||
ತೊಟ್ಟಿಕಣಗಳು ಮೂಲಗಟ್ಟಿಡೆ
ಒಟ್ಟುಗೂಡಿರಲದರ ಚಿಂತನ
ಹೊಟ್ಟುತನಗೇಕಯ್ಯ ಮಾಡಿರೆ ಸತ್ಫಲೇನಯ್ಯ || ೪೮ ||

---

* ಸಿ.ವ. ೬೧೯, † ಸಿ.ವ. ೬೪೭.

ಇತ್ತ ಶಿವಶಿವೆ ಶೋಭಿಸಿರಲಡೆ
ಹೊತ್ತಿನೊಳು ಭಲೆ ಚನ್ನವೀರನ
ಸತ್ವತೇಜನ ಸಾಹಿತ ಸ್ಮರಿಸುತ ರಹಿತ ಸ್ಪರ್ಧೆಯದ ॥
ಹತ್ತಿರ ವಿರಾಜಿಸಲುಪವೆ ನೋ
ಡುತ್ತ ತೃಪ್ತಿಯತಂದಳಾ ನುಡಿ
ಯುತ್ತ ಮಾತಿದು ಸತ್ಯವೆಂದಳು ಮುಗುಳೆ ಮಧುರೆಯೊಳು ॥ ೪೯ ॥

ಪರಶಿವನು ನುಡಿದಾಗ ಕಮಲೆಗೆ
ಮರಣವದು ಭವಿಗಳಿಗೆ ಬರ್ಪುದು
ಶರಣರಿಗೆ ಬಹುದೂರದಾ ನುಡಿ ಸ್ಥಲಗಳನು ಮೀರಿ ॥
ಬೆರೆಯುತೆರಡೊಂದಾದ ಕಾರಣ
ಪರಮ ಪ್ರಮಥರಿಗೆಂತು ಆಸ್ವರ
ನರಿಯುವದು ಸೀಮಿಲ್ಲ ಸಾವಿಲ್ಲದವರಲ್ಲಿ ತಿಳಿ ॥ ೫೦ ॥

ಯೋಗಿಣಿಗೆ ನುಡಿಯುತ್ತೆ ಚಿದ್ರಸ
ಯೋಗಲೀಲೆಯು ಒಮ್ಮತಾಯಿತೆ
ತ್ಯಾಗಮಯ ವರಲೋಲ ಲಲಿತದ ಜಂಗಮನೆ ಇಹನು ॥
ಈಗವನು ನಿಜದೇನು ತಾನೇ
ನಾಗದಾ ಬರಿ ಬಯಲ ಚೇತನ
ಭಾಗಿಸದ ಬರಿ ಸರ್ವವಂತರ್ಭೂತವೆನಲು ಸತಿ ॥ ೫೧ ॥

ಸೊಗಸುತನವಿದು ನೋಟಕೆಲ್ಲಕೆ
ಬಗೆ ಹರುಷ ಸಹಜನುಭವಕೆ ಈ
ಸೊಗಸುವಾಯ್ತೆನಗೀವನ ಲೀಲಾಚಾರ ಸುವಿಚಾರ ॥
ಬಗೆಯ ಬಂಧುರ ಚಿರದು ಚಿರತಮ
ಸೊಗಸುಪಟ್ಟೆ ಗುಹೇಶ್ವರನವೊಲು
ತಾಗಲುಯೆನಗೆನಿತಿರದ ಸುಖವೆನೆ ನಗುತ ನಾಗಧರ ॥ ೫೨ ॥

ನುಡಿದ ಮತ್ತೆಯೆ ಪ್ರಮಥ ಪುಂಗವ
ರೊಡನೆ ಚಲ್ಲಾಟವದು ಸಲ್ಲದು
ನುಡಿಯದಾ ವಡಲಾಗ್ನಿ ಗೂಢರು ನಂಬಿರುವ ಕುಲಕೆ ॥
ಒಡನರಳಿ ರಸಗುಂಪು ಪರಿಮಳ
ಕೊಡುವವರು ಭವ ಬವಣೆ ಹರಿಸದೆ
ಬಿಡದವರು ಚಿಚ್ಛೇತನದಿ ಪೂರ್ಣರೆನೆ ಸಂತಸಳು ॥ ೫೩ ॥

ಶುದ್ಧವಹುದಂಕಲಗಿಯಡವೀ
ಸಿದ್ಧ ಚರಣಾಶ್ರಯದಿ ಸ್ಥಾಪಿಸ
ಲೆದ್ದ ಪುರ ಮರೆಗುದ್ದಿ ಮಠವಿದುವಡವಿಸಿದ್ಧೇಶ ||
ಬದ್ದಿದಕೆ ಗುರುವಂಶದೊಳು ಕ್ರಮ
ಬದ್ದ ಗುರು ಗುರುಪಾದ ಕೃಪೆಯಿಂ
ದೆದ್ದ ಗುರುನಿರುಪಾಧಿ ಕೃತಿಯೊಳ್ ಸ್ಥಲವು ಹದಿನಾಲ್ಕು || ೫೪ ||

ಅಂತೂ ಸ್ಥಲ ೧೪ಕ್ಕಂ ಪದ ೫೪ಕ್ಕಂ ಒಟ್ಟುಪದ ೮೩೦ಕ್ಕಂ
ಮಂಗಲಂ.

ಓಂ

## ಹದಿನೈದನೆಯ ಸ್ಥಲ

**ಸೂಚನೆ–**

ಲಿಂಗನಾಯ್ಕನ ಹಳ್ಳಿಯೊಳಗಿನ
ತುಂಗ ಪರಮ ವಿರಕ್ತ ಮಠದ ಪ
ದಾಂಗ ಜಂಗಮ ಸತ್ಪರಂಪರೆ ವಿವರವಿಹುದಿಲ್ಲಿ ||
ಹಿರಿಮೆಯಾಗಮ ನಿಗಮಗಮ್ಯರ
ಶರಣ ಸ್ವರ ಸಾಹಿತ್ಯ ವಿವರವ
ಸರಸ ಚಂಪೂ ರಗಳೆ ಷಟ್ಪದಿ ತ್ರಿವಿಧ ವೀಥಿಯೊಳು ||
ಸಿರಿ ಧರಮ ಸಾಹಿತ್ಯ– ಸಂಪುಟ
ಬರೆದ ಸತ್ಕವಿ ಶರಣ ಮಹಿಮರ
ಚರಣ ಸ್ಮರಿಸುತುಸುರುವೆ ಹದಿನೈದನೆ ವಿಲಾಸವನು || ೧ ||

ವಂಶವೆನೆ ಬಿದಿರೆನ್ನುವದು ಗುರು
ವಂಶವೆನೆ ಚಿದ್ವಂಶ ತಿಳಿರಿವ
ರಂಶವಿದು ವಿಧ್ವಂಸಗೊಳಿಸುವದೆಲ್ಲ ಭವದಘವ ||
ಹಂಸ ಲಕ್ಷಿತರಿವರೆ ಪರತರ
ವಂಶಿದು ನಿರಾಭಾರಿಗಳು ನಿ
ರ್ವಂಶಿಕರೆನದ ಪರತರಾಲ್ಲಮವಂಶ ಸದ್ವಂಶ || ೨ ||

ಶ್ರೀಮದಲ್ಲಮ ಶರಣ ಶೂನ್ಯದ
ನೇಮ ನಿಷ್ಠಿತರಿವರು ಬಸವನ
ಪ್ರೇಮಿ ಜಂಗಮರಾರ್ಯ ಕಾಯಕ ಕೃತಿಯೊಳಾರಾಮಿ ||
ಕೋಮಲತೆಯ ಸಧಾಮ ಚಿತ್ಸುಖಿ
ಸೋಮಧರ ತತ್ವಾಗಮದಿ ವಿ
ಶ್ರಾಮಿ ಸತ್ಪಥ ಪ್ರೇಮಿ ಸರ್ವಾಚಾರ ಸಂಪತ್ತಿ || ೩ ||

ಹೆಣಿಕೆ ಹೆಣಿಕೆಯ ಕುಣಿಕೆಯಂತಿಹ
ಝುನತೆಯೆಂತೈದಾರ ಮೂಲ್ಯದ
ಗುಣಿಕೆ ಗ್ರಹಿಸಿರೆ ವೀರಶೈವಾಚಾರದೇಕತೆಯ ||
ಘನತೆಯಾ ಚಿಲಕತ್ತು ಧರಿಸಿರೆ
ಹಣಿಕಿಡಲದು ಮತ್ತೇನು ಕ್ಷಣಹೊರ
ಗುಣಿತನೆಡೆ ಕುಣಿತೇನುಬಾರದು ಲೋಕಪರಲೋಕ || ೪ ||

ಸೂಚಿಸುತ ಭೂಪಾಲಕರಿಗೆ ನಿಜ
ದಾಚರಣೆ ತಾನಡೆದು ನಡೆಸುವ
ದಾ ಚಿರಂಜೀವಿ ಕುಲ ಶರಣಾಳಿಗದು ಸಾಧಾರ ||
ರೇಚಯನುಪಮೆಯ ಸುಪಥ ಸಂ
ಕೋಚವಿಲ್ಲದೆ ಸಾಧಿಸೆನ್ನುತ
ಸೂಚಿತಾಗಮ ವಚನವೇದ ವಿಚಾರ ಪ್ರಸ್ತಾಂಗ || ೫ ||

ಹೊಂದಿ ಬರುತಿಹರಂದಿನಿಂ ಬಿಡ
ದಂದು ನೋಡುತಲಿಹೆವು ಸತ್ಕೃತಿ
ಹೊಂದಿಹುದದಾನಂದ ಧ್ಯೇಯತೆ ಪರಹಿತಾನಂದ ||
ಹೊಂದಿ ತಿಳಿಯೆ ಪ್ರಸಾದ ಸ್ವಾಮಿಗ
ಳಂದು ಬಳಿಕದು ಗಂಧವಂಶ ಪ
ದಂದದೊಳು ನಂಜುಂಡ ಶಿವಯೋಗಿಗಳೆ ಮೂರನೆಯ || ೬ ||

ಪರಮ ಚರಿತರ ಬಳಿಕ ನಾಲ್ಕನೆ
ಸರಿತವಹ ಗುರುಲಿಂಗ ಸ್ವಾಮಿಗ
ಳರಿಯುವದು ಸಂಸ್ಕೃತಿ ತಮ್ಮೊಳು ಕಾಯ್ದುಕೊಂಡ ಗತಿ ||
ಇರುವ ಜನ ಸಂಪರ್ಕದೊಳು ತಾಂ
ಬರದಿರಲು ಹೆಚ್ಚೇನು ತಿಳಿಯದು
ಪರಿಯದೈದನೆ ಬಸವಲಿಂಗ ಸ್ವಾಮಿಗಳು ಅಗ || ೭ ||

*ಬನ್ನಿಮಟ್ಟಿಯ ಪುರದವರು ಸಂ
ಪನ್ನ ನಿಜದಾಚಾರ ಜಂಗಮ
ಮುನ್ನಡೆಸಿದರು ಶರಣ ಸಂಸ್ಕೃತಿ ಮತ್ತೆ ಚೇತರಿಸಿ ||
ಚನ್ನ ಕುಡಿ ಬೆಳೆಯಿಸುವ ಸಮಯದಿ
ಚಿನ್ನ ಚರವರ ಹಾನಗಲ್ಲದ
ಸನ್ನುತ ಕುಮಾರ ಶಿವಯೋಗಿಗಳಿಲ್ಲಿಯಾಗಮಿಸಿ || ೮ ||

---

* ಚ. ಶಿ. p-೯೨.

ಮಂಗನಾಯ್ಕನ ಹಳ್ಳಿಯೆಂಬುವ
ರಂಗವಂ ನಿಜದಳಿಸಿ ದಾಖಲೆ
ಲಿಂಗನಾಯ್ಕನ ಹಳ್ಳಿ ನಾಮವನಿರಿಸಿದಾ ಶ್ರೀಯ ||
ಮಂಗಲಾತ್ಮಗೆ ಸಲ್ಲುವದು ಥ
ರ್ಮಾಂಗ ಪುನರುಜ್ಜೀವ ಪ್ರೀಯರೇ
ಮಂಗಲದ ಶಿವಯೋಗಮಂದಿರ ಸ್ಥಾಪಕರಿವರೂ || ೯ ||

ಆರನೆಯ ಪೀಠಾಧಿಪತಿಯು ಸು
ಚಾರುಮತಿ ತಿಪ್ಪಯ್ಯರಾ ಚ
ಳ್ಳೆರಿ ತಾಲೂಕದಲಿ ಪುರದೊಡ್ಡೇರಿಯವರಿವರು ||
ಚಾರು ಜಂಗಮ ತತ್ವ ಸಾಧಿಸು
ತಾರು ಸ್ಥಲದ ವಿಚಾರವಂತ ಸ
ದಾರವಿಂದ ಸಲಕ್ಷ್ಯದಿಂದೀ ಮಠ ಸುಧಾರಣೆಯು || ೧೦ ||

ಮಾಡಿಸಿದ ಮಹಮೂರ್ತಿ ಚರಣದಿ
ನಾಡಿನ ನಿರಾಭಾರಿಗಳು ನುಡಿ
ಯಾಡಿ ಹೋಗಲು ಬರುತಿಹುದ ಪ್ರಖ್ಯಾತ ಚರಣದಡಿ ||
ನಾಡೆ ಜಂಗಮ ತತ್ವ ಸಂಪದ
ಕೂಡುತಲಿ ಲಿಂಗೈಕ್ಯರಾಗಲು*
ನಾಡೆ ಕರುಣಾಮೂರ್ತಿ ಸದ್ಯದ ಹೃದಯ ಸುಧೆಸ್ಫೂರ್ತಿ || ೧೧ ||

ಸದ್ಯ ಶೋಭಿತರಿಹರು ಭಕ್ತಾ
ರಾದ್ಯ ಮೂರ್ತಿಗಳೆಂದು ಕಂಡಿರೆ
ಚೋದ್ಯವೆನಿಪುದು ವಿನಯಗುಣಗಂಭೀರ ಸಾಕಾರ ||
ಸದ್ಯ ನೈಜಾಚರಣವರ ನಭ
ಮಧ್ಯ ಶೋಭಿತ ಪೌರ್ಣಿಮೆಯ ಶಶಿ
ಚೋದ್ಯವಿಹುದೀ ಕಾಲದೊಳು ನೈತಿಕತೆ ಹೃದಯಾಂಗ || ೧೨ ||

ಚಾರುಪುರ ಹಾವೇರಿ ಭಾಗದ
ಊರು ಗುತ್ತಲದೊಳಗೆ ಪರಮಾ
ಚಾರದ ಚರಂತಿಮಠ ಚನ್ನಬಸವಯ್ಯ ಪತ್ನಿಯಳು ||
ಚಾರುಮತಿಕೃತಿ ಬಸವಲಿಂಗಮ
ನೂರು ಸನಿಹದ ಬನ್ನಿಮಟ್ಟೆರೆ
ಭೂರಿ ಭಕ್ತಿಯ ಲಿಂಗನಾಯ್ಕನ ಹಳ್ಳಿ ಮಹಿಮರೊಳು || ೧೩ ||

* ೧೯೪೫ ಇಸ್ವಿ.

ಇರಿಸಲಾ ಕೃಪೆಯಿಂದೆ ಜನಿಸಿದ
ಪರಮನೀತನು ಕ್ರಿಸ್ತ ಶಕೆಯದ
ಸರದಿ ಹತ್ತೊಂಬತ್ತುನೂರಾ ಮೇಲೆಯೆಂಟರೊಳು ||
ಪರಮವರ ಜಡಿಯಪ್ಪ ನಾಮದಿ
ಚರಿತ ಪೂರ್ಣರೆ ಮುಂದೆ ಗುತ್ತಲ
ಪುರ ಚರಂತಿ ಮಠಕಧಿಪತಿ ಮಾಡುದಕೆ ಬಯಸುತಲಿ || ೧೪ ||

ಮುಂದೆ ಹಾವೇರಿಯೊಳು ಸಂಸ್ಕೃತ
ಗಂಥವಂ ಪಡೆಯಲ್ಕೆ ಕಳಿಸಿರ
ಲಂದು ಮಹ ಶಿವಬಸವ ಸ್ವಾಮಿಗಳವರ ಸೇವೆಯೊಳು ||
ಅಂದಿರುತ ತಾ ಯಾದಗಿರಿಯೊಳು
ಮುಂದೆ ಕೆಲದಿನ ಕಳೆದು ಬಳಿಕಾ
ನಂದ ಹುಬಳಿಯ ಮೂರುಸಾವಿರಮಠದಿಯಾಧ್ಯಯನ || ೧೫ ||

ನಡೆಸಿ ಸೇವಾ ಭಾವದೊಳು ಎಡೆ
ಬಿಡದೆ ಫಲ ವಿನಿಯೋಗಿಸುತಲಾ
ಕಡೆಗೆ ಮೃಡಗಿರಿಯನ್ನದಾನೀಶ್ವರರ ನೇತೃತ್ವ ||
ಪಿಡಿದು ಮಲ್ಲನಕೇರಿ ಸತ್ಪದ
ದೊಡೆಯ ಮಹ ಗುರುಲಿಂಗಶ್ರೀಗಳ
ಪಿಡಿಯುತ ನಿರಾಭಾರಿ ಚರ ಪಟ್ಟಾಧಿಕಾರಿಗಳು || ೧೬ ||

ಚನ್ನವೀರ ಸುನಾಮ ಪಡೆಯುತ
ಮನ್ನಿತರು ಸಹಯೋಗ ಮಹತರ
ಶೂನ್ಯ ಪೀಠಾರೋಹಣಂ ಮಾಡುತಲಿ ಶ್ರೀಮಠದ ||
ಮಾನ್ಯದಿಂ ಮುನ್ನಡೆಸುತಲಿ ಸರ
ಉನ್ನತಿಗೆ ನಿಜಕಾರಣಿಹರೈ
ಚಿನ್ನ ಸರಳತೆ ನೈಜ ಜಂಗಮರಾಗಿ ಚರರಾಗಿ || ೧೭ ||

ನಾಡ ಸಂಚರಿಸುತ್ತೆ ಭಕ್ತಿಯ
ಮೂಡಿಸಿ ಸಮಾಜದೊಳು ಚೇತನ
ಮಾಡುತಿಹರೈ ಶಾಂತಿಸಾಗರದೋತು ತಾವಾಗಿ ||
ನಾಡಿನೊಳು ಹಲವರಿಗೆ ಕರುಣದಿ
ನೀಡುತ ನಿರಾಭಾರಿ ಪಟ್ಟವ
ನಾಡೆ ಶ್ರೀ ಮುಂಡರಗಿ ಸನ್ನಿಧಿ ಸಹಿತ ನೀಲ್ಗುಂದ || ೧೮ ||

ನಿಷ್ಠೆಯುದ ಹೊಸರಿತ್ತಿ ಹೊಳಲಿನ
ಶ್ರೇಷ್ಠ ಮಲ್ಲನಕೇರಿ ಹೊಳೆಗುಂ
ದೀಷ್ಟ ಮೇಣ್ ಕುರವತ್ತಿ ಹಿರೆ ಸಿಂಧೋಗಿ ಮೂರ್ತಿಗಳು ||
ಇಷ್ಟನಂ ತಾಂ ಪಡೆದು ಪೂರ್ಣರು
ತುಷ್ಟಿ ಪರಮ ಪ್ರಸಾದ ನಿಲಯದಿ
ದೃಷ್ಟಿ ಪೂರ್ಣರು ಕೋಪವಂಟದ ತಪದ ಜಂಗಮನು || ೧೯ ||

ಕಿರಿಯೆನದು ವಂಕುಶವು ವಜ್ರವು
ಕಿರಿಯೆನದು ಕಿಡಿಜ್ಯೋತಿ ನೆನೆಯುವ
ಸಿರಿ ಮನವು ಕಿರಿದೆನದು ಶರಣರ ಮಹಿಮೆ ಸಹಿತಾಗಿ ||
ಕಿರಿದೆನದು ಗುರುಲಿಂಗ ಜಂಗಮ
ಕಿರಿಯರೆನದಾಚಾರ ಪೂರ್ಣರು
ಬರಲವರು ಬಾರೆನದ ಮನ್ನಿಪ ಚನ್ನಚಿನ್ನಮತಿ || ೨೦ ||

ಶರಣರೊಳು ತಾ ಭೇದಮಾಡದ*
ಶರಣ ಶರಣೆಂದೆನ್ನಿ ಬೋಧಿಪ†
ಶರಣ ಗಣವರ ಪುಣ್ಯವಿಲ್ಲದೆ ಕಾಣಿಸರು ಎನುತ§ ||
ಶರಣರಂ ಲಿಂಗೆಂದೆ ನಂಬುತ‡
ಶರಣರಾ ಜೊತೆಗೂಡಿ ಪಾಡುತ□
ಶರಣರಾ ಬರವೆನಗೆಯಸು ಜೀವಾಳವೆನುತಿಹರು+ || ೨೧ ||

ಸುಮ್ಮನಾನಿರಲೇನು ತಾ ನಿಜ
ಸುಮ್ಮನಿರುವಿಕೆಯಿಂದೆ ನಿಜಸ್ಥಿತಿ
ನೆಮ್ಮಿಬೋಧಕೆ ಬರುವ ಶರಣರ ಕಂಡು ಸಂತೈಸಿರಿ ||
ನಮ್ಮವರೆ ಯೆನ್ನುತಲಿ ನಗುಮುಖಿ▣
ಸುಮ್ಮ ಶರಣರಲೇಸೆ ಲೇಸೆನು
ತೊಮ್ಮತದ ಪಥಪಥಿಕ ಜಂಗಮ ಚನ್ನವೀರೇಶ || ೨೨ ||

ರಾಗ ತಾಳ ಪ್ರಾಸ ಛಂದ ಪ್ರ
ಯೋಗದಾಲಂಕಾರ ಶಾಸ್ತ್ರವಿ
ಭಾಗ ವಿವರೆನಗಿಲ್ಲ ಕ್ರಮದಭ್ಯಾಸ ಮೊದಲಿಲ್ಲ ||
ಮಾಘ ಮಾಸದ ಹಕ್ಕಿಗಾವಲ
ದಾಗ ರೈತನ ಹಾಡ ಹಗಲಿನ
ಭಾಗ ಭಾವನೆಯೋಗ ರಾಗದು ಚನ್ನವೀರೇಶ || ೨೩ ||

* † § ‡ □ + ▣ ಬ. ವ. ೨೪೯, ೨೫೮, ೨೬೭, ೨೭೩, ೨೭೫, ೩೩೬, ೪೦೭.

ಪಿಡಿದ ಷಟ್ಪದಿಯಯುಡುಗೆ ಮಡಿಯೊಳು
ಕುಡಿಯು ಕಾಣುತ ಬೆಳಿದು ಹೊಳೆಯುತ
ಕಡೆಗೆ ತನೆರಸಗಾಳು ತುಂಬಿಹ ಪಕ್ವಫಲಮಿತಿಯು ||
ಕುಡಿಯೊಡೆದ ಮುಂದೇಳು ತಿಂಗಳ*
ಮುಡಿದಿರಲು ಕೊನೆಪಂಕ್ತಿ ಮಾಘದ
ನಡೆಯು ಶುದ್ಧ ಚತುರ್ದಶಿ ತಿಥಿ ಪುನರ್ವಸುವೆ ತಾರೆ || ೨೪ ||

ಈ ಮಿತಿಗೆ ಜಾನ್ಮಟ್ಟಿ ಗ್ರಾಮಕೆ
ನೇಮದಿಂದಿಹ ಬಸವ ಜಾತ್ರೆಗೆ
ನೇಮದಿಂ ಬಂದಿರಲು ಸಾಗಿದ ಸಂಪ್ರದಾಯದಲಿ ||
ಈ ಮಹತೆ ದಾಸೋಹ ಕಾಯಕ
ರಾಮಣೀಯಕ ಸೇವೆಯೊಳಗಾ
ಶ್ರೀ ಮಹನಿರಾಭಾರಿ ಸದ್ಗುರು ಕೃಪೆಯೊಳಗೆ ಪೂರ್ತಿ || ೨೫ ||

ಈ ವಿಲಾಸ ಸಮಾಪ್ತಿಯಾಗಲ
ದಾವಯೋಗವೊ ತಿಳಿಯದೆನಗೆ ಸ
ದಾವದಾಧ್ಯಾತ್ಮಕತೆಯದ ಸಂಬಂಧವೋ ಏನೋ ||
ಭಾವದಾಗಸದೊಳಗೆ ಚನ್ನನೆ
ತೀವಿಹರಡಿ ವಿಚಾರಸಾರ್ಥ ವಿ
ಭಾವ ವಿವರನುಭಾವ ಸ್ವರಜಲ ಹರಿಸಲಿದು ಪೂರ್ತಿ || ೨೬ ||

ಅಚಲ ಸುದೃಢ ನಿತ್ಯ ನಿರ್ಮಲ
ವಚನ ವೇದಾಗಮದ ಶ್ರುತಿಥರ
ರುಚಿರ ಪಥಗತಿ ಲೋಕಸಂಗ್ರಹ ನಿಲವ ನಿಶ್ಚಿಂತ ||
ಶ್ರುತಿ ನಿರಾಭಾರಿ ವಿಲಾಸವ
ಶುಚಿ ಗುರುಪರಂಪರೆಯ ಸಪ್ತಮ
ರುಚಿ ನಿರಂಜನದಡಿಯೆ ಓದಿದ ಬಳಿಕ† ಪ್ರಕಟಿತವು || ೨೭ ||

ನೋಡಿ ನಡೆದ ಪ್ರಭಾ ಮಹಾಂತರ
ರೂಢಿ ಲೀಲಾ ಶಬ್ದಮಿತಿ ನುಡಿ
ಮೂಡಿರುವ ಸುವಿಲಾಸ ನಿರಂಜನರು ನಿತ್ಯದಲಿ ||
ಹಾಡಿಯಾಡುತೆ ತಮ್ಮ ಚಿತ್ರಭೆ
ಗೂಡಿ ಹರಡುತೆ ಕೃತಿಗೆ ಚೇತನ
ನೀಡಿ ಸಲಹುವರೆಂದು ಹಂಬಲ ಅಡವಿಸಿದ್ಧೇಶ || ೨೮ ||

---

* ೧-೨-೧೯೮೮, † ೧೫-೮-೧೯೮೮ (ಮುಂಡರಗಿಯಲ್ಲಿ).

ಶಿವನು ಕೊಟ್ಟಿಹ ವಸ್ತುಗಳ ತಾ
ಭುವನದೊಳು ಸಂಗ್ರಹಿಸಿ ಸಾಗಿಸು
ತವನೆ ಪದ್ಧತಿ ಪಿಡಿದು ಪಾಕವ ಮಾಡಿಹುದ ರುಚಿಯ ||
ಸವಿ ಸವಿಯುತುಂಬಂತೆಯನುದಿನ
ಭವಹರಣ ಸುಖಕರಣ ಚನ್ನನ
ಸವಿಯ ಸತ್ಪಥಿ ಪಾತದಂಬಲಿ ಹಂಬಲಗೆ ಶರಣು || ೨೯ ||

ಫಲಶೃತಿ

ಈ ವಿಲಾಸವ ಕೇಳಿದವರಿಗೆ
ತೀವಿ ಸೌಖ್ಯತೆ ತತ್ವ ಸಂಪನು
ಭಾವದಿಂ ಸದುಹೃದಯ ಮಾನಸದೊಳಗೆ ನಿಜತುಂಬಿ ||
ಜೀವ ಭಾವನೆ ಮರೆತು ಚಿರತವು
ದೇವ ಜಂಗಮು ತಾನೆಯಾಗುವ
ಪಾವನತೆ ಪಡೆಯುವರು ಚಿರ ಸಾರಾಯುಸಂಪತ್ತಿ || ೩೦ ||

ಚರಿತನಾಯಕಗೆ ಮಂಗಲ

ಇದ್ದು ಇಲ್ಲದ ರೀತಿ ರಮ್ಯತೆ
ಯಿದ್ದು ಬಿಡದಿಹ ಹರ್ಷ ಹೊನಲತೆ
ಹೊದ್ದಿ ಹೊದ್ದದ ಭಾವ ಸೂಕ್ಷ್ಮಾಚಾರ ಕಿರಣಲತೆ ||
ಬದ್ದ ಬಯಲಾಚಾರ ಸರಸತೆ
ಶಬ್ದ ಮುಗ್ದ ವಿಶುದ್ಧ ಸ್ಥಿತಿಜೊತೆ
ಸಿದ್ಧಿ ಚಿನ್ಮಯ ಚಿದ್ವಿಲಾಸಗೆ ಹೃದಯ ಮಂಗಲವು || ೩೧ ||

ಕೃತಿಯಾರ್ಪಣೆ

ಶೃತಿ ವಚನ ಶಿವಯೋಗ ಭೂಷಣ
ಪತಿತಪಾವನ ಪ್ರಮಥ ಜಂಗಮು
ತತಿಗೆ ಚೇತನ ಹಾನಗಲ್ಲ ಕುಮಾರಪುಂಗವಗೆ ||
ಸತತ ಕಾಯಕ ಪಿಡಿದ ಸ್ಥಿತಿಯೊಳು
ಮತಿಗೆ ನಿಲುಕಿದ ಅಳಿಲು ಸೇವೆಯು
ಕೃತಿಸಮರ್ಪಿತವಿಂದು ತೃಪ್ತಿಯ ಸೌಖ್ಯಪಥಸ್ಮರಿಸಿ || ೩೨ ||

ಮಂಗಲಂ ಪ್ರಭು ಬಸವಭೂತಿಗೆ
ಮಂಗಲಂ ಮಹಚನ್ನಬಸವಗೆ
ಮಂಗಲಂ ಮಹದನ್ನದಾನಿಗೆ ಚರಿತನಾಯಕಗೆ ||
ಮಂಗಲಂ ಅಡವೀಶ ನಿರಘಗೆ
ಮಂಗಲದುವೆ ಮಹಾಂತರಿಗೆ ಸ
ನ್ಮಂಗಲಂ ನಿರುಪಾಧಿ ತಾತ್ವಿಕ ತೀರ್ಥ ಲಕ್ಷಿತಗೆ || ೩೩ ||

ಮಾಲೆ ಇದು ಮೂರೈದು ಎಳೆಗತಿ
ಮೇಳಜೊತೆ ಸುಮಬಂಧ ಕ್ರಮದು
ಯ್ಯಾಲೆ ಸೂಕ್ತಿಗಳೆಂಟುನೂರರ ಮೇಲೆ ಎಂಟೆಂಟು ||
ಕೂಳು ಭಂಟಗೆದಕ್ಕದೀ ನುಡಿ
ಮೇಳ ವಿದ್ಯಾಪೀಠಕದು ನಿಜ
ಬಾಳುವವರಿಗೆ ಮಾರ್ಗದರ್ಶಕ ಪಾಠ ಪರಿಸರಕೆ || ೩೪ ||

ಶುದ್ಧವಹುದಂಕಲಗಿಯಡವೀ
ಸಿದ್ಧ ಚರಣಾಶ್ರಯದಿ ಸ್ಥಾಪಿಸ
ಲೆದ್ದ ಪುರ ಮರೆಗುದ್ದಿ ಮಠವಿದು ಅಡವಿಸಿದ್ಧೇಶ ||
ಬದ್ದಿದಕೆ ಗುರುವಂಶದೊಳು ಕ್ರಮ
ಬದ್ದ ಗುರು ಗುರುಪಾದ ಕೃಪೆಯಿಂ
ದೆದ್ದ ಗುರುನಿರುಪಾಧಿ ಕೃತಿಯೊಳ್ ಗತಿಯು ಹದಿನೈದು || ೩೫ ||

ಗಂಥ ಸ್ಥಲ ಹದಿನೈದು ಹೊಂದಿಸಿದ ಪದದೆಸಳು
ವೃಂದೆಟುನೂರ ಜೊತೆಗೆ ಅರವತ್ತೈದು
ಮುಂದಿಡುತೆ ಸಾಗಿ ಮಂಗಳವು ||

ಅಂತೂ ಸ್ಥಲ ೧೫ ಕ್ಕಂ ಪದ ೩೫ ಕ್ಕಂ ಒಟ್ಟು ಪದ ೮೬೫ ಕ್ಕಂ
ಮಂಗಲಂ

# ಮಂಗಲ

ರಾಗ–ಬಿಭಾಸ ತಾಳ–ದೀಪಚಂದಿ

ಮಂಗಲಾರತಿ ಬೆಳಗ ಬನ್ನಿರೆ | ಕಂಗಳ ಮೂರ್ತಿಗೆ ||
ಮಂಗಳಾರತಿ ಬೆಳಗು ಬನ್ನಿರೆ | ಸಂಗಮನ ಸತ್ಸಂಗ ಪ್ರಿಯರು |
ತುಂಗ ತತ್ಸುಖ ಹೊಂದಿ ಸಮರಸ | ರಂಗಮಯ ರಸರಂಗಶರಣರು ||

ಹರನ ಚಿತ್ಕಳೆ ತೇಜ ಚಿನ್ಮಯದ | ಹಿರಿಮೆ ಗುರು ನಂಜೇಶನಾತ್ಮಜ ಪ್ರಿಯ ಚನ್ನವರ |
ಚಾರು ರಸಮಯ ಹಾಲವರ್ತಿಯ | ಧಾರೆ ಪಾವನ ಮಾಡಿ ಹರಪುರ |
ಧೀರನಾಯಕ ಸೋಮಶೇಖರ ಮಹಮಹಾಂತ ಪ್ರಶಾಂತನಿಗೆ || ೧ ||

ಹರವಿ ಮಠದ ಪುರಾಣದಯ್ಯನಿಗೆ| ಹರಿಸಿ ನೆಲಿಸಿದ ಲಿಂಗನಾಯ್ಕನ ಹಳ್ಳಿ ತಟದೊಳಗೆ |
ಪರಮಗುರುಕುಲ ನೆಲಿಸಿ ನೀರಜ | ಹಿರಿಮೆ ತತ್ವ ಶಿವಾನುಭವವನು |
ಭರಿಸಿದಂತಹ ಭೂರಿಭೂಷಣ ವೇದವಲ್ಲಭ ಪ್ರಭೆಗೆ ಮಂಗಲ || ೨ ||

ಶಾಂತವೀರ ಮಹಾಂತ ಮಹಿಮರಿಗೆ | ಶಿವಬಸವಸ್ವಾಮಿಗೆ |
ಶಾಂತ ಶಿವಕವಿಯಾದ ಬಸವನಿಗೆ ||
ಶಾಂತಮತಿ ಚನ್ನಪ್ಪ ಶರಣಗೆ | ತೋಷ ರಾಜೋಟೇಶ ಪರಮಗೆ |
ಅಂತಃಕರಣದಿ ತತ್ವಗಲಿಸಿದ ಪಾವನಾತ್ಮಕ ಧೀರಯೋಗಿಗೆ || ೩ ||

ಕೆಳದಿ ಭೂಪಗೆ ರುದ್ರಗೌಡರಿಗೆ | ನಲುಮೆಯಲಿ ಕಾಯಕ
ಬಸವ ತತ್ವವ ಬೋಧ ಮಾಡಿದಗೆ ||
ಸುಳಿದು ತುಂಗಾಭದ್ರೆಯೊಳು ತಪ | ದಿಳಿದು ಸಾಗಿರೆ ಮೇಘ ಸುರಿದಿರೆ |
ಹೊಳೆಯು ಬಯಲೊಳು ಬಯಲ ಮೂರ್ತಿಗೆ| ತಿಳಿದು ಮಾಡಲುಬೇಕು ಮಂಗಲ || ೪ ||

ಪರಮ ಪುರದಂಕಲಗಿ ಸಾಂಪ್ರದದ | ಮರೆಗುದ್ದಿ ಭೂಷಿತ
ಜ್ಞಾನ ದಾಸೋಹಾದಿ ಸಂಪದದ |
ನಿರತ ರುಚಿಯೊಳು ನಡೆಯಲೀತಗೆ | ಸರಸಲೀಲೆಯ ಬರೆವ ಭೂತಿಯ |
ಝುರಿಯ ಪುಟಿಸಿದ ಹರನ ಸಮಯಾಚಾರಿ ನಿರುಪಾಧೀಶವರಗೆ || ೫ ||



# ಸಂಕ್ಷಿಪ್ತ ಗ್ರಂಥ ಸೂಚಿ

| ಹೆಸರು | ಸ. ಸೂ. | ಲೇಖಕ–ಸಂಪಾದಕರು |
|---|---|---|
| ೧. ವೀರಶೈವ ದಾರ್ಶನಿಕ ಸಿದ್ಧಾಂತ | ವೀ.ದಾ.ಸಿ. | ಜ. ಅನ್ನದಾನೀಶ್ವರ ಮಹಾಸ್ವಾಮಿಗಳು |
| ೨. ಲಿಂಗನಾಯಕನ ಹಳ್ಳಿ ಚನ್ನವೀರ | | |
| ಶಿವಯೋಗಿಗಳು | ಚ.ಶಿ. | |
| ೩. ಶಿವಯೋಗ ಮಂದಿರ | ಶಿ.ಮಂ. | ,, |
| ೪. ವಚನ ಸಂಪದ | ಸಂಪದ | ,, |
| ೫. ಪತ್ರಗಳು | | ,, |
| ೬. ಅಲ್ಲಮಾ ಶಬ್ದ ಬ್ರಹ್ಮ | ಅಲ್ಲಮಾ | ,, |
| ೭. ಸಂಸ್ಕಾರ | ಸಂ. | ಡಾ. ಜ.ಚ.ನಿ. |
| ೮. ರುದ್ರಾಧ್ಯಯನ | ರುದ್ರ | ,, |
| ೯. ಶಿವಾದ್ವೈತ ದರ್ಶನ | ಶಿ.ದ. | ,, |
| ೧೦. ಜೀವನಾಗಸದ ಚಿದ್ರವಿ | ಚಿದ್ರವಿ | ,, |
| ೧೧. ಬಾಲಲೀಲಾ ಮಹಾಂತೇಶ್ವರ | | ,, |
| ಪುರಾಣ | ಬಾ.ಮ.ಪು. | ದ್ಯಾಂಪುರ ಚನ್ನಕವಿ |
| ೧೨. ಪ್ರಭುಲಿಂಗ ಲೀಲೆ | ಪ್ರಭು | ಚಾಮರಸ |
| ೧೩. ಚನ್ನಬಸವಣ್ಣನವರ ವಚನಗಳು | ಚ.ಬ.ವ. | ಸಂಪಾದಕ–ಡಾ. ಆರ್. ಸಿ ಹಿರೇಮಠ |
| ೧೪. ಮಹದೇವಿಯಕ್ಕನ ವಚನಗಳು | ಅಕ್ಕನ. ವ. | ,, |
| ೧೫. ಷಟಸ್ಥಲ ಜ್ಞಾನಸಾರಾಮೃತ | ಷ.ಜ್ಞಾ.ಸಾ. | ,, |
| | ಸಿ.ವ. | |
| ೧೬. ಅಲ್ಲಮಪ್ರಭು ವಚನಗಳು | ಅಲ್ಲಮ ವ. | ,, |
| ೧೭. ಶೂನ್ಯ ಸಂಪಾದನೆ | ಶೂನ್ಯ | ,, |
| ೧೮. ದೀಕ್ಷಾ ಬೋಧೆ | ದೀಕ್ಷಾ | ಕೆರೆಯ ಪದ್ಮರಸ |
| ೧೯. ಮೈಲಾರ ಬಸವಲಿಂಗರ | | |
| ಸಮಗ್ರ ಕೃತಿಗಳು | | ಜ. ತೋಂಟದಾರ್ಯ ಮಠ ಗದಗ |
| ಗುರುಕರುಣ ತ್ರಿವಿಧಿ | ಗು.ಕ.ತ್ರಿ. | |
| ಷಟಸ್ಥಲ ನಿರಾಭಾರಿ ವೀರಶೈವ | | |
| ಸಿದ್ಧಾಂತ | ಷ.ನಿ.ವೀ.ಸಿ. | |
| ಷಟಸ್ಥಲ ಜ್ಞಾನಾನುಭಾವ | ಷ.ಜ್ಞಾ | |
| ಲಿಂಗ ಪೂಜಾವಿಧಾನ | ಲಿಂಗಪೂಜಾ | |
| ಶಿವಾನುಭವದರ್ಪಣ | ಶಿ ದರ್ಪಣ | |
| ೨೦. ಅಷ್ಟಾವರಣ ವಿವೇಕ | ಅ.ವಿ. | ವೈ. ನಾಗೇಶ ಶಾಸ್ತ್ರಿಗಳು |
| ೨೧. ಪಂಚಾಚಾರ ಪ್ರಕಾಶಿಕೆ | ಪ ಪ್ರ. | ,, |
| ೨೨. ಷಟ್‌ಸ್ಥಲ ತತ್ವದರ್ಪಣ | ಷ.ತ. | ,, |
| ೨೩. ಕೈವಲ್ಯ ದರ್ಪಣ | ಕೈ.ದ. | ಬಾಲಲೀಲಾ ಮಹಾಂತರು |
| ೨೪. ಮಹಾಂತ | ಮಹಾಂತ | ಇಲಕಲ್ಲ ಮಹಾಂತ ಸ್ವಾಮಿಗಳ ಸಂಪುಟ |
| ೨೫. ಕೈವಲ್ಯ ಪದ್ಧತಿ | ಕೈ.ಪ. | ನಿಜಗುಣಶಿವಯೋಗಿ |
| ೨೬. ಕೈವಲ್ಯ ಕಲ್ಪವಲ್ಲರಿ | ಕೈ.ಕ. | ಸರ್ಪ ಭೂಷಣರು |

| | | |
|---|---|---|
| ೩೭. ಶತಕತ್ರಯ | ಶತಕ | ಮುರಘಾಮಠ ಧಾರವಾಡ |
| ೩೮. ಸಿದ್ಧಾಂತ ಶಿಖಾಮಣಿ | ಸಿ.ಶಿ | ಕಾಶೀನಾಥ ಶಾಸ್ತ್ರಿಗಳು |
| ೩೯. ವೀರಶೈವ ತತ್ವಪ್ರಕಾಶ | ವೀ.ತ. | ಶಿ. ಶಿ. ಬಸವನಾಳ |
| ೪೦. ಶರಣ ಚರಿತಾಮೃತ | ಶ ಚ. | ಡಾ. ಸಿದ್ಧಯ್ಯ ಪುರಾಣಿಕ |
| ೪೧. ಬಸವಣ್ಣವರ ಷಡುಸ್ಥಲ ವಚನಗಳು | ಬ.ವ. | ಶಿ. ಶಿ. ಬಸವನಾಳ |
| ೪೨. ವೀರಶೈವ ವೈಚಾರಿಕ ವಿವೇಚನೆ | ವೀ.ವೈ. | ಡಾ ಎಚ್. ತಿಪ್ಪೇರುದ್ರಸ್ವಾಮಿ |
| ೪೩. ಮನುಸ್ಮೃತಿ | ಮನು | ಚಕ್ರಕೋಟಿ ಈಶ್ವರ ಶಾಸ್ತ್ರಿ |
| ೪೪. ಯಜ್ಞವಲ್ಕ್ಯ ಸ್ಮೃತಿ | ಯಜ್ಞ | ನಾಗೇಶ ಕುಲಕರ್ಣಿ |
| ೪೫. ಉಪನಿಷದ ಭಾವಧಾರೆ | | ಸೋಮನಾಥಾನಂದ |
| ೪೬. ಯೋಗದರ್ಶನ | ಪಾ.ಸೂ. | ಗೀತಾ ಪ್ರೆಸ್ |
| ೪೭. ಮಹಾಭಾರತ | ಭಾರತ | ,, |
| ೪೮. ಭಗವದ್ಗೀತಾ | ಗೀತಾ | ,, |
| ೪೯. ಗಣಪತಿ ಸಂಖ್ಯಾಶಾಸ್ತ್ರ | ಗ.ಸ. | ಭಾನುಪ್ರಿಯ |
| ೫೦. ದಮ್ಮಪದಂ | ದಮ್ಮ | ಡಾ. ರಾಹುಲ ಸಾಂಕೃತ್ಯಾಯನ |




# ಶುದ್ಧಿ ಪತ್ರಿಕೆ

| ಪುಟ | ಸಾಲು | ತಪ್ಪು | ಒಪ್ಪು |
| --- | --- | --- | --- |
| ೩ | ೨೫ | ವರಿ | ಪರಿ |
| ೫ | ೧೨ | ಮಾಡಿದೆ | ಮಾಡಿರೆ |
| ೫ | ೩೦ | ಮಾಡವ | ಮಾಡುವ |
| ೬ | ೧೫ | ಸರಳೇನದು | ಸರಳೆನದು |
| ೭ | ೧೨ | ಶರಣರು | ಶರಣಗಣ |
| ೭ | ೧೫ | ಹಾಕಿದೆ | ಹಾಕಿರೆ |
| ೧೮ | ೧೭ | ಸ್ವಾತ್ಮಾ | ಸ್ವಾತ್ಮ |
| ೧೯ | ೧೮ | ಬಲ್ಗತನ | ಬಲ್ಲತನ |
| ೩೦ | ೧ | ಶಕ್ರಿ | ಶಕ್ತಿ |
| ೩೬ | ೨೪ | ತಪಸ್ದಿ | ತಪಸ್ವಿ |
| ೩೭ | ೫ | ಪ್ರಖ್ಯಾತನ್ಯೆ | ಪ್ರಖ್ಯಾತನೈ |
| ೩೭ | ೨೧ | ಗತಿಯನುಭವವಿತ್ತು | ಗತಿಯೊಳನುಭವವಿತ್ತು |
| ೩೯ | ೧ | ಸಮಯು ತಪ್ಪಿದ | ಸಮಯದು ತಪ್ಪಿ |
| ೪೦ | ೧೭ | ಲಕ್ಷುಮು | ಲಘುಮು |
| ೪೩ | ೧೮ | ಶಕ್ತಿಗಾಸ್ವದ | ಶಕ್ತಿಗಾಸ್ಪದ |
| ೪೮ | ೪ | ರಂಗಬವುಕರವಿತ | ರಂಗಬಹುಕರವೀರ |
| ೪೮ | ೨೭ | ಸತ್ನಾಯಕಂ | ಸತ್ಕಾಯಕಂ |
| ೪೮ | ೩೦ | ವ್ಯೋಮನಲ್ಲಮ್ಮ | ವ್ಯೋಮನಲ್ಲಮ |
| ೪೯ | ೬ | ನಮ | ಸಮ |
| ೫೨ | ೧೩ | ನೆಚ್ಚಂತೆ | ನೆಚ್ಚರತೆ |
| ೫೩ | ೬ | ಚರಣಡೆ | ಚರಣಡೆಗೆ |
| ೫೪ | ೨೯ | ಚಿಸ್ಮುಖಿ | ಚಿನ್ಮುಖಿ |
| ೫೫ | ೫ | ರಾಗವಿತಲೇನ್ | ರಾಗವಿರಲೇನ್ |
| ೫೬ | ೧೨ | ವಿಧಿನುಸಾರದಾಚಾರ | ವಿಧಿಗನುಸಾರದಾಚಾರ |
| ೫೬ | ೩೦ | ಮಾಲೆ | ಮೊಲೆ |
| ೫೭ | ೨೩ | ಗೋಲವಿನಿಂ | ಗೊಲವಿನಿಂ |
| ೫೮ | ೨೭ | ಚನ್ಯಗವ | ಚನ್ಪಸವ |
| ೫೯ | ೬ | ಮಾರ್ಮಿಕನ | ಮಾರ್ಮಿಕ |
| ೬೧ | ೨೫ | ಮಠವಾ | ಮಠದಾ |
| ೬೩ | ೧೭ | ಭಾರಿ ನೀನೆ | ಭೂರಿ ನೀನೇ |
| ೬೪ | ೨೭ | ಸನ್ಮಾನದಿ | ಸನ್ಮನದಿ |
| ೬೪ | ೧೬ | ಅರಿಯುತನನಧಿಕಾರ | ಅರಿಯುತವನಧಿಕಾರ |
| ೬೭ | ೧೮ | ಸಾಧು ತತ್ವಾನುಭವಧಿಂ | ಸಾಧು ಸಲೆ ತತ್ವಾನುಭವದಿಂ |
| ೬೭ | ೨೬ | ತಿರುವವದು | ತಿರುವವರು |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೬೭ | ೩೦ | ಯರಿತರ | ಯರಿತು |
| ೬೮ | ೫ | ಗತಿಯ ವಂಶವು | ಗತಿಯಪರೂಪು |
| ೭೧ | ೨ | ಧಂಸಿದ | ಧರಿಸದ |
| ೭೩ | ೨೩ | ಪ್ರೇಮಯಂದಿನ | ಪ್ರೇಮಿಯಂದಿನ |
| ೭೪ | ೫ | ಗೋಷ್ಠಿಗ | ಗೋಷ್ಠಿಗೆ |
| ೭೪ | ೧೩ | ಲಿಂಗಸುಖವಿದ್ದ ಬಾಧಿತನುಭವಿ | ಲಿಂಗಸುಖವಿದಬಾಧಿತನುಭವಿ |
| ೭೭ | ೧ | ತೋರಿಸಲ್ನೆ | ತೋರಿಸಲ್ಕೆ |
| ೭೭ | ೯ | ಯಾದಧಿಕಾರ | ಯಾರಧಿಕಾರ |
| ೭೭ | ೧೨ | ಹರಿವಿಂ | ಹರಿಯಿಂ |
| ೭೮ | ೨೮ | ಪತಂಜಲಿಯಿ | ಪತಂಜಲಿಯ |
| ೭೯ | ೩ | ತನ್ನರಸನಲ್ಲಿಹನೆಂಬ | ತನ್ನರಸನೆಲ್ಲಿಹನೆಂಬ |
| ೭೯ | ೨೫ | ಬತಿಕ | ಬಳಿಕ |
| ೮೦ | ೬ | ಕಾಲ | ಕಾಲವು |
| ೮೦ | ೨೩ | ಕಂತ | ಕಂಟ |
| ೮೦ | ೨೭ | ಒಮ್ಮಾತವೇ | ಒನ್ಮತವೇ |
| ೮೨ | ೨೪ | ಮುಟ್ಟದ | ಮುಟ್ಟಿಡ |
| ೮೪ | ೮ | ಭರತ | ಬರುವ |
| ೮೫ | ೨೩ | ಭಿಸಿತ | ಭಸಿತ |
| ೮೭ | ೨ | ಭೂಮ | ದ್ಭೂಮ |
| ೮೭ | ೬ | ಷಾಮಿ | ಷ್ಕಾಮಿ |
| ೯೭ | ೨೪ | ಮಯ | ಮಾಯಾ |
| ೯೮ | ೨೫ | ಮುರಿವು | ಮೂರಿವು |
| ೯೯ | ೬ | ರಹಿತಾತ್ಮಾ | ರಹಿತಾತ್ಮ |
| ೯೯ | ೧೮ | ಗೆರಡಶಿವನೇ | ಗೆರಡಕಿವನೇ |
| ೧೦೦ | ೧೦ | ಅನಿತರ | ಅನಿತು |
| ೧೦೧ | ೧೭ | ಮಹಿಮೆಯಹುದಿಲ್ಲ | ಮಹಿಮೆಯಹುದಲ್ಲಿ |
| ೧೦೨ | ೩೦ | ಯೊಳ | ಯಾಳ |
| ೧೦೬ | ೨೬ | ಜಾತು | ಔತು |
| ೧೦೭ | ೮ | ಜಂಗಮಾರ್ಯನನ್ನಾದಾನಿಯ | ಜಂಗಮಾರ್ಯನು ಅನ್ನದಾನಿಯ |
| ೧೦೮ | ೧೨ | ನೀನೆಪಡಳಿದು ತಾನಾರು | ನೀನೆರಡಳಿದ ತಾನಾದ |
| ೧೦೯ | ೫ | ದಮಯರವರು ನೆರಳದಂತೆ | ದಾಮಯರವರು ನೆರಳಿನಂತೆ |
| ೧೧೧ | ೬ | ಭಕ್ತರು | ಭಕ್ತರಾ |
| ೧೧೧ | ೨೦ | ಮಾಡಿರೆ | ಮೂಡಿರೆ |
| ೧೧೬ | ೨ | ಭಕ್ತಲಿಂಗವು | ಭಕ್ತ-ವೃಂದ ಪ್ರ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೧೬ | ೩೦ | ಬಿಡಿಸುತೆ | ಬಡಿಸುತೆ |
| ೧೧೯ | ೧೨ | ಗೊಳ್ಳದದು | ಗೊಳ್ಳುವದು |
| ೧೧೯ | ೧೪ | ಬಾಲ | ಜಾಲ |
| ೧೧೯ | ೩೦ | ಸಾಮರಸ್ಯಾದಿ | ಸಾಮರಸ್ಯದಿ |
| ೧೨೩ | ೮ | -ವರೆಗು | -ವರೆಗೂ |
| ೧೨೫ | ೧೯ | ಇಷ್ಠಿಯಲ್ಲಿ | ನಿಷ್ಠೆಯಲ್ಲಿ |
| ೧೩೭ | ೨೪ | ಕ್ಷೈನಿಯಯೂಕೆ | ಕ್ಷಣಿಕೆ |
| ೧೪೦ | ೧ | ಯೆನ್ನುತೆ | ಯೆನುತೆ |
| ೧೪೧ | ೧೭ | ಮಿಂಚನ | ಮಿಂಚು |
| ೧೪೨ | ೯ | ನಾಲಿಫಲ | ನಾರಿಫಲ |
| ೧೪೨ | ೨೩ | ಲುಬ್ದಿ | ಲುಬ್ಬಿ |
| ೧೪೩ | ೧೬ | ತಿಹುದೆಲ್ಲಿ ಸಿರಿಸರಬರ | ತಿಹುದೆಲ್ಲ ಸಿರಿ ಸಂಬರ |
| ೧೪೪ | ೧೯ | ಕಿಚ್ಚಿ | ಕಿಚ್ಚ |
| ೧೪೫ | ೧೧ | ಪುರುಷನ; ವಪ್ರತಿ | ಪುರುಷನವ ಪ್ರತಿ |
| ೧೪೭ | ೧೩ | ವಾದಬಾರ್ದ ಪ | ಓದಬಾರ್ದ ಪ |
| ೧೪೭ | ೧೫ | ಕಟ್ಟಳೆ | ಕಟ್ಟದೆ |
| ೧೫೦ | ೭ | ಬಿಡುವವನೆ | ಬಿಡುವವಗೆ |
| ೧೫೧ | ೧೭ | ಸರ್ಪಗೆ | ಸರ್ವಗೆ |
| ೧೫೩ | ೧೧ | ಚಿದ್ದನ ಸಜನಿಗದು | ಚಿದ್ಘನ ಸುಜನಿಗದು |
| ೧೫೯ | ೧೫ | ನಿರಕ್ಷತೆ | ನಿರಘುತೆ |
| ೧೬೩ | ೨೪ | ದೊಪ್ಪಿದಾ | ಗೊಪ್ಪಿದಾ |
| ೧೬೪ | ೧೬ | ಆರತೆ | ಅಳತೆ |
| ೧೬೫ | ೧೮ | ಪುಂಶ್ಚಿಲಿಯ | ಪುಂಶ್ಚಲಿಯ |
| ೧೬೭ | ೫ | ಕಾವಿಗೆ ಶೋಭೆಯಲ್ಲಿದೆ | ಕಾವಿಗೆ ಶೋಭೆಯಲ್ಲದೆ |
| ೧೬೭ | ೧೬ | ನರಿಹೋಯ್ತೆ | ಸರಿಹೋಯ್ತು |
| ೧೬೮ | ೨೩ | ಲಿಂಗದೊಳವ | ಲಿಂಗದೊಳು |
| ೧೭೧ | ೧ | ಪ್ರತಿರೂಪನಲ್ಲವು | ಪ್ರತಿರೂಪನಲ್ಲಮು |
| ೧೭೨ | ೬ | ನೀಃಆಯಾರಾರಕ್ಕೆ | ನೀತಿಯಾಚಾರಕ್ಕೆ |
| ೧೭೨ | ೩೦ | ಸಖ್ಯಾ | ಸಖ್ಯ |
| ೧೭೫ | ೬ | ವಾಂಗ | ದಂಗ |
| ೧೭೬ | ೨೧ | ಗೀವನ | ಗಿವನ |
| ೧೭೬ | ೨೪ | ತಾಗಲು | ತಗಲು |
| ೧೭೯ | ೨ | ಯಂತ್ರೈದಾರ | ಯಂಟೈದಾರ |
| ೧೮೩ | ೩ | ತನೆರಸ | ತೆನೆರಸ |

# ಶ್ರೀವಾಣಿಯಿಂದ

ವೀರಶೈವದ ಪಂಚಾಚಾರ ಷಟ್‌ಸ್ಥಲ ಮಾರ್ಗೋ
ದ್ಧಾರ ನಿಜಸುಖದ ಸಾರ ನಡೆನುಡಿ ಚನ್ನ
ವೀರ ಮದ್ಗುರುವೆ ಕೃಪೆಯಾಗು ||ಗು.ತ್ರಿ. ೩೩೩||

ಹದಿನೆಂಟನೆಯ ಶತಮಾನದ ಪರಮ ಶಿವಾನುಭಾವಿಗಳೂ, ಮಹಾತಪಸ್ವಿಗಳೂ, ಸಾಕ್ಷಾತ್ ಪರಶಿವನ ಸ್ವರೂಪಿಗಳೂ, ವೀರಶೈವ ಸಿದ್ಧಾಂತದಂತೆ ಅಷ್ಟಾವರಣವೆ ಅಂಗ ವಾಗಿಸಿಕೊಂಡು ಪಂಚಾಚಾರಗಳನ್ನು ಪ್ರಾಣವಾಗಿಸಿಕೊಂಡು, ಷಟ್‌ಸ್ಥಲ ಮಾರ್ಗ ದಲ್ಲಿ ಮುನ್ನಡೆದು ಷಟ್‌ಸ್ಥಲವನ್ನು ಪುನರುದ್ಧಾರಗೈದವರು ಲಿಂಗನಾಯಕನ ಹಳ್ಳಿಯ ಪರಮ ಜಂಗಮ ಶ್ರೀ ಚನ್ನವೀರ ಮಹಾಸ್ವಾಮಿಗಳು. ಇವರು ಸಚ್ಚಿದಾನಂದ ಸ್ವರೂಪರೂ, ಸತ್ಕ್ರಿಯಾ ಸುಜ್ಞಾನ ಪ್ರಕಾಶಕರೂ, ಭಕ್ತರಂತ[illegible]ರವ ಕ[illegible]ವಧಿ ನಾಥರೂ, ಮುಕ್ತಿ ಮಾರ್ಗವನ್ನು ತೋರಿಸುವಲ್ಲಿ ಪ್ರಬುದ್ಧರೂ, ವೀರಶೈವ ನಡೆ-ನುಡಿಯೊಂದಾದ ಶಿವಯೋಗ ಬಲ್ಲಿದರೂ, ಲಿಂಗಭೋಗೋಪಭೋಗಿಗಳೂ, ಪರಶ[illegible] ದಾಚರಣೆಯ ನಿಜಮರ್ಮವನರಿತು ಮೀರಿದಾಚರಣೆಯುಳ್ಳವರೂ, ವೀರಶೈವ ಮಹಾ ತತ್ವವನ್ನು ಯಥಾವತ್ತಾಗಿ ಬೋಧಿಸುವ ಮಹಾಗುರುಗಳೂ, ಲಿಂಗಕಿರಣದೊಬ್ಬ ಳಿಯ ಸುಜ್ಞಾನಚಿಜ್ಜ್ಯೋತಿಸ್ವರೂಪಿ ಪರಮ–ನಿರಂಜನ-ಜಂಗಮ-ಪುಂಗವರಾಗಿದ್ದ ರೆಂದರೆ ಅತಿಶಯವೇನಲ್ಲ.

ಪರಮ ಪೂಜ್ಯ ಚನ್ನವೀರ ಮಹಾಸ್ವಾಮಿಗಳು ಅನುಷ್ಠಾನಗೈದ ತಾಣವೆ ಲಿಂಗನಾಯಕನ ಹಳ್ಳಿಯು. ಇದು ಪರಮ ಜಂಗಮ ಕ್ಷೇತ್ರವೆನಿಸಿತು. ಶಿವಾನುಭವದ ಮಹಾಕೇಂದ್ರವೆನಿಸಿತು. ತುಂಗಭದ್ರಾ ತೀರದಲ್ಲಿ ಮೆರೆಯುವ ಈ ಕ್ಷೇತ್ರ ಅವಿಮುಕ್ತ ಕ್ಷೇತ್ರವಾಯಿತು. ಇಂದಿಗೂ ಇದು ನೈಜ ಜಂಗಮ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ.

ಜಮಖಂಡಿ ತಾಲೂಕಿನ ಮರೆಗುದ್ದಿಯ ವಿರಕ್ತ ಮಠದ ಶ್ರೀ ನಿರುಪಾಧಿ ಸ್ವಾಮಿ ಗಳು ಪಂಡಿತರು, ಪದವೀಧರರು. ಶರಣ ಸಾಹಿತ್ಯಕ್ಕಿಂತ ಹೆಚ್ಚಾಗಿ ವೇದಾಂತ ವಿಚಾರದಲ್ಲಿ ನಿಷ್ಣಾತರಾಗಿದ್ದರು. ಶ್ರೀ ಸನ್ನಿಧಿಯ ಸಂಪರ್ಕದಿಂದಾಗಿ, ಶರಣರ ಕೃತಿಗಳನ್ನು ಅಧ್ಯಯನ ಮಾಡಿ ಶರಣ ತತ್ವವನ್ನು ರಚಿಸುವ ಹಂಬಲ ಬೆಳೆದಿದೆ. ತಮ್ಮ ದಾಸೋಹ ಕಾಯಕದಲ್ಲೂ ಸಾಹಿತ್ಯ ಸೃಜಿಸುವ ತವಕ ಹೆಚ್ಚಿದೆ- "ಗಣೇಶ ಪುರಾಣ"ವನ್ನು ಬರೆದು ಇತರ ಕೃತಿಗಳನ್ನು ತಯಾರಿಸಿದ್ದಾರೆ. ಲಿಂಗನಾಯಕನ ಹಳ್ಳಿಯ ಪೂಜ್ಯರ ಚರಿತ್ರೆ ಯನ್ನು ಭಾಮಿನಿ ಷಟ್‌ಪದಿಯಲ್ಲಿ ರಚಿಸಲು ಇಚ್ಛಿಸಿದಾಗ ನಮಗೂ ಸಂತಸವಾಯಿತು. ಚನ್ನವೀರ ವಿಲಾಸವನ್ನು ಶ್ರೀಗಳು ತಾತ್ವಿಕವಾಗಿ, ಪ್ರಾಮಾಣಿಕವಾಗಿ ರಚಿಸಿದ್ದಾರೆ. ಇವರಿಂದ ಇನ್ನೂ ಹೆಚ್ಚಿನ ಕೃತಿಗಳು ಮೂಡಿಬರಲಿ.